

**ಮಹಾತ್ಮ ಗಾಂಧಿಯವರು**

(ಪಡಿಯಚ್ಚು : ‘ಪ್ರಜಾಮತ’ದ ಕೃಪೆಯಿಂದ)

# ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ

## ಭಾಗ ೧

**ಮಹಾತ್ಮ ಗಾಂಧಿ**

ಅನುವಾದಕರು :
**ಎಸ್. ವಿ. ಕೃಷ್ಣಮೂರ್ತಿರಾವ್**

ದೊರೆಯುವ ಸ್ಥಳ :
**ಕಾವ್ಯಾಲಯ**
**ಪ್ರಕಾಶಕರು**
**ಶಿವಮೊಗ್ಗ**

೧೯೪೧

# ಮುನ್ನುಡಿ

ಶ್ರೀ ವಾಲ್ಜಿ ದೇಸಾಯಿ ಅವರ ಭಾಷಾಂತರವನ್ನು ನಾನು ನೋಡಿದ್ದೇನೆ. ಗುಜರಾತಿ ಮೂಲದ ಛಾಯೆ ಭಾಷಾಂತರದಲ್ಲಿ ಅಚ್ಚಳಿಯದೆ ಉಳಿದಿದೆ ಎಂದು ಭರವಸೆ ಕೊಡಬಲ್ಲೆ. ಮೂಲ ಅಧ್ಯಾಯಗಳೆಲ್ಲ ನಾನು ಜ್ಞಾಪಕದಿಂದ ಬರೆದವು. ಕೆಲವನ್ನು ಯರವಾಡ ಸೆರೆಮನೆಯಲ್ಲೂ ಉಳಿದವನ್ನು ಸೆರೆಮನೆಯಿಂದ ಅನಿರೀಕ್ಷಿತವಾಗಿ ಬಿಡುಗಡೆಯಾದ ಮೇಲೂ ಬರೆದೆ. ಶ್ರೀ ದೇಸಾಯಿ ಅವರಿಗೆ ಈ ವಿಷಯ ಗೊತ್ತಿದ್ದುದರಿಂದ ಅವರು 'ಇಂಡಿಯನ್ ಒಪಿನಿಯನ್' ಪತ್ರಿಕೆಯ ಹಳೆಯ ಸಂಪುಟಗಳನ್ನು ಓದಿ ನೋಡಿ, ಮರಿತು ತಪ್ಪಿದ ಕಡೆಗಳಲ್ಲಿ ತಿದ್ದಿದ್ದಾರೆ. ಮುಖ್ಯ ಅಂಶಗಳಲ್ಲಿ ಎಲ್ಲೂ ತಪ್ಪಿಲ್ಲವೆಂಬುದು ಸಂತೋಷದ ಸಂಗತಿ. ಸತ್ಯಶೋಧನೆಯ ಕಾರ್ಯ ಹೇಗೆ ಮುಂದುವರಿದಿದೆ ಎಂಬುದನ್ನು ಕೂಲಂಕಷವಾಗಿ ತಿಳಿದುಕೊಳ್ಳಬೇಕಾದರೆ, ವಾರ ವಾರವೂ ನಾನು ಬರೆಯುತ್ತಿರುವ ಸತ್ಯಶೋಧನೆಯ ಅಧ್ಯಾಯಗಳನ್ನು ಓದುತ್ತಿರುವವರು 'ಸತ್ಯಾಗ್ರಹ'ವನ್ನು ಕುರಿತ ಈ ಅಧ್ಯಾಯಗಳನ್ನೂ ಓದಲು ಮರೆಯಲಾಗದು.

ಸಬರ್ಮತಿ
೨೬–೪–೧೯೨೮

**ಎಂ. ಕೆ. ಗಾಂಧಿ.**

# ಅನುಕ್ರಮಣಿಕೆ


| | | | |
|---|---|---|---|
| i. | ಮುನ್ನುಡಿ (ಇಂಗ್ಲಿಷ್ ಭಾಷಾಂತರಕ್ಕೆ) | .... | iii |
| ii. | ಪೀಠಿಕೆ (ಮೂಲ ಗ್ರಂಥಕ್ಕೆ) .... | .... | vii |
| iii. | ಕನ್ನಡಿಗರಲ್ಲಿ ಬಿನ್ನಹ .... .... | .... | xiii |
| ೧. | ಭೂವಿವರಣೆ .... .... | .... | ೧ |
| ೨. | ಚರಿತ್ರೆ .... .... | .... | ೬ |
| ೩. | ದಕ್ಷಿಣ ಆಫ್ರಿಕದಲ್ಲಿ ಭಾರತೀಯರ ಪ್ರವೇಶ | .... | ೨೨ |
| ೪. | ಭಾರತೀಯರ ಕುಂದು ಕೊರತೆಗಳು .... | .... | ೨೮ |
| ೫. | ಭಾರತೀಯರ ಕಷ್ಟಗಳು .... | .... | ೩೫ |
| ೬. | ಸತ್ಯಾಗ್ರಹಕ್ಕೆ ಮುಂಚಿನ ಹೋರಾಟ .... | .... | ೪೩ |
| ೭. | ,, ,, ,, (ಮುಂದುವರಿದುದು) | | ೫೬ |
| ೮. | ,, ,, ,, (ಮುಗಿದುದು) | .... | ೭೭ |
| ೯. | ಬೋಅರ್ ಯುದ್ಧ .... .... | .... | ೮೦ |
| ೧೦. | ಯುದ್ಧ ಮುಗಿದ ಮೇಲೆ .... | .... | ೯೬ |
| ೧೧. | ಸಭ್ಯತೆಗೆ ಬಹುಮಾನ – ಕರಾಳಶಾಸನ | .... | ೧೧೭ |
| ೧೨. | ಸತ್ಯಾಗ್ರಹದ ಹುಟ್ಟು .... .... | .... | ೧೨೫ |
| ೧೩. | ಸತ್ಯಾಗ್ರಹ ಮತ್ತು ಪ್ಯಾಸಿವ್ ರೆಸಿಸ್ಟೆನ್ಸ್ | .... | ೧೩೭ |

# ಪೀಠಿಕೆ

ದಕ್ಷಿಣ ಆಫ್ರಿಕ ಭಾರತೀಯರ ಸತ್ಯಾಗ್ರಹ ಎಂಟು ವರ್ಷಗಳ ಕಾಲ ನಡೆಯಿತು. 'ಸತ್ಯಾಗ್ರಹ' ಎಂಬ ಶಬ್ದವನ್ನು ಕಂಡುಹಿಡಿದು ಉಪಯೋಗಿಸಿದ್ದು ಅದೇ ಸಂದರ್ಭದಲ್ಲಿ. ಆ ಹೋರಾಟದ ಚರಿತ್ರೆಯನ್ನು ನಾನೇ ಬರೆಯಬೇಕೆಂದು ಬಹಳ ದಿನಗಳಿಂದಲೂ ಯೋಚಿಸಿದ್ದೆ. ಆದರೆ ಕೆಲವು ಸಂಗತಿಗಳನ್ನು ಮಾತ್ರ ಬರೆಯಲು ನನಗೆ ಸಾಧ್ಯವಾಯಿತು. ಹೊಣೆಗಾರನಾದ ನಾಯಕನಿಗೆ ಮಾತ್ರ ಸೇನೆಯ ಪ್ರತಿಯೊಂದು ಚಲನದ ಗುರಿ ತಿಳಿಯಲು ಸಾಧ್ಯ. ಅಧಿಕ ಪ್ರಮಾಣದಲ್ಲಿ ಸತ್ಯಾಗ್ರಹ ತತ್ವವನ್ನು ರಾಜಕೀಯದಲ್ಲಿ ಪ್ರಯೋಗಿಸಿದ್ದು ಇದೇ ಮೊದಲನೆಯ ಬಾರಿ. ಆದ್ದರಿಂದ ಅದು ಹೇಗೆ ರೂಪಗೊಂಡು ಬೆಳೆಯಿತು ಎಂದು ಜನರು ಒಂದಲ್ಲ ಒಂದು ದಿನ ತಿಳಿಯಬೇಕಾದ್ದು ಆವಶ್ಯಕ.

ಆದರೆ ಭಾರತದಲ್ಲಿ ಈಗಾಗಲೇ 'ಸತ್ಯಾಗ್ರಹ'ದ ಸಾಕಷ್ಟು ಪ್ರಯೋಗ ಆಗಿದೆ. ಸ್ಥಳೀಯ ಪ್ರಶ್ನೆಯಾದ ವೀರಂಗಾವ್ ಸುಂಕದ ಪ್ರಶ್ನೆಯಿಂದ ಮೊದಲುಗೊಂಡು ಅನೇಕ ಹೋರಾಟಗಳು ನಡೆದಿವೆ. ವೀರಂಗಾವ್ ಪ್ರಶ್ನೆಯಲ್ಲಿ ನನಗೆ ಆಸಕ್ತಿ ಹುಟ್ಟಿದ್ದು ವಾಧವಾನಿನ ಮುಂದಾಳು ಸಿಂಪಿಶ್ರೇಷ್ಠ, ಭಾಯ್ ಮೋತಿಲಾಲರ ಮೂಲಕ. ೧೯೧೫ರಲ್ಲಿ ಆಗತಾನೆ ಇಂಗ್ಲೆಂಡ್‌ನಿಂದ ಬಂದು ಕಾಥಿಯವಾಡಕ್ಕೆ ಹೊರಟಿದ್ದೆ. ಮೂರನೆಯ ತರಗತಿಯ ಗಾಡಿಯಲ್ಲಿದ್ದೆ. ವಾಧವಾನ್ ಸ್ಟೇಷನ್ನಿನಲ್ಲಿ ತಮ್ಮ ಆಪ್ತರೊಂದಿಗೆ ಮೋತಿಲಾಲರು ಬಂದು ನನ್ನನ್ನು ನೋಡಿದರು. ವೀರಂಗಾವ್‌ನ ಜನರ ತೊಂದರೆಗಳನ್ನೆಲ್ಲ ವಿವರಿಸಿ, "ಈ ತೊಂದರೆ ನಿವಾರಿಸಲು ಏನಾದರೂ ಮಾಡು. ನಿನ್ನ ಜನ್ಮಭೂಮಿಯಾದ ಕಾಥಿಯವಾಡಕ್ಕೆ ಮಹದುಪಕಾರ ಮಾಡಿದಂತೆ ಆಗುತ್ತದೆ" ಎಂದರು.

ಅವರ ಕಣ್ಣುಗಳಿಂದ ಕರುಣೆಯೂ ದೃಢನಿಶ್ಚಯವೂ ಹೊರಹೊಮ್ಮುತ್ತಿದ್ದುವು.

‘ ಜೈಲಿಗೆ ಹೋಗಲು ಸಿದ್ಧರಿದ್ದೀರಾ ’ ಎಂದು ಕೇಳಿದೆ.

‘ ಪ್ರಾಣವನ್ನಾದರೂ ಕೊಡಲು ಸಿದ್ಧರಿದ್ದೇವೆ ’ ಎಂದು ಮಾರ್ದನಿ ಬಂತು.

‘ ಸೆರೆಮನೆ ನನಗೆ ಸಾಕು, ಆದರೆ ನಡುನೀರಿನಲ್ಲಿ ಮಾತ್ರ ಕೈ ಬಿಡಬೇಡಿ ’ ಎಂದು ಹೇಳಿದೆ.

‘ ಅದೆಲ್ಲ ಮುಂದೆ ತಿಳಿಯುತ್ತದೆ ’ ಎಂದು ಮೋತಿಲಾಲರು ಹೇಳಿದರು.

ರಾಜಕೋಟೆಯನ್ನು ಸೇರಿದೊಡನೆ ವಿಶದವಾಗಿ ವಿಷಯವನ್ನು ಸಂಗ್ರಹಿಸಿ ಸರಕಾರದೊಡನೆ ಪತ್ರವ್ಯವಹಾರ ಪ್ರಾರಂಭಿಸಿದೆ. ಅವಶ್ಯಬಿದ್ದರೆ ವೀರಂಗಾವ್‌ನಲ್ಲಿ ಸತ್ಯಾಗ್ರಹ ಹೂಡಲು ಜನರು ಸಿದ್ಧರಾಗಬೇಕೆಂದು ಬಾಗಸ್ರ ಮುಂತಾದ ಸ್ಥಳಗಳಲ್ಲಿ ನನ್ನ ಭಾಷಣಗಳಲ್ಲಿ ತಿಳಿಸಿದೆ. ಗುಪ್ತ ಪೋಲೀಸರು ನನ್ನ ಭಾಷಣಗಳ ವರದಿಗಳನ್ನು ಸರಕಾರಕ್ಕೆ ಕಳುಹಿಸಿದರು. ಆ ಮೂಲಕ ಅನಿರೀಕ್ಷಿತವಾಗಿ ಸರಕಾರಕ್ಕೂ ಪ್ರಜೆಗಳಿಗೂ ಉಪಕಾರವಾಯಿತು. ಕಡೆಯಲ್ಲಿ ಲಾರ್ಡ್ ಚೆಮ್ಸ್‌ಫರ್ಡ್‌ರೊಂದಿಗೆ ಸಂಭಾಷಣೆ ನಡಸಿದೆ. ಸುಂಕವನ್ನು ರದ್ದುಗೊಳಿಸುವುದಾಗಿ ಭರವಸೆ ಕೊಟ್ಟು ಅದರಂತೆ ನಡೆದರು. ನನ್ನಂತೆ ಇತರರೂ ಪ್ರಯತ್ನಪಟ್ಟಿದ್ದರು. ಆದರೆ ಸತ್ಯಾಗ್ರಹ ಆರಂಭವಾಗಬಹುದೆಂಬ ಭೀತಿಯೇ ಸುಂಕ ರದ್ದಾಗಲು ಮುಖ್ಯ ಕಾರಣವೆಂದು ನನ್ನ ದೃಢವಾದ ನಂಬಿಕೆ.

ಅನಂತರ ಭಾರತೀಯರನ್ನು ಪರದೇಶಕ್ಕೆ ಕಳುಹಿಸುವ ಶಾಸನವನ್ನು ನಾವು ಎದುರಿಸಬೇಕಾಯಿತು. ಈ ಶಾಸನವನ್ನು ರದ್ದುಗೊಳಿಸಲು ವಿಶ್ವಪ್ರಯತ್ನ ನಡೆಯಿತು. ಸಾರ್ವಜನಿಕ ಚಳವಳಿ ಸಹ ಹೆಚ್ಚಿತು. ಮುಂಬಯಿ ಪಟ್ಟಣದಲ್ಲಿ ಭಾರಿ ಸಭೆ ನಡೆದು, ೧೯೧೭ನೆಯ ಮೇ ೩೧ನೆಯ ತಾರೀಖಿನಿಂದ ಭಾರತೀಯ ಕೂಲಿಗಾರರನ್ನು ಪರದೇಶಗಳಿಗೆ ಕಳುಹಿಸುವುದನ್ನು ನಿಲ್ಲಿಸಬೇಕೆಂದು ಸರಕಾರಕ್ಕೆ ತಿಳಿಸಲಾಯಿತು. ಆ ದಿನವನ್ನೇ ಏಕೆ ನಿರ್ಧರಿಸಲಾಯಿತೆಂದು ತಿಳಿಸಬೇಕಾದ್ದು ಇಲ್ಲಿ ಅನಾವಶ್ಯಕ. ಈ ಸಂದರ್ಭದಲ್ಲಿ ಮಹಿಳೆಯರ ನಿಯೋಗ ಗೋಷ್ಠಿಯೊಂದು ವೈಸರಾಯರನ್ನು ಮೊದಲು ನೋಡಿತು. ಸಾಧ್ವೀಮಣಿ ಸಹೋದರಿ

ಶ್ರೀಮತಿ ಜೈಜಿ ಪೆಟಿಟ್‌ರ ಹೆಸರನ್ನು ಈ ವಿಷಯದಲ್ಲಿ ಮರೆಯುವಂತಿಲ್ಲ. ಈ ಗೋಷ್ಠಿಯನ್ನು ಏರ್ಪಡಿಸಲು ಆಕೆಯೇ ಕಾರಣಳು. ಇಲ್ಲಿಯೂ ನಮ್ಮ ವಿಜಯಕ್ಕೆ ಸತ್ಯಾಗ್ರಹದ ಸಿದ್ಧತೆಯೇ ಮುಖ್ಯ ಕಾರಣ. ಆದರೆ ಈ ಸಂದರ್ಭದಲ್ಲಿ ಸಾರ್ವಜನಿಕ ಚಳವಳಿಯೂ ಅವಶ್ಯವಾಯಿತು. ವೀರಂಗಾವ್ ಸುಂಕದ ಪ್ರಶ್ನೆಗಿಂತ ಅವಧಿಕೂಲಿಗಳ ರಫ್ತು ನಿಲ್ಲಿಸಿದ್ದು ಬಹಳ ಮುಖ್ಯ ವಿಷಯ. ರೌಲತ್ ಕಾನೂನಿಂದ ಮೊದಲುಗೊಂಡು ಲಾರ್ಡ್ ಚೆಮ್ಸ್‌ಫರ್ಡ್ ಅನೇಕ ತಪ್ಪುಗಳನ್ನು ಮಾಡಿದರು. ಆದರೂ ಅವರು ಒಳ್ಳೆಯ ಆಡಳಿತಗಾರರೆಂದು ನನ್ನ ನಂಬಿಕೆ. ಸಿವಿಲ್ ಸರ್ವಿಸಿನ ಖಾಯಂ ಅಧಿಕಾರಿಗಳ ಪ್ರಭಾವಕ್ಕೆ ಬೀಳದೆ ಯಾವ ವೈಸರಾಯ್ ತಾನೆ ಬಹುಕಾಲವಿರಲು ಸಾಧ್ಯ ?

ಮೂರನೆಯದು ಚಂಪಾರಣ್ಯ ಸತ್ಯಾಗ್ರಹ. ಈ ವಿಷಯವಾಗಿ ಬಾಬು ರಾಜೇಂದ್ರ ಪ್ರಸಾದರು ವಿಶದವಾದ ಚರಿತ್ರೆಯನ್ನು ಬರೆದಿದ್ದಾರೆ. ಇಲ್ಲಿ ಸತ್ಯಾಗ್ರಹವನ್ನೇ ಹೂಡಬೇಕಾಯಿತು. ಇಲ್ಲಿ ಪ್ರಬಲರಾದ ಬಂಡವಾಳಗಾರರ ವಿರೋಧವಿದ್ದುದರಿಂದ ಸತ್ಯಾಗ್ರಹ ಸಿದ್ಧತೆ ಮಾತ್ರ ಸಾಲದಾಯಿತು. ಚಂಪಾರಣ್ಯದ ಜನರ ಶಾಂತಿಪಾಲನೆಯ ಶಕ್ತಿ ಚರಿತ್ರಾರ್ಹವಾದುದು. ನಾಯಕರೆಲ್ಲರೂ ಯೋಚನೆ ನಡೆ ನುಡಿಗಳಲ್ಲಿ ಪೂರ್ಣ ಅಹಿಂಸಾವಲಂಬಿಗಳಾಗಿದ್ದರೆಂಬುದಕ್ಕೆ ನಾನೇ ಸಾಕ್ಷಿ. ಆದ್ದರಿಂದ ಅನಾದಿಯಿಂದ ಬಂದ ಕೇಡು ಆರು ತಿಂಗಳಲ್ಲಿಯೇ ನಿವಾರಣೆಯಾದಂತೆ ತೋರಿತು.

ನಾಲ್ಕನೆಯದು ಅಹಮದಾಬಾದ್ ಗಿರಣಿ ಕೂಲಿಗಾರರ ಪ್ರಶ್ನೆ. ಅದರ ಇತಿಹಾಸ ಗುಜರಾತಿನವರಿಗೆಲ್ಲ ಚೆನ್ನಾಗಿ ತಿಳಿದೇ ಇದೆ. ಕೂಲಿಗಾರರು ಅದೆಷ್ಟು ಶಾಂತಿಯಿಂದ ನಡೆದುಕೊಂಡರು! ಮುಖಂಡರ ವಿಷಯವಾಗಿ ನಾನು ಏನೂ ಹೇಳತಕ್ಕದ್ದಿಲ್ಲ. ಆದರೂ ಕೂಲಿಗಾರರ ನಿರ್ಧಾರವನ್ನು ಭದ್ರಪಡಿಸಲು ನಾನು ಉಪವಾಸಮಾಡಿ ಅವರ ಮೇಲೆ ಒಂದು ವಿಧವಾದ ಬಲಾತ್ಕಾರ ಪ್ರಯೋಗಮಾಡಿದ್ದರಿಂದ ಈ ವಿಜಯ ಅಷ್ಟು ಪವಿತ್ರವಾದುದಲ್ಲವೆಂದು ನನ್ನ ಅಭಿಪ್ರಾಯ. ನನ್ನ ಬಗ್ಗೆ ಸ್ನೇಹಭಾವನೆಯಿಂದಿದ್ದ ಅವರ ಮೇಲೆ ನನ್ನ ಉಪವಾಸ ಪೂರ್ಣಪ್ರಭಾವ

ಉಂಟುಮಾಡಿತು. ಆದರೂ ಆ ಹೋರಾಟದ ನೀತಿ ಮಾತ್ರ ಸ್ಪಷ್ಟವಿದೆ. ಕೂಲಿಗಾರರು ಶಾಂತಿಯಿಂದ ತಮ್ಮ ಚಳವಳಿ ನಡಸಿದರೆ ಅವರಿಗೆ ಜಯವೂ ಸಿದ್ಧ; ಜೊತೆಯಲ್ಲಿ ಅವರ ಮಾಲೀಕರ ಪ್ರೀತಿಯೂ ಲಭಿಸುತ್ತದೆ. ಅವರ ಯೋಚನೆ ನಡೆ ನುಡಿಗಳಲ್ಲಿ ನಿಷ್ಕಪಟತೆ ಇನ್ನೂ ತೋರಲಿಲ್ಲವಾದ್ದರಿಂದ ಅವರಿಗಿನ್ನೂ ಮಾಲೀಕರ ವಿಶ್ವಾಸ ದೊರೆತಿಲ್ಲ. ಕಾರ್ಯತಃ ಅವರು ಅಹಿಂಸಾಯುತರಾಗಿದ್ದುದು ನಿಜವಾಗಿಯೂ ಹೆಮ್ಮೆಯ ವಿಷಯ.

ಐದನೆಯದು ಖೇಡಾ ಹೋರಾಟ. ಇಲ್ಲಿ ಸತ್ಯಾಗ್ರಹಿ ತಂಡಗಳ ಸ್ಥಳೀಯ ನಾಯಕರೆಲ್ಲರೂ ತುಂಬು ಸತ್ಯನಿಷ್ಠರಿದ್ದರೆಂದು ನಾನು ಹೇಳಲಾರೆ. ಶಾಂತಿಪಾಲನೆಯೇನೋ ನಡೆದಿತ್ತು. ಆದರೆ ಗಿರಣಿ ಕೂಲಿಗಾರರಂತೆ ರೈತರ ಅಹಿಂಸೆ ನಾಮಮಾತ್ರವಾಗಿತ್ತು. ಆದ್ದರಿಂದ ಮರ್ಯಾದೆಯಿಂದ ಮಾತ್ರ ಹೊರಬಿದ್ದೆವು. ಆದರೂ ಜನರಲ್ಲಿ ಪ್ರಚಂಡ ಜಾಗ್ರತಿಯಾಯಿತು. ಖೇಡಾ ಜನರು ಅಹಿಂಸೆಯ ಪಾಠವನ್ನು ಪೂರ್ಣ ಗ್ರಹಿಸಲಿಲ್ಲ. ಗಿರಣಿ ಕೆಲಸಗಾರರಿಗೆ ಶಾಂತಿಯ ನಿಜವಾದ ಅರ್ಥ ಹೊಳೆಯಲಿಲ್ಲ. ಆದ್ದರಿಂದ ಜನರು ಕಷ್ಟವನ್ನು ಅನುಭವಿಸಬೇಕಾಯಿತು. ರೌಲತ್ ಶಾಸನ ಸಂಬಂಧವಾದ ಸತ್ಯಾಗ್ರಹ ಸಮಯದಲ್ಲಿ ನನ್ನ ಮಹದಪರಾಧಗಳನ್ನು ಒಪ್ಪಿ, ಉಪವಾಸ ಮಾಡಿದೆನಲ್ಲದೆ ಇತರರಿಗೂ ಆ ರೀತಿ ಮಾಡಲು ತಿಳಿಸಿದೆ.

ಆರನೆಯದು ರೌಲತ್ ಶಾಸನ ಸಂಬಂಧವಾಗಿ ನಡೆದ ಸತ್ಯಾಗ್ರಹ. ಇಲ್ಲಿ ನಮ್ಮ ಒಳ ನ್ಯೂನತೆಗಳೆಲ್ಲ ಮೇಲೆ ಕಾಣಿಸಿಕೊಂಡುವು. ಆದರೆ ಮೊದಲಿನ ತಳಹದಿ ಮಾತ್ರ ಭದ್ರವಾಗಿತ್ತು. ನಮ್ಮ ತಪ್ಪುಗಳನ್ನೆಲ್ಲ ಒಪ್ಪಿ ಅದಕ್ಕೆ ಪ್ರಾಯಶ್ಚಿತ್ತಮಾಡಿಕೊಂಡೆವು. ರೌಲತ್ ಶಾಸನ ಜಾರಿಗೆ ಬರುವ ಮುಂಚೆಯೇ ಅದು ನಿರ್ನಾಮವಾಗಿತ್ತು; ಆಮೇಲೆ ರದ್ದು ಸಹ ಆಯಿತು. ಈ ಹೋರಾಟ ನಮಗೆ ಬಹಳ ಬುದ್ಧಿ ಕಲಿಸಿತು.

ಏಳನೆಯದು ಖಿಲಾಫತ್ ಮತ್ತು ಪಂಜಾಬ್ ಅನ್ಯಾಯಗಳನ್ನು ಸರಿಪಡಿಸುವುದಕ್ಕೂ ಸ್ವರಾಜ್ಯಸಾಧನೆಗೂ ಹೂಡಿದ ಸತ್ಯಾಗ್ರಹ. ಅದು ಇನ್ನೂ ನಡೆಯುತ್ತಲೇ ಇದೆ. ನಿಜವಾದ ಸತ್ಯಾಗ್ರಹಿ ಒಬ್ಬನೇ ಇದ್ದರೂ,

ಕೊನೆಯವರೆಗೆ ಸತ್ಯಾಗ್ರಹ ನಡಸಿದರೆ ಜಯ ಶತಃಸಿದ್ಧವೆಂಬ ನನ್ನ ನಂಬಿಕೆ ಇನ್ನೂ ಹೋಗಿಲ್ಲ.

ಆದರೆ ನಮ್ಮ ಇಂದಿನ ಹೋರಾಟ ಐತಿಹಾಸಿಕವಾದುದು. ಅನಪೇಕ್ಷಿತವಾಗಿ ಅದಕ್ಕೆ ಪೂರ್ವ ಸಿದ್ಧತೆ ಯಾವ ರೀತಿ ನಡೆದಿದೆ ಎಂದು ಆಗಲೇ ವಿವರಿಸಿದ್ದೇನೆ. ವೀರಂಗಾವ್ ಪ್ರಶ್ನೆ ನನ್ನ ಮುಂದೆ ಬಂದಾಗ ಮುಂದಿನ ಈ ಹೋರಾಟಗಳೆಲ್ಲ ಒದಗಬಹುದೆಂದು ಎಣಿಸಿರಲಿಲ್ಲ. ದಕ್ಷಿಣ ಆಫ್ರಿಕದಲ್ಲಿ ವೀರಂಗಾವ್ ವಿಷಯ ನನಗೆ ತಿಳಿದೇ ಇರಲಿಲ್ಲ. ಅದೇ ಸತ್ಯಾಗ್ರಹದ ಸೊಗಸು. ಅದು ತಾನಾಗಿಯೇ ಬರುವಂಥದು; ಯಾರೂ ಅದಕ್ಕಾಗಿ ಹುಡುಕಿಕೊಂಡು ಹೋಗಬೇಕಾಗಿಲ್ಲ. ಸತ್ಯಾಗ್ರಹ ತತ್ವದಲ್ಲಿ ಸಹಜವಾಗಿ ಅಡಗಿರುವ ಗುಣವೆಂದರೆ ಇದೇ. ಇದೊಂದು ಧರ್ಮಯುದ್ಧ: ಇದರಲ್ಲಿ ಕಾಯ್ದುಕೊಳ್ಳಬೇಕಾದ ಗುಟ್ಟುಗಳಿರುವುದಿಲ್ಲ; ಇದರಲ್ಲಿ ಚಾತುರ್ಯಕ್ಕೆ ಎಡೆಯಿಲ್ಲ; ಅಸತ್ಯಕ್ಕೆ ಅವಕಾಶವಿಲ್ಲ; ಅಪ್ರಾರ್ಥಿತವಾಗಿ ಒದಗುವಂಥದು. ಧರ್ಮಜೀವಿ ಸದಾ ಅದಕ್ಕೆ ಸಿದ್ಧ ನಿರುತ್ತಾನೆ. ಪೂರ್ವಸಿದ್ಧತೆ ಮಾಡಿ ನಡಸುವ ಹೋರಾಟ ಧರ್ಮ ಯುದ್ಧವೇ ಅಲ್ಲ. ಧರ್ಮಯುದ್ಧದಲ್ಲಿ ಪ್ರತಿಯೊಂದು ಮುನ್ನಡೆಯೂ ದೈವಿಕವಾದುದು; ಹೋರಾಟ ನಡೆಯುವುದೂ ದೈವಪ್ರೇರಣೆಯಿಂದಲೇ. ಧರ್ಮಯುದ್ಧವನ್ನು ದೇವರ ಹೆಸರಿನಲ್ಲಿ ಮಾತ್ರ ನಡಸಬಹುದು. ಸತ್ಯಾಗ್ರಹಿ ಆಶಾಶೂನ್ಯನಾಗಿ ದಾರಿಕಾಣದೆ ಕತ್ತಲಲ್ಲಿ ಕಂಗೆಟ್ಟಾಗಲೇ ಆತನಿಗೆ ದೈವಸಹಾಯ ಒದಗುವುದು. ನಮ್ಮ ಪಾದದಡಿಯ ಧೂಳಿಗಿಂತ ನಾವು ಅಲ್ಪರು ಎಂಬ ನಮ್ರಭಾವನೆ ನಮ್ಮಲ್ಲಿ ಬಂದಾಗ ಮಾತ್ರ ದೈವ ಸಹಾಯ ದೊರೆಯುವುದು. ನಿರ್ಬಲರೂ ನಿಸ್ಸಹಾಯಕರೂ ಆದವರಿಗೆ ಮಾತ್ರ ದೇವರು ಸದಾ ಪ್ರಸನ್ನನು.

ಈ ಸತ್ಯವನ್ನು ನಾವು ಇನ್ನೂ ಕಂಡುಕೊಳ್ಳಬೇಕಾಗಿದೆ. ಆದ್ದರಿಂದ ದಕ್ಷಿಣ ಆಫ್ರಿಕದ ಸತ್ಯಾಗ್ರಹ ಚರಿತ್ರೆ ನಮಗೆ ಸಹಾಯಕವಾಗಬಹುದು ಎಂದು ನನ್ನ ನಂಬಿಕೆ.

ಇಂದಿನ ನಮ್ಮ ಹೋರಾಟದ ಅನುಭವಗಳೆಲ್ಲ ದಕ್ಷಿಣ ಆಫ್ರಿಕ ದಲ್ಲೂ ಇದ್ದುವೆಂದೂ, ಈಗ ನಡೆಯುತ್ತಿರುವ ಹೋರಾಟದಿಂದ ನಿರಾಶೆ

ಹೊಂದಲು ಕಾರಣವಿಲ್ಲವೆಂದೂ ಈ ಚರಿತ್ರೆಯಿಂದ ವ್ಯಕ್ತಪಡುತ್ತದೆ. ಹಿಡಿದ ಮಾರ್ಗವಲ್ಲಿ ಹೊರಳದೆ ನೇರವಾಗಿ ನಡೆಯುವುದೊಂದೇ ಜಯ ಲಭಿಸಲು ಮುಖ್ಯಮಾರ್ಗ

ಈ ಪೀಠಿಕೆಯನ್ನು ಜುಹುದಿಂದ ಬರೆಯುತ್ತಿದ್ದೇನೆ. ಮೊದಲ ಮೂವತ್ತು ಅಧ್ಯಾಯಗಳನ್ನು ಯರವಾಡ ಸೆರೆಮನೆಯಲ್ಲಿ ಬರೆದೆ. ಶ್ರೀಯುತ ಇಂದೂಲಾಲ್ ಯಾಜ್ಞಿಕರು ನಾನು ಹೇಳಿದಂತೆ ಬರೆದು ಕೊಟ್ಟು ಉಪಕಾರ ಮಾಡಿದ್ದಾರೆ. ಮುಂದಿನ ಅಧ್ಯಾಯಗಳನ್ನು ಇನ್ನು ಮೇಲೆ ನಾನು ಬರೆಯಬೇಕು. ಸೆರೆಮನೆಯಲ್ಲಿ ನನ್ನ ಬಳಿ ಯಾವ ಪುಸ್ತಕ ಟಿಪ್ಪಣಿಗಳೂ ಇರಲಿಲ್ಲ. ಈಗಲೂ ನನಗೆ ಬೇಕಿಲ್ಲ. ಕ್ರಮವಾದ ಚರಿತ್ರೆ ಬರೆಯಲು ನನಗೆ ಕಾಲವೂ ಇಲ್ಲ, ಇಷ್ಟವೂ ಇಲ್ಲ. ಇಂದಿನ ಹೋರಾಟಕ್ಕೆ ಸಹಾಯವಾಗಿ ಮುಂದಿನ ಚರಿತ್ರೆಕಾರನಿಗೆ ಮಾರ್ಗದರ್ಶಿಯಾಗಿರಲಿ ಎಂಬುದು ಮಾತ್ರ ನನ್ನ ಈ ಲೇಖನದ ಉದ್ದೇಶ. ನನ್ನ ಬಳಿ ಯಾವ ಪುಸ್ತಕಗಳೂ ಇಲ್ಲದೆ ಹೋದರೂ ಈ ಗ್ರಂಥದಲ್ಲಿ ಯಾವ ವಿಷಯದಲ್ಲಾಗಲಿ ತಪ್ಪು ಅಥವಾ ಉತ್ಪ್ರೇಕ್ಷೆ ಇರಬಹುದೆಂದು ಮಾತ್ರ ಯಾರೂ ಭಾವಿಸಲಾಗದು.

ಜುಹು
೨–೪–೧೯೨೪

**ಎಂ. ಕೆ. ಗಾಂಧಿ**

# ಕನ್ನಡಿಗರಲ್ಲಿ ಬಿನ್ನಹ

ಮಹಾತ್ಮ ಗಾಂಧಿಯವರ ಆತ್ಮಕಥೆಯನ್ನು ಕನ್ನಡಿಗರಿಬ್ಬರು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟು ಬಹು ವರ್ಷಗಳಾದವು. "ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ" ಸಹ ಕನ್ನಡದಲ್ಲಿ ಬಂದು ಅನೇಕ ದಿನಗಳಾಗ ಬೇಕಾಗಿತ್ತು. ಈಗ ನಾಲ್ಕಾರು ವರ್ಷಗಳ ಹಿಂದೆ ಈ ವಿಷಯ ಉಪನ್ಯಾಸಮಾಡಲು ನನಗೆ ಅವಕಾಶ ದೊರೆತಾಗ ನನ್ನ ಸ್ನೇಹಿತರಾದ ಶ್ರೀ ದೇ. ರಾ. ಮಾನಪ್ಪನವರು ಈ ಗ್ರಂಥವನ್ನು ಕನ್ನಡಕ್ಕೆ ಪರಿವರ್ತಿಸಿ ರೆಂದು ಸಲಹೆಕೊಟ್ಟು ತಮ್ಮ ಇಂಗ್ಲಿಷ್ ಪ್ರತಿಯನ್ನು ಕೊಟ್ಟರು. ಕೆಲಸ ಮಾತ್ರ ಹಾಗೆಯೇ ನಿಂತಿತು. ಮಹಾತ್ಮಜಿಯವರು 'ಸತ್ಯಾಗ್ರಹ'ವನ್ನು ಸಾರ್ವಜನಿಕ ಪ್ರಶ್ನೆಗಳ ಪರಿಹಾರಕ್ಕೆ ಮೊದಲು ಪ್ರಯೋಗಿಸಿದ್ದು ದಕ್ಷಿಣ ಆಫ್ರಿಕದಲ್ಲಿ. ಅವರೇ ಈ ಚರಿತ್ರೆಯನ್ನು ಬರೆಯುತ್ತ ಒಂದು ಕಡೆ "ಸತ್ಯಾಗ್ರಹಿಗಳು ಇರುವ ಸ್ಥಿತಿಯನ್ನು ವಿವರಿಸುವುದು ನನ್ನ ಉದ್ದೇಶ ವಲ್ಲ; ಆದರೆ ಸತ್ಯಾಗ್ರಹದ ಧ್ಯೇಯಗಳನ್ನೂ, ಸತ್ಯಾಗ್ರಹಿಯ ನಿಜವಾದ ಗುಣಗಳನ್ನೂ ಆದರ್ಶಸ್ಥಿತಿಯಲ್ಲಿ ತಿಳಿಸುವುದೇ ನನ್ನ ಉದ್ದೇಶವೆಂದು ತಿಳಿಸುತ್ತೇನೆ" ಎಂದೂ, ಇನ್ನೊಂದು ಕಡೆ "ಯಾವ ಸತ್ಯಾಗ್ರಹಕ್ಕಾಗಿ ನಾನು ಜೀವಿಸುತ್ತಿದ್ದೇನೆಯೊ, ಯಾವ ಸತ್ಯಾಗ್ರಹಕ್ಕಾಗಿ ಜೀವಿಸಲು ಇಷ್ಟಪಡುತ್ತೇನೆಯೊ ಮತ್ತು ಯಾವುದಕ್ಕಾಗಿ ನಾನು ಪ್ರಾಣವನ್ನಾದರೂ ಅರ್ಪಿಸಲು ಸಿದ್ಧನಿದ್ದೇನೆಯೊ ಅಂತಹ 'ಸತ್ಯಾಗ್ರಹ' ಪ್ರಾರಂಭವಾದ ಬಗೆ, ದೊಡ್ಡ ಪ್ರಮಾಣದಲ್ಲಿ ಅದನ್ನು ಅನುಸರಿಸಿದ ರೀತಿ – ಇವನ್ನು ಜನತೆ ತಿಳಿಯಲೆಂದೂ, ತಿಳಿದು ಅರ್ಥ ಮಾಡಿಕೊಂಡು ಇಷ್ಟಬಂದರೆ ಶಕ್ತಿ ಇರುವ ಮಟ್ಟಿಗೆ ಅನುಷ್ಠಾನಕ್ಕೆ ತರಲೆಂದೂ ಈ ಪುಸ್ತಕವನ್ನು ಬರೆಯುತ್ತಿದ್ದೇನೆ" ಎಂದು ಹೇಳಿದ್ದಾರೆ.

ಮಹಾತ್ಮಜಿಯವರ ಈ ಘನ ಉದ್ದೇಶ ಕನ್ನಡಿಗರಲ್ಲೂ ಸಾರ್ಥಕ ವಾಗಲೆಂದು ಕನ್ನಡಿಗರಡಿಯಲ್ಲಿ ಈ ಗ್ರಂಥವನ್ನು ಅರ್ಪಿಸಿದ್ದೇನೆ.

ಈ ಗ್ರಂಥ ಪರಿವರ್ತನೆಗೆ ಸಹಾಯ ಮಾಡಿದ ಶ್ರೀ ಮಹದೇವ ದೇಸಾಯಿ ಅವರಿಗೂ, ಪರಿವರ್ತನೆಗೆ ಅನುಜ್ಞೆಕೊಟ್ಟ ಇಂಗ್ಲಿಷ್ ಅನುವಾದಕರಾದ ಶ್ರೀ ವಾಲ್ಜಿ ಗೋವಿಂದಜಿ ದೇಸಾಯಿ ಅವರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸುತ್ತೇನೆ.

ಶ್ರೀ ರಂಗನಾಥ ರಾಮಚಂದ್ರ ದಿವಾಕರರು ಹಸ್ತಪ್ರತಿಯನ್ನು ಓದಿ ಕೆಲವು ಅಮೂಲ್ಯವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಶ್ರೀ ಕೆ. ವಿ. ಪುಟ್ಟಪ್ಪನವರು ಕೆಲವು ಭಾಗಗಳನ್ನು ಓದಿ ಕೇಳಿ ಪ್ರೋತ್ಸಾಹವಿತ್ತಿದ್ದಾರೆ. ನನ್ನ ಮಿತ್ರರಾದ ಶ್ರೀ ಟಿ. ಎಸ್. ರಾಮರಾಯರು, ಶ್ರೀ ಪಾರ್ಥ ನಾರಾಯಣ ಪಂಡಿತರು ಆಮೂಲಾಗ್ರವಾಗಿ ನನ್ನೊಂದಿಗೆ ಈ ಗ್ರಂಥ ವನ್ನು ಓದಿ ಪರಿಶೋಧಿಸಿದ್ದಾರೆ. ಈ ಗ್ರಂಥದ ಪ್ರೂಫ್‌ಗಳನ್ನು ತಿದ್ದು ವುದರಲ್ಲಿ ನನ್ನ ಮಾನ್ಯ ಮಿತ್ರರಾದ ಶ್ರೀ ಎಂ. ವಿ. ಸೀತಾರಾಮಯ್ಯ ಎಂ.ಎ. ಅವರು ಸಹಾಯ ಮಾಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಮುದ್ರಣಾಲಯದ ಅಧಿಕಾರಿಗಳು ಕೇವಲ ಹದಿನೈದು ದಿನಗಳಲ್ಲಿ ಈ ಪುಸ್ತಕವನ್ನು ಅಚ್ಚುಹಾಕಿ ಅಂದವಾಗಿ ಮುದ್ರಣ ಮಾಡಿಕೊಟ್ಟು ಸಹಾಯ ಮಾಡಿದ್ದಾರೆ. ಈ ಎಲ್ಲ ಮಹನೀಯರುಗಳಿಗೂ ನನ್ನ ಕೃತಜ್ಞತೆ ಗಳನ್ನು ಅರ್ಪಿಸಿ ಕನ್ನಡಿಗರಡಿಯಲ್ಲಿ ಈ ಗ್ರಂಥವನ್ನು ಸಮರ್ಪಿಸಿದ್ದೇನೆ.

ಶಿವಮೊಗ್ಗ
ವಿಷು ಸಂವತ್ಸರ
ಚೈತ್ರ ಶುದ್ಧ ಪ್ರತಿಪದ

**ಸಂತೆಬೆನ್ನೂರು ಕೃಷ್ಣಮೂರ್ತಿರಾವ್**

# ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ

## ೧. ಭೂ-ವಿವರಣೆ

ಪ್ರಪಂಚದ ದೊಡ್ಡ ಭೂಖಂಡಗಳಲ್ಲಿ ಆಫ್ರಿಕ ಒಂದು. ಹಿಂದೂಸ್ಥಾನವು ಒಂದು ದೇಶವಲ್ಲವೆಂದೂ ಭೂಖಂಡವೆಂದೂ ಪ್ರತೀತಿ ಇದ್ದರೂ, ಆಫ್ರಿಕ ನಾಲ್ಕೈದು ಹಿಂದೂಸ್ಥಾನಗಳು ಒಟ್ಟುಗೂಡಿದರೆ ಎಷ್ಟೋ ಅಷ್ಟು ವಿಸ್ತಾರವಾಗಿದೆ. ಹಿಂದೂಸ್ಥಾನದಂತೆ ಆಫ್ರಿಕವೂ ಒಂದು ಪರ್ಯಾಯ ದ್ವೀಪ; ದಕ್ಷಿಣ ಆಫ್ರಿಕದ ಸುತ್ತಲೂ ಸಮುದ್ರವಿದೆ. ಆಫ್ರಿಕ ಪ್ರಪಂಚದಲ್ಲೆಲ್ಲ ಅತಿ ಉಷ್ಣದೇಶವೆಂಬುದು ಒಂದು ದೃಷ್ಟಿಯಿಂದ ನಿಜ. ಭೂಮಧ್ಯರೇಖೆಯು ಆಫ್ರಿಕದ ಮಧ್ಯೆ ಹಾಯ್ದು ಹೋಗುತ್ತಿದೆ. ಭೂಮಧ್ಯರೇಖೆಯ ಸುತ್ತಮುತ್ತಣ ದೇಶಗಳಲ್ಲಿ ಉಷ್ಣವು ಎಷ್ಟಿರುತ್ತದೆ ಎಂಬುದು ಹಿಂದೂದೇಶದವರಿಗೆ ಗೊತ್ತಾಗುವುದು ಅಸಂಭವ. ದಕ್ಷಿಣ ಹಿಂದೂಸ್ಥಾನದ ಸೆಕೆಗೂ, ಭೂಮಧ್ಯರೇಖೆಯ ಹತ್ತಿರದ ಸೆಕೆಗೂ ಯಾವ ಹೋಲಿಕೆಯೂ ಇಲ್ಲ. ಆದರೆ ದಕ್ಷಿಣ ಆಫ್ರಿಕ ಭೂಮಧ್ಯರೇಖೆಯಿಂದ ಬಹುದೂರ ಇರುವುದರಿಂದ ಅಲ್ಲಿ ಸಹಿಸಲಸಾಧ್ಯವಾದ ಸೆಕೆಯೇನೂ ಇಲ್ಲ. ಯೂರೋಪಿಯನರಿಗೆ ಭಾರತದಲ್ಲಿ ನೆಲಸುವುದು ಕಷ್ಟವಾದಾಗ್ಯೂ, ದಕ್ಷಿಣ ಆಫ್ರಿಕದ ಅನೇಕ ಭಾಗಗಳ ವಾಯುಗುಣವು ಆರೋಗ್ಯಕರವಾಗಿಯೂ ಹಿತಕರವಾಗಿಯೂ ಇರುವುದರಿಂದ ಅವು ನೆಲಸಲು ಬಹಳ ಅನುಕೂಲವಾಗಿವೆ. ದಕ್ಷಿಣ ಆಫ್ರಿಕದಲ್ಲಿ ಟಿಬೆಟ್, ಕಾಶ್ಮೀರ ದೇಶಗಳಂತೆ – ಹತ್ತು ಹದಿನಾಲ್ಕು ಸಾವಿರ ಅಡಿ ಅಲ್ಲದಿದ್ದರೂ – ಅಲ್ಲಿಯೂ ಎತ್ತರವಾದ ತಂಪಾದ ಪ್ರದೇಶಗಳಿವೆ. ಇವುಗಳಲ್ಲಿ ಕೆಲವು ಸ್ಥಳಗಳಿಗೆ ಕ್ಷಯರೋಗಿಗಳನ್ನು ಆರೋಗ್ಯಲಾಭಕ್ಕೆ ಸಹ ಕಳುಹಿಸುತ್ತಾರೆ. ದಕ್ಷಿಣ ಆಫ್ರಿಕದಲ್ಲಿ ಬಂಗಾರದ ಗಣಿಗಳಿಗೆ ಹೆಸರಾದ ಜೋಹನೆಸ್‌ಬರ್ಗ್ ಎಂಬುದು ಅಂತಹ ಒಂದು ಪಟ್ಟಣ. ಐವತ್ತು ವರ್ಷಗಳ ಹಿಂದೆ ಆ ಪಟ್ಟಣವಿರುವ ಸ್ಥಳವು ಒಂದು ಬರಡು ಹುಲ್ಲುಗಾವಲಾಗಿತ್ತು. ಆದರೆ

ಬಂಗಾರದ ಗಣಿಗಳು ದೊರೆತೊಡನೆ ಮಂತ್ರವಾದಿಯ ಇಂದ್ರಜಾಲದಂತೆ ಒಂದರ ಮೇಲೊಂದು ನಯನಮನೋಹರವಾದ ಭವ್ಯ ಸೌಧಗಳು ನಿರ್ಮಾಣವಾಗಿ ಇಂದು ಅದು ಒಂದು ದೊಡ್ಡ ಪಟ್ಟಣವಾಗಿದೆ. ಅಲ್ಲಿನ ಧನಿಕರು ಒಂದೊಂದು ಗಿಡಕ್ಕೆ ಒಂದೊಂದು ಗಿನಿ ಬೆಲೆ ಕೊಟ್ಟು, ಆಫ್ರಿಕದ ಇತರ ಭಾಗಗಳಿಂದಲೂ ಯೂರೋಪಿನಿಂದಲೂ ಗಿಡಗಳನ್ನು ತರಿಸಿ ಬೆಳಸಿದ್ದಾರೆ. ಈ ಪೂರ್ವ ಇತಿಹಾಸವನ್ನರಿಯದ ಪ್ರವಾಸಿಗೆ ಮೊದಲಿನಿಂದಲೂ ಆ ಗಿಡಗಳು ಆ ದೇಶದವುಗಳೇನೊ ಎಂಬಂತೆ ಕಾಣುತ್ತವೆ.

ದಕ್ಷಿಣ ಆಫ್ರಿಕದ ಎಲ್ಲ ಭಾಗಗಳ ವಿಚಾರ ನಾನು ಹೇಳಬಯಸುವುದಿಲ್ಲ. ನಮ್ಮ ವಿಷಯಕ್ಕೆ ಸಂಬಂಧಪಟ್ಟ ಪ್ರದೇಶಗಳ ವಿಷಯವನ್ನು ಮಾತ್ರ ಬರೆಯುತ್ತೇನೆ. ದಕ್ಷಿಣ ಆಫ್ರಿಕದ ಒಂದು ಭಾಗ ಮಾತ್ರ ಪೋರ್ಚುಗೀಸರ ಆಡಳಿತದಲ್ಲೂ, ಉಳಿದ ಎಲ್ಲ ಭಾಗವೂ ಬ್ರಿಟಿಷರ ಆಡಳಿತದಲ್ಲೂ ಇವೆ. ಪೋರ್ಚುಗೀಸರ ಆಡಳಿತದಲ್ಲಿನ ಭಾಗಕ್ಕೆ ಡೆಲಗೋವ ಕೊಲ್ಲಿ ಎಂದು ಹೆಸರು; ಹಿಂದೂಸ್ಥಾನದಿಂದ ಹೊರಟ ಹಡಗುಗಳಿಗೆ ಮೊದಲು ಸಿಕ್ಕುವ ಆಫ್ರಿಕದ ಬಂದರು ಇದೇ. ಅಲ್ಲಿಂದ ದಕ್ಷಿಣಕ್ಕೆ ಮುಂದೆ ಹೋದರೆ ಬ್ರಿಟಿಷರ ಮೊದಲ ವಲಸೆ ರಾಷ್ಟ್ರವಾದ ನೇಟಾಲ್ ಇದೆ. ಅದರ ಮುಖ್ಯ ಬಂದರಿಗೆ ಪೋರ್ಟ್ ನೇಟಾಲ್ ಎಂದು ಹೆಸರು; ಆದರೆ ದಕ್ಷಿಣ ಆಫ್ರಿಕದಲ್ಲಿ ಸಾಮಾನ್ಯವಾಗಿ ಡರ್ಬಾನ್ ಎಂದು ಅದನ್ನು ಕರೆಯುತ್ತಾರೆ. ಡರ್ಬಾನ್ ಪಟ್ಟಣವೇ ನೇಟಾಲಿನ ದೊಡ್ಡ ನಗರ. ಇದಕ್ಕೆ ಅರುವತ್ತು ಮೈಲಿಗಳ ದೂರದಲ್ಲಿ ಎರಡು ಸಾವಿರ ಅಡಿ ಎತ್ತರದಲ್ಲಿ ನೇಟಾಲಿನ ಮುಖ್ಯ ಪಟ್ಟಣವಾದ ಪೀಟರ್‌ಮಾರಿಸ್ ಬರ್ಗ್ ಇದೆ. ಡರ್ಬಾನಿನ ಹವಾಗುಣವು ಮುಂಬೈ ಪಟ್ಟಣದಂತೆ; ಆದರೆ ಇನ್ನೂ ಸ್ವಲ್ಪ ತಂಪು. ನೇಟಾಲ್ ದೇಶದಿಂದ ಇನ್ನೂ ಸ್ವಲ್ಪ ಒಳಗೆ ಹೋದರೆ ಸಿಕ್ಕುವುದೇ ಟ್ರಾನ್ಸ್‌ವಾಲ್. ಪ್ರಪಂಚದ ಬಂಗಾರದ ಉತ್ಪತ್ತಿಯ ಬಹುಭಾಗ ದೊರೆಯುವುದು ಈ ಟ್ರಾನ್ಸ್‌ವಾಲ್‌ನಲ್ಲಿ. ಕೆಲವು ವರ್ಷಗಳ ಹಿಂದೆ ವಜ್ರದ ಗಣಿಗಳು ಸಿಕ್ಕಿದಾಗ ಪ್ರಪಂಚದ ಅತ್ಯಂತ ದೊಡ್ಡ ವಜ್ರವಾದ 'ಕ್ಯಲಿನನ್' ದೊರೆತದ್ದು ಇಲ್ಲಿಯೇ. ಆ ಗಣಿಯ ಮಾಲೀಕನ ಹೆಸರಿನಿಂದ ವಜ್ರದ ಹೆಸರೂ 'ಕ್ಯಲಿನನ್' ಎಂದಾಯಿತು.

ಅದರ ತೂಕ ೩,೦೦೦ ಕ್ಯಾರೆಟ್ ಅಥವಾ ೧½ ಪೌಂಡಿಗಿಂತ ಸ್ವಲ್ಪ ಹೆಚ್ಚು. 'ಕೊಹಿನೂರ್' ವಜ್ರದ ತೂಕ ೧೦೦ ಕ್ಯಾರೆಟ್; ರಷ್ಯ ದೇಶದ ರಾಜ ಕಿರೀಟದಲ್ಲಿದ್ದ 'ಓರ್ಲಾಫ್' ವಜ್ರದ ತೂಕ ೩೦೦ ಕ್ಯಾರೆಟ್ ಮಾತ್ರ.

ಜೋಹನೆಸ್‌ಬರ್ಗ್ ಸುತ್ತಲೂ ಬಂಗಾರದ ಗಣಿಗಳೂ, ವಜ್ರದ ಗಣಿಗಳೂ ಇದ್ದರೂ ಅದು ಟ್ರಾನ್ಸ್‌ವಾಲ್‌ನ ಮುಖ್ಯ ನಗರವಲ್ಲ. ೩೬ ಮೈಲಿಗಳಾಚೆ ಇರುವ ಪ್ರಿಟೋರಿಯಾ ಪಟ್ಟಣವೇ ಟ್ರಾನ್ಸ್‌ವಾಲಿನ ರಾಜಧಾನಿ. ಪ್ರಿಟೋರಿಯ ಪಟ್ಟಣದಲ್ಲಿರುವವರೆಲ್ಲ ಅಧಿಕಾರಿಗಳು, ರಾಜಕಾರಣಿಗಳು ಮತ್ತು ಅವರುಗಳಿಗೆ ಸಹಾಯಕರಾದ ಜನರು. ಆದ್ದರಿಂದ ಪ್ರಿಟೋರಿಯಾ ಬಹಳ ಪ್ರಶಾಂತ ಪಟ್ಟಣ; ಜೋಹನೆಸ್‌ಬರ್ಗ್‌ನಲ್ಲಿ ಅಸಾಧ್ಯ ಗಡಿಬಿಡಿ. ಹಳ್ಳಿಗನೊಬ್ಬನು ಅಥವಾ ಒಳನಾಡಿನ ಸಣ್ಣ ಪಟ್ಟಣಿಗನೊಬ್ಬನು ಬೊಂಬಾಯಿಗೆ ಬಂದರೆ ಯಾವ ಅನುಭವ ವಾಗುತ್ತದೆಯೋ ಅದೇ ಅನುಭವ ಪ್ರಿಟೋರಿಯದಿಂದ ಜೋಹನೆಸ್‌ಬರ್ಗ್‌ಗೆ ಬಂದರೆ ಆಗುತ್ತದೆ. ಜೋಹನೆಸ್‌ಬರ್ಗ್‌ನ ಜನರು ನಡೆಯುವುದಿಲ್ಲ – ಓಡುತ್ತಾರೆ, ಎಂದರೆ ಉತ್ಪ್ರೇಕ್ಷೆ ಏನಲ್ಲ. ಮತ್ತೊಬ್ಬರನ್ನು ವಿಚಾರಿಸಲು ಯಾರಿಗೂ ಬಿಡುವೇ ಇಲ್ಲ; ಪ್ರತಿಯೊಬ್ಬರಿಗೂ, ಎಷ್ಟು ಅಲ್ಪ ಅವಧಿಯಲ್ಲಿ ಎಷ್ಟು ಹೆಚ್ಚು ಹಣವನ್ನು ಗಳಿಸಬಲ್ಲೆನೆಂಬ ಯೋಚನೆಯೊಂದೇ ಇರುವಂತೆ ತೋರುತ್ತದೆ! ಟ್ರಾನ್ಸ್‌ವಾಲ್ ಬಿಟ್ಟು ಇನ್ನೂ ಪಶ್ಚಿಮಕ್ಕೆ ಪ್ರಯಾಣ ಮಾಡಿದರೆ ಸಿಕ್ಕುವುದೇ 'ಆರೇಂಜ್ ಫ್ರೀ ಸ್ಟೇಟ್' ಅಥವಾ ಆರೇಂಜಿಯಾ ದೇಶ. ಅದರ ರಾಜಧಾನಿ ಬ್ಲೂಮ್ ಫಾಂಟೇನ್ – ಒಂದು ಚಿಕ್ಕ ಸದ್ದಿಲ್ಲದ ಪಟ್ಟಣ. ಟ್ರಾನ್ಸ್‌ವಾಲ್‌ನಂತೆ ಆರೇಂಜಿಯದಲ್ಲಿ ಗಣಿಗಳಾವುವೂ ಇಲ್ಲ. ಆರೇಂಜಿಯಾದಿಂದ ರೈಲಿನಲ್ಲಿ ಕೆಲವು ಗಂಟೆಗಳ ಕಾಲ ಪ್ರಯಾಣ ಮಾಡಿದರೆ ದಕ್ಷಿಣ ಆಫ್ರಿಕದಲ್ಲೆಲ್ಲ ಅತಿ ದೊಡ್ಡ ವಲಸೆ ರಾಷ್ಟ್ರವಾದ ಕೇಪ್‌ಕಾಲೊನಿ ಗಡಿಯನ್ನು ಸೇರುತ್ತೇವೆ. ಕೇಪ್‌ಕಾಲೊನಿಯ ದೊಡ್ಡ ಬಂದರಾದ ಕೇಪ್‌ಟೌನ್ ಅದರ ರಾಜಧಾನಿ. ಗುಡ್‌ಹೋಪ್ ಭೂಶಿರದ ಮೇಲೆ ಆ ಪಟ್ಟಣವಿದೆ. ಈ ಭೂಶಿರವನ್ನು ಕಂಡುಹಿಡಿದಮೇಲೆ ಹಿಂದೂಸ್ಥಾನಕ್ಕೆ ಇನ್ನೂ ಸುಲಭವಾದ ಹೊಸ ದಾರಿ ದೊರೆಯಬಹುದೆಂಬ ಆಶೆಯಿಂದ ಪೋರ್ಚುಗಲ್ ಅರಸನಾದ ಜಾನ್

ದೊರೆ ಆ ಹೆಸರನ್ನು ಕೊಟ್ಟನು. ಏಕೆಂದರೆ ಆಗಿನ ಕಾಲದ ಎಲ್ಲ ಸಮುದ್ರಯಾನಗಳ ಗುರಿಯೂ ಹಿಂದೂದೇಶವನ್ನು ಸುಲಭವಾಗಿ ಸೇರುವುದೇ ಆಗಿತ್ತು.

ಈ ನಾಲ್ಕು ಮುಖ್ಯ ಬ್ರಿಟಿಷ್ ವಲಸೆ ರಾಷ್ಟ್ರಗಳಲ್ಲದೆ, ಯೂರೋಪಿಯನ್ನರಿಗಿಂತ ಮುಂಚೆಯೇ ಹೋಗಿ ನೆಲಸಿದ್ದ ಜನರಿರುವ ಇನ್ನೂ ಕೆಲವು ದೇಶಗಳೂ ಬ್ರಿಟಿಷರ ರಕ್ಷಣೆಯಲ್ಲಿವೆ.

ದಕ್ಷಿಣ ಆಫ್ರಿಕದಲ್ಲಿ ಸ್ವಾಭಾವಿಕವಾಗಿ ಹೆಚ್ಚು ಸೌಲಭ್ಯವಿರುವ ಮುಖ್ಯ ಕೈಗಾರಿಕೆ ಎಂದರೆ ವ್ಯವಸಾಯ. ಕೆಲವು ಭಾಗಗಳಂತೂ ಬಹು ಫಲವತ್ತಾಗಿ, ಸೊಬಗಿನ ಬೀಡುಗಳಾಗಿವೆ. ಹೆಚ್ಚು ಶ್ರಮವಿಲ್ಲದೆ ಬೆಳೆಯುವ ಪೈರು ಮುಸುಕಿನ ಜೋಳ; ಇದೇ ಅಲ್ಲಿಯ ನೀಗ್ರೊ ಜನರ ಮುಖ್ಯ ಆಹಾರ. ಕೆಲವೆಡೆಗಳಲ್ಲಿ ಗೋಧಿಯನ್ನೂ ಬೆಳೆಯುತ್ತಾರೆ. ದಕ್ಷಿಣ ಆಫ್ರಿಕವು ಹಣ್ಣುಗಳಿಗೆ ಹೆಸರಾದ ದೇಶ. ನೇಟಾಲಿನಲ್ಲಿ ಕಡುಬಡವರೂ ತಿನ್ನಬಹುದಾದಷ್ಟು ಪಪ್ಪಾಯಿ ಹಣ್ಣು, ಅನಾನಸು (ಪೈನ್ ಆಪಲ್) ಹಣ್ಣುಗಳನ್ನು ಬೆಳೆಯುತ್ತಾರೆ. ನೇಟಾಲ್ ಮತ್ತು ಇತರ ಕಾಲೋನಿಗಳಲ್ಲಿ ಕಿತ್ತಳೆ, ಸಕ್ಕರೆ ಬಾದಾಮಿ, 'ಪಿಚ್ಚೀಸು' (Peaches) ಹಣ್ಣುಗಳು ಲೆಕ್ಕವಿಲ್ಲದಷ್ಟು ಹೇರಳವಾಗಿ ಬೆಳೆಯುತ್ತವೆ. ಅವುಗಳಲ್ಲಿ ಕೆಲವನ್ನು ಮಾತ್ರ ಆರಿಸಿ ತಿಳಿಸಿರುತ್ತೇನೆ. ಇನ್ನೂ ನಾನಾ ಜಾತಿಯ ಹಣ್ಣುಗಳು ದೊರೆಯುತ್ತವೆ. ಕೇಪ್ ಕಾಲೊನಿಯಲ್ಲಿ ದ್ರಾಕ್ಷಿ ಮತ್ತು ನೇರಲು (Plums) ಹಣ್ಣುಗಳು ಬೆಳೆಯುತ್ತವೆ. ಅಷ್ಟು ಮಧುರವಾದ ದ್ರಾಕ್ಷಿ ಹಣ್ಣು ಇನ್ನೆಲ್ಲಿಯೂ ದೊರೆಯುವುದಿಲ್ಲ. ಸುಗ್ಗಿಯ ಸಮಯದಲ್ಲಿ ಕಡುಬಡವನೂ ಸಹ ಮನದಣಿಯುವಷ್ಟು ಹಣ್ಣು ತಿನ್ನಬಹುದು. ಭಾರತೀಯರು ಇರುವ ಕಡೆ ಮಾವಿನ ಹಣ್ಣು ಇರಲೇಬೇಕು. ಭಾರತೀಯರು ಅಲ್ಲಿಗೆ ಹೋಗಿ ಮಾವಿನ ಗಿಡವನ್ನು ಹಾಕಿ ಮಾವಿನ ಹಣ್ಣು ಬೆಳೆದರು. ಅಲ್ಲಿಯ ಕೆಲವು ಜಾತಿಯ ಹಣ್ಣುಗಳು ಮುಂಬೈಯಲ್ಲಿ ಸಿಕ್ಕುವ ಹಣ್ಣುಗಳಿಗಿಂತ ರುಚಿಯಲ್ಲಿ ಏನೂ ಕಡಮೆ ಇಲ್ಲ. ಭಾರತೀಯರು ತಮ್ಮ ಊಟದ ರುಚಿಗಾಗಿ ಬೇಕಾದಷ್ಟು ಕಾಯಿಪಲ್ಯೆಯನ್ನು ಸಹ ಬೆಳೆಯುತ್ತಾರೆ.

ಅಲ್ಲಿ ದನಕರುಗಳಿಗೂ ಕೊರತೆಯಿಲ್ಲ. ಅಲ್ಲಿಯ ಹಸುಗಳೂ ಎತ್ತುಗಳೂ ಹಿಂದೂಸ್ಥಾನದ ಕಾಲ್ನಡೆಗಳಿಗಿಂತ ಗಟ್ಟಿಮುಟ್ಟಾಗಿವೆ. ಗೋಮಾತೆ ಎಂದು ಪೂಜಿಸುವ ಭಾರತದಲ್ಲಿ ದನಕರುಗಳು ಜನರಂತೆಯೇ ಬಡಕಲಾಗಿರುವುದಕ್ಕೆ ನಾವು ಮನನೊಂದು ತಲೆತಗ್ಗಿಸಬೇಕು. ದಕ್ಷಿಣ ಆಫ್ರಿಕದಲ್ಲಿ ಎಲ್ಲಿ ಹೋದರೂ, ಪರೀಕ್ಷೆಗೆಂದರೂ ಬಡಕಲಾದ ಹಸುವಾಗಲಿ ಎತ್ತಾಗಲಿ ನನಗೆ ಕಾಣಲಿಲ್ಲ.

ಪ್ರಕೃತಿದೇವಿಯು ತನ್ನ ಸಂಪತ್ತೆಲ್ಲವನ್ನೂ ಧಾರಾಳವಾಗಿ ನೀಡಿರುವುದರ ಜೊತೆಗೆ ನಯನಮನೋಹರವಾದ ಪ್ರಕೃತಿ ಸೌಂದರ್ಯವನ್ನೂ ಕೊಟ್ಟಿದ್ದಾಳೆ. ಡರ್ಬಾನಿನ ಸೌಂದರ್ಯವು ಚಿತ್ತಾಕರ್ಷಕವಾಗಿದ್ದರೂ, ಕೇಪ್‌ಟೌನಿನ ಸೊಬಗು ಎಲ್ಲವನ್ನೂ ಮೀರಿಸಿದೆ. ಅತಿ ಎತ್ತರವೂ, ತೀರ ಸಣ್ಣದೂ ಅಲ್ಲದ ಬೆಟ್ಟದ ತಪ್ಪಲಿನಲ್ಲಿ ಈ ಪಟ್ಟಣವಿದೆ. ದಕ್ಷಿಣ ಆಫ್ರಿಕದ ಮೇಲೆ ವಿಶೇಷ ಮಮತೆಯುಳ್ಳ ಒಬ್ಬ ಕವಯಿತ್ರಿಯು ಈ ಬೆಟ್ಟಕ್ಕಿರುವ ವೈಶಿಷ್ಟ್ಯವು ಮತ್ತಾವ ಬೆಟ್ಟಕ್ಕೂ ಇಲ್ಲವೆಂದು ಬಣ್ಣಿಸಿರುತ್ತಾಳೆ. ಇದರಲ್ಲಿ ಸ್ವಲ್ಪ ಉತ್ಪ್ರೇಕ್ಷೆ ಇರಬಹುದು; ಇದೆ. ಆದರೆ ಆಕೆ ಹೇಳುವ ಒಂದು ವಿಷಯ ಮಾತ್ರ ನಿಜ. ಕೇಪ್‌ಟೌನಿನ ಜನರಿಗೆ ಈ ಬೆಟ್ಟ ಆಪ್ತ ಸ್ನೇಹಿತನಂತೆ ಇದೆ ಎಂದಿದ್ದಾಳೆ. ಅತಿ ಎತ್ತರವಿಲ್ಲ; ಭಯಾನಕವಾಗಿಲ್ಲ. ದೂರ ನಿಂತು ಪೂಜಿಸದೆ, ಜನರು ಬೆಟ್ಟದ ಮೇಲೆ ಮನೆ ಮಾಡಿ ವಾಸಮಾಡುತ್ತಿದಾರೆ. ಸಮುದ್ರ ದಡದಲ್ಲಿಯೇ ಇರುವುದರಿಂದ ಸಮುದ್ರದ ತಿಳಿನೀರು ಯಾವಾಗಲೂ ಅದರ ಪಾದಗಳನ್ನು ತೊಳೆಯುತ್ತ ಇದೆ. ಹುಡುಗರು ಮುದುಕರು ಗಂಡಸರು ಹೆಂಗಸರು ಭಯರಹಿತರಾಗಿ ಸಾವಿರಗಟ್ಟಲೆ ಬೆಟ್ಟದ ಮೇಲೆಲ್ಲ ಅಲೆದು ತಮ್ಮ ಕಿಲಕಿಲವಾಣಿಯಿಂದ ಬೆಟ್ಟವನ್ನು ಪ್ರತಿಧ್ವನಿಗೈಸುತ್ತಾರೆ. ಎತ್ತರವಾದ ಗಿಡಗಳು, ಸುವಾಸನೆಯ ಪುಷ್ಪಗಳು ಇನ್ನೂ ನೋಡಬೇಕೆಂಬ, ಎಷ್ಟು ನೋಡಿದರೂ ತಣಿಯಲಾರದ ಸೊಬಗನ್ನು ಈ ಬೆಟ್ಟಕ್ಕೆ ಕೊಟ್ಟಿವೆ.

ದಕ್ಷಿಣ ಆಫ್ರಿಕದಲ್ಲಿ ಗಂಗಾ ಸಿಂಧು ನದಿಗಳಂತೆ ದೊಡ್ಡ ನದಿಗಳಿಲ್ಲ. ಇರುವ ಕೆಲವು ನದಿಗಳು ಬಹಳ ಸಣ್ಣವು. ನದಿಗಳ ಮೂಲಕ ಅನೇಕ ಸ್ಥಳಗಳನ್ನು ನೋಡುವಂತೆ ಇಲ್ಲ. ಅಲ್ಲಿ ನಾಲೆಗಳು ಬಹಳ

ಕಡಮೆ. ದೊಡ್ಡ ನದಿಗಳೇ ಇಲ್ಲದಿರುವಾಗ ನಾಲೆಗಳೆಲ್ಲಿ. ನೀರಿನ ಅಭಾವವಿರುವ ಕಡೆಗಳಲ್ಲಿ ಆರ್ಟೀಸಿಯನ್ ಬಾವಿಗಳನ್ನು ತೋಡಿ ಗಾಳಿ ಯಂತ್ರಗಳಿಂದಲೊ, ಹಬೆಯ ಯಂತ್ರಗಳಿಂದಲೊ ವ್ಯವಸಾಯಕ್ಕೆ ನೀರನ್ನು ಒದಗಿಸುತ್ತಾರೆ. ಸರ್ಕಾರದವರು ವ್ಯವಸಾಯಕ್ಕೆ ಬಹಳ ಸಹಾಯ ಮಾಡುತ್ತಾರೆ. ವ್ಯವಸಾಯಗಾರರಿಗೆ ಸಲಹೆ ಕೊಡಲು ವ್ಯವಸಾಯ ನಿಪುಣರನ್ನು ಕಳುಹಿಸುತ್ತಾರೆ; ವ್ಯವಸಾಯಗಾರರ ಉಪಯೋಗಕ್ಕೆಂದು ಪರೀಕ್ಷಾ ಕೇಂದ್ರಗಳಿಗಾಗಿ ಮಾದರಿ ಕ್ಷೇತ್ರಗಳನ್ನು ನಡಸುತ್ತಾರೆ; ಒಳ್ಳೆಯ ಹೋರಿಗಳನ್ನೂ ಬೀಜವನ್ನೂ ಒದಗಿಸಿ, ಅಲ್ಪ ಖರ್ಚಿನಲ್ಲಿ ಬಾವಿಗಳನ್ನು ತೋಡಿಸಿಕೊಟ್ಟು, ಸುಲಭ ಕಂತಿನಿಂದ ಹಣ ಪಾವತಿ ಮಾಡಲು ಸೌಲಭ್ಯ ಕಲ್ಪಿಸಿದ್ದಾರೆ. ಹೊಲಗಳ ಸಂರಕ್ಷಣೆಗೆ ಮುಳ್ಳು ತಂತಿಯ ಬೇಲಿಯನ್ನು ಹಾಕಿಕೊಡುತ್ತಾರೆ.

ಹಿಂದೂಸ್ಥಾನವು ಭೂಮಧ್ಯರೇಖೆಗೆ ಉತ್ತರದಲ್ಲಿಯೂ, ದಕ್ಷಿಣ ಆಫ್ರಿಕವು ದಕ್ಷಿಣದಲ್ಲಿಯೂ ಸಮಾನಾಂತರದಲ್ಲಿ ಇರುವುದರಿಂದ ಇಲ್ಲಿನ ಹವಾಗುಣಕ್ಕೆ ಪ್ರತಿಯಾಗಿ ಅಲ್ಲಿನ ಹವಾಗುಣವಿದೆ. ಇಲ್ಲಿ ಬೇಸಗೆಯಾದರೆ ಅಲ್ಲಿ ಚಳಿಗಾಲ. ಅಲ್ಲಿನ ಮಳೆಯನ್ನು ನೆಚ್ಚುವಂತಿಲ್ಲ; ಯಾವಾಗ ಬಂದರೂ ಬರಬಹುದು. ಒಟ್ಟಿನಲ್ಲಿ ವರ್ಷಕ್ಕೆ ಇಪ್ಪತ್ತು ಅಂಗುಲಗಳಿಗೆ ಮೇಲೆ ಯಾವಾಗಲೂ ಹೋಗಿಲ್ಲ.

## ೨. ಚರಿತ್ರೆ

ಹಿಂದಿನ ಅಧ್ಯಾಯದಲ್ಲಿ ವಿವರಿಸಿದ ಭೂಭಾಗಗಳು ಪುರಾತನವಾದುವಲ್ಲ. ದಕ್ಷಿಣ ಆಫ್ರಿಕದ ಮೊದಲ ನಿವಾಸಿಗಳು ಯಾರೆಂಬುದು ಇನ್ನೂ ತಿಳಿದಿಲ್ಲ. ದಕ್ಷಿಣ ಆಫ್ರಿಕದಲ್ಲಿ ಯೂರೋಪಿಯನರು ಕಾಲಿಟ್ಟಾಗ ಅಲ್ಲಿದ್ದವರು ನೀಗ್ರೊ ಜನರು. ಈ ನೀಗ್ರೊ ಜನರು ಅಮೆರಿಕದ ಗುಲಾಮರ ಸಂತತಿಯವರೆಂದೂ, ಅಮೆರಿಕದಲ್ಲಿ ಹಿಂಸೆ ತಾಳಲಾರದೆ ದಕ್ಷಿಣ ಆಫ್ರಿಕಕ್ಕೆ ಓಡಿಬಂದು ನೆಲಸಿದವರೆಂದೂ ಪ್ರತೀತಿ ಇದೆ. ನೀಗ್ರೊ ಜನರಲ್ಲಿ ಜುಲು, ಸ್ವಾಜಿ, ಬಸುಟೊ, ಬೆಚುಆನ ಎಂದು ಮುಂತಾಗಿ ಅನೇಕ ಪಂಗಡಗಳಿವೆ. ಇವರು ಅನೇಕ ಭಾಷೆ

ಗಳನ್ನು ಮಾತನಾಡುತ್ತಾರೆ. ಇವರೇ ದಕ್ಷಿಣ ಆಫ್ರಿಕದ ಪೂರ್ವನಿವಾಸಿಗಳೆಂದು ನಾವು ಪರಿಗಣಿಸಬೇಕು. ಆದರೆ ಈಗಿನ ನೀಗ್ರೊ ಜನಸಂಖ್ಯೆಯ ಇಪ್ಪತ್ತು ಮೂವತ್ತರಷ್ಟು ಜನರಾದರೂ ವಾಸಮಾಡಬಹುದಾದಷ್ಟು ವಿಸ್ತಾರವಾದ ದೇಶ ದಕ್ಷಿಣ ಆಫ್ರಿಕ. ಕೇಪ್‌ಟೌನಿಗೂ ಡರ್ಬಾನಿಗೂ ರೈಲಿನಲ್ಲಿ ೧,೮೦೦ ಮೈಲಿಗಳ ದೂರವಿದೆ. ಸಮುದ್ರದ ಮೇಲೆ ೧,೦೦೦ ಮೈಲಿಗಳಾದರೂ ಆಗುತ್ತದೆ. ಈ ನಾಲ್ಕು ವಲಸೆ ರಾಷ್ಟ್ರಗಳ ಒಟ್ಟು ವಿಸ್ತೀರ್ಣ ४,೭೩,೦೦೦ ಚದರ ಮೈಲಿಗಳು. ಇಷ್ಟು ದೊಡ್ಡ ದೇಶದಲ್ಲಿ ೧೯೧೪ರಲ್ಲಿ ೫೦,೦೦೦ ನೀಗ್ರೊ ಜನರೂ ೧೦೩ ಲಕ್ಷ ಯೂರೋಪಿಯನರೂ ಮಾತ್ರ ವಾಸವಾಗಿದ್ದರು.

ನೀಗ್ರೊ ಜನರಲ್ಲಿ ಜುಲುಗಳು ಎತ್ತರವಾಗಿಯೂ ರೂಪವಂತರಾಗಿಯೂ ಇದ್ದಾರೆ. ನೀಗ್ರೊ ಜನರ ವಿಷಯದಲ್ಲಿ ರೂಪವಂತರು ಎಂದು ನಾನು ಯೋಚನೆಮಾಡಿಯೇ ಉಪಯೋಗಿಸಿದ್ದೇನೆ. ನಮ್ಮ ಆದರ್ಶದಂತೆ ಉದ್ದನೆಯ ಮೂಗು, ಒಳ್ಳೆಯ ಮೈಬಣ್ಣ ಇರುವವರು ಮಾತ್ರ ಸುಂದರರು. ಈ ಮೂಢನಂಬಿಕೆಯನ್ನು ಸ್ವಲ್ಪ ಮರೆತರೆ ಜುಲು ಜನರ ನಿರ್ಮಾಣದಲ್ಲಿ ಸೃಷ್ಟಿಕರ್ತನು ಯಾವ ಅಲಕ್ಷ್ಯವನ್ನೂ ತೋರಿಲ್ಲವೆಂದು ನನ್ನ ಭಾವನೆ. ಗಂಡಸರೂ ಹೆಂಗಸರೂ ಒಳ್ಳೆಯ ಎತ್ತರವಿದ್ದು, ಆ ಎತ್ತರಕ್ಕೆ ಅನುಗುಣವಾಗಿ ವಿಶಾಲವಾದ ಎದೆ, ತುಂಬಿದ ಮೈಕಟ್ಟು ಇವೆ; ಕೈಗಳೂ, ಕಾಲಿನ ಮೀನುಖಂಡಗಳೂ ಮಾಂಸಖಂಡಗಳಿಂದ ತುಂಬಿಕೊಂಡು ದುಂಡಗೆ ಇರುತ್ತವೆ. ಬೆನ್ನು ಬಾಗಿಸಿ ಅಥವಾ ಡುಬ್ಬಿನಿಂದ ನಡೆಯುವ ಒಬ್ಬ ವ್ಯಕ್ತಿಯನ್ನೂ ನೀವು ಅವರಲ್ಲಿ ಕಾಣಲಾರಿರಿ. ತುಟಿಗಳು ದಪ್ಪನಾಗಿ ದೊಡ್ಡವಾಗಿದ್ದರೂ ಒಟ್ಟು ನಿಲುವಿಕೆಯೊಂದಿಗೆ ಸರಿತೂಗುತ್ತವೆ; ವಿಕಾರವನ್ನುಂಟುಮಾಡುತ್ತವೆ ಎಂದು ಮಾತ್ರ ನಾನು ಹೇಳಲಾರೆ. ಕಣ್ಣುಗಳು ದುಂಡಗೆ ಪ್ರಕಾಶಮಾನವಾಗಿವೆ. ವಿಶಾಲವಾದ ಮುಖಕ್ಕೆ ತಕ್ಕಂತೆ ಮೂಗು ದೊಡ್ಡದಾಗಿ ಚಪ್ಪಟೆಯಾಗಿದೆ. ತಲೆಯ ಮೇಲೆ ಗುಂಗುರುಕೂದಲು; ಮೈಬಣ್ಣ ಕಪ್ಪಾದರೂ 'ಎಬೊನಿ' ಯಂತೆ ಹೊಳೆಯುತ್ತದೆ. ಆಫ್ರಿಕ ದೇಶದ ನಿವಾಸಿಗಳಲ್ಲಿ ಸೌಂದರ್ಯಕ್ಕೆ ಯಾರಿಗೆ ಮೊದಲನೆಯ ಸ್ಥಾನ ಕೊಡುತ್ತೀಯೆ ಎಂದು ಒಬ್ಬ ಜುಲುವನ್ನು

ಕೇಳಿದರೆ ಆತನು ಜುಲುವಿಗೇ ಪ್ರಾಮುಖ್ಯತೆ ಕೊಡುತ್ತಾನೆ. ಆತನ ತೀರ್ಮಾನ ತಪ್ಪೆಂದು ನನಗೇನೂ ತೋರುವುದಿಲ್ಲ. ಮೈಕಟ್ಟಿನಲ್ಲಿ ಜುಲು ಜನರು ಸ್ವಾಭಾವಿಕವಾಗಿ ಆಜಾನುಬಾಹುಗಳು, ಶಕ್ತಿಯುತರು, ಯೂರೋಪು ದೇಶದ ಜಟ್ಟಿಗಳಂತೆ ಯಾವ ಸಾಧನೆಯನ್ನೂ ಅವರು ಮಾಡಬೇಕಾಗಿಲ್ಲ. ಭೂಮಧ್ಯರೇಖೆಯ ಸಮೀಪ ದೇಶಗಳ ಜನರ ಮೈಬಣ್ಣ ಕಪ್ಪಾಗಿರಬೇಕಾದದ್ದು ಪ್ರಕೃತಿ ನಿಯಮ. ಪ್ರಕೃತಿ ಸೃಷ್ಟಿಯಲ್ಲಿ ಎಲ್ಲೆಡೆಯಲ್ಲೂ ಸೌಂದರ್ಯವಿದೆಯೆಂದು ನಾವು ನಂಬುವುದಾದರೆ ಸೌಂದರ್ಯಾನ್ವೇಷಣೆಯಲ್ಲಿ ನಮ್ಮ ಏಕಾಂಶ ದೃಷ್ಟಿಯೂ, ಸಂಕುಚಿತ ಭಾವನೆಯೂ ಮಾಯವಾಗುತ್ತವೆ. ಕೊನೆಯಪಕ್ಷ ಭಾರತೀಯರಿಗೆ ತಮ್ಮ ಬಣ್ಣದ ವಿಷಯದಲ್ಲಿರುವ ನಾಚಿಕೆ ಮತ್ತು ತಾತ್ಸಾರವಾದರೂ ಮಾಯವಾಗುತ್ತದೆ.

ಜೊಂಡು ಮತ್ತು ಕರಡು ಹುಲ್ಲಿನಿಂದ ಮಾಡಿದ ದುಂಡನೆಯ ಗುಡಿಸಿಲುಗಳೇ ನೀಗ್ರೋ ಜನರ ವಾಸದ ಮನೆಗಳು. ಅವುಗಳಿಗೆ ಸುತ್ತಲೂ ಒಂದು ಗೋಡೆ. ಮೇಲೆ ಹುಲ್ಲಿನ ಮುಚ್ಚಿಗೆ. ಮಧ್ಯದ ಒಂದು ಕಂಬವೇ ಮೇಲ್ಛಾವಣಿಗೆ ಆಧಾರ. ಒಬ್ಬ ಮನುಷ್ಯನು ಬಾಗಿ ಹೋಗಬಹುದಾದಷ್ಟು ದೊಡ್ಡ ಕಂಡಿಯೆ ಗಾಳಿ ಬೆಳಕುಗಳಿಗೆ ಮಾರ್ಗ. ಈ ಕಂಡಿಗೆ ಬಾಗಿಲು ಇಲ್ಲ. ನಮ್ಮಂತೆಯೇ ನೀಗ್ರೋ ಜನರೂ ಮಣ್ಣು ಮತ್ತು ಸಗಣಿಯಿಂದ ಗೋಡೆಗಳನ್ನು ಬಳಿಯುತ್ತಾರೆ. ನೀಗ್ರೋ ಜನರು ಚೌಕವಾದ ಯಾವ ಕಟ್ಟಡವನ್ನೂ ನಿರ್ಮಿಸಲಾರರು ಎಂಬುದು ನಿಜ. ಸೃಷ್ಟಿನಿಯಮದಲ್ಲಿ ಸರಳರೇಖೆಗಳನ್ನಾಗಲಿ, ಚೌಕ ಆಕೃತಿಗಳನ್ನಾಗಲಿ ನಾವು ಕಾಣುವುದಿಲ್ಲ. ನೀಗ್ರೋ ಜನರು ನೋಡುವುದೂ, ಮಾಡುವುದೂ ದುಂಡು ವಸ್ತುಗಳನ್ನೇ. ಪ್ರಕೃತಿಯ ಮಡಿಲಲ್ಲಿ ಬೆಳೆದ ಈ ಸಾಧು ಜನರು ತಮ್ಮ ಎಲ್ಲ ಅನುಭವವನ್ನೂ ಪ್ರಕೃತಿಯಿಂದಲೇ ಪಡೆದಿದ್ದಾರೆ.

ಗುಡಿಸಿಲಿನ ಒಳಗಡೆಯ ಸಾಮಾನುಗಳೂ ಆ ಸರಳಜೀವನಕ್ಕೆ ಅನುಗುಣವಾಗಿವೆ. ಮೇಜು, ಕುರ್ಚಿ, ಪೆಟ್ಟಿಗೆಗಳಿಗೆ ಅಲ್ಲಿ ಸ್ಥಾನವಿಲ್ಲ. ಈಗಲೂ ಸಹ ನೋಡುವುದು ಕಷ್ಟ.

ಯೂರೋಪಿಯನರು ಬರುವ ಮುಂಚೆ ಚರ್ಮದ ಹೊದ್ದಿಕೆಯೇ ಅವರ ಉಡುಪಾಗಿತ್ತು. ಅದೇ ಅವರ ಜಮಖಾನ, ಮಗ್ಗುಲುಹಾಸಿಗೆ, ಮತ್ತು ಮೆತ್ತೆಗಳಿಗಾಗುತ್ತಿತ್ತು. ಈಗ ಉಣ್ಣೆಯ ದುಪ್ಪಟಿಗಳನ್ನು ಹೊದೆಯುತ್ತಾರೆ. ಬ್ರಿಟಿಷರ ಆಳ್ವಿಕೆಗೆ ಮೊದಲು ಗಂಡಸರೂ ಹೆಂಗಸರೂ ಬೆತ್ತಲೆಯಾಗಿ ಓಡಾಡುತ್ತಿದ್ದರು. ಒಳದೇಶದಲ್ಲಿ ಈಗಲೂ ಅವರು ಹಾಗೆಯೆ ಇದ್ದಾರೆ. ತಮ್ಮ ಮರ್ಮಸ್ಥಾನಗಳನ್ನು ಒಂದು ಚರ್ಮದ ತುಂಡಿನಿಂದ ಮುಚ್ಚಿಕೊಳ್ಳುತ್ತಾರೆ. ಕೆಲವು ಕಡೆಗಳಲ್ಲಿ ಅದೂ ಇರುವುದಿಲ್ಲ. ಈ ಪದ್ಧತಿಯಿಂದ ಅವರಲ್ಲಿ ಇಂದ್ರಿಯನಿಗ್ರಹಶಕ್ತಿ ಇಲ್ಲವೆಂದು ಮಾತ್ರ ಯಾರೂ ಭಾವಿಸಕೂಡದು. ಒಂದು ಸಮಾಜದ ಬಹು ಜನರ ಆಚರಣೆಯಲ್ಲಿನ ಒಂದು ಪದ್ಧತಿಯು, ಮತ್ತೊಂದು ಸಮಾಜದವರಿಗೆ ಬಹಳ ಹೀನಾಯವಾಗಿ ತೋರಿದರೂ, ಆಚರಣೆಯಿರುವ ಸಮಾಜದಲ್ಲಿ ಅದು ನಿರ್ದುಷ್ಟವಾಗಿರಬಹುದು. ಒಬ್ಬರನ್ನೊಬ್ಬರು ದಿಟ್ಟಿಸಿನೋಡಲು ನೀಗ್ರೊ ಜನರಿಗೆ ಅವಕಾಶವಿಲ್ಲ. ಭಾಗವತದಲ್ಲಿ ಹೇಳಿರುವಂತೆ, ಶುಕದೇವನು ಬೆತ್ತಲೆಯಾಗಿ ಸ್ನಾನಮಾಡುತ್ತಿದ್ದ ಸ್ತ್ರೀಯರ ಬಳಿ ಹೋದಾಗ ಆತನ ಮನಸ್ಸು ಅಸ್ಖಲಿತವಾಗಿತ್ತು. ಸ್ತ್ರೀಯರಾದರೂ ಅವಮಾನಿತರಾದೆವೆಂದು ಧೈರ್ಯಗೆಡಲಿಲ್ಲ. ಇಂದಿನ ಭಾರತದಲ್ಲಿ ಅಂತಹದೇ ಸಂದರ್ಭದಲ್ಲಿ ಕಲಂಕಿತರಾಗದ ದೃಢಮನಸ್ಕರು ದೊರೆಯದೆಹೋದರೆ ಅದು ಮಾನವ ಸಂಸ್ಕಾರದ ಪರಮಾವಧಿಯ ಕುರುಹಲ್ಲ; ಅದು ನಮ್ಮ ಅವನತಿಗೆ ಸಾಕ್ಷಿ. ನೀಗ್ರೊ ಜನರು ಅನಾಗರಿಕರೆಂದು ಭಾವಿಸಿದರೆ ನಾವು ದುರಂಹಂಕಾರಿಗಳು. ನಾವು ಯೋಚಿಸುವಂತೆ ಅವರು ಕ್ರೂರಕರ್ಮಿಗಳಲ್ಲ.

ನೀಗ್ರೊ ಹೆಂಗಸರು ಪಟ್ಟಣಕ್ಕೆ ಹೋದಾಗ ಮೊಣಕಾಲಿನಿಂದ ಎದೆಯವರೆಗೆ ಬಟ್ಟೆಯನ್ನು ಹಾಕಬೇಕೆಂದು ಈಗ ಶಾಸನ ಆಗಿದೆ. ಆದ್ದರಿಂದ ಒಂದು ಚೌಕ ತುಂಡುಬಟ್ಟೆಯನ್ನು ಸುತ್ತಿಕೊಳ್ಳುವುದು ಈಗ ಅವರಿಗೆ ಅನಿವಾರ್ಯ. ಅಂತಹ ಬಟ್ಟೆಗಳ ವ್ಯಾಪಾರ ಹೆಚ್ಚಿದೆ. ಯೂರೋಪಿನಿಂದ ಪ್ರತಿವರ್ಷವೂ ಬಟ್ಟೆ ಮತ್ತು ದುಪ್ಪಟಿಗಳು ಅಮದಾಗುತ್ತಿವೆ. ಅದರಂತೆ ಗಂಡಸರೂ ಮೊಣಕಾಲಿನಿಂದ ಸೊಂಟದವರೆಗೆ ಬಟ್ಟೆಯನ್ನು ಧರಿಸಬೇಕೆಂದು ಶಾಸನವಾಗಿದೆ. ಅನೇಕರು ಯೂರೋಪಿ

ನಿಂದ ಬರುವ ಹಳೆಯ ಉಡುಪನ್ನು ಧರಿಸುವ ಅಭ್ಯಾಸ ಮಾಡಿದ್ದಾರೆ. ಇನ್ನು ಕೆಲವರು ಒಂದು ದಾರವನ್ನು ಕಟ್ಟಿ ಚಡ್ಡಿಯನ್ನು ಧರಿಸುತ್ತಾರೆ. ಈ ಎಲ್ಲ ಬಟ್ಟೆಗಳೂ ಯೂರೋಪಿನಿಂದಲೇ ಬರಬೇಕು.

ನೀಗ್ರೊ ಜನರ ಆಹಾರ ಮುಸುಕಿನ ಜೋಳ; ಮತ್ತು ದೊರೆತಾಗ ಸ್ವಲ್ಪ ಮಾಂಸ. ಮಸಾಲೆ ಮತ್ತು ಭೋಗ್ಯವಸ್ತುಗಳ ವಿಷಯ ಅವರಿಗೆ ತಿಳಿಯದೆ ಇರುವುದು ಅವರ ಅದೃಷ್ಟ. ಸ್ವಲ್ಪ ಮಸಾಲೆ ವಾಸನೆ ಅಥವಾ ಅರಿಸಿನ ಬಣ್ಣವಿದ್ದರೆ ಆ ಆಹಾರವನ್ನು ನೋಡಿ ನೀಗ್ರೊ ಜನರು ಮೂಗು ಮುಚ್ಚಿಕೊಳ್ಳುವುದಲ್ಲದೆ, ನಾವು ಅನಾಗರಿಕರೆಂದು ಕರೆಯುವ ಕೆಲವರು ಅದನ್ನು ಕೈಯಿಂದ ಮುಟ್ಟುವುದು ಸಹ ಇಲ್ಲ. ಒಬ್ಬ ಜುಲು ಮನುಷ್ಯನು ಒಂದು ಪೌಂಡು ಬೇಯಿಸಿದ ಮುಸುಕಿನ ಜೋಳವನ್ನು ಸ್ವಲ್ಪ ಉಪ್ಪು ಸೇರಿಸಿ ಒಂದೇಬಾರಿಗೆ ಊಟಮಾಡುವುದು ಸರ್ವಸಾಮಾನ್ಯ. ಒಡೆದು ಕುಟ್ಟಿದ ಮುಸುಕಿನ ಜೋಳದ ಗಂಜಿಯಾದರೆ ಒಪ್ಪೊತ್ತಿನ ಊಟ ವಾಯಿತು. ಮಾಂಸ ದೊರೆತಾಗ ಹಸಿಯದಾದರೂ, ಬೇಯಿಸಿದ್ದಾದರೂ, ಕುಟ್ಟಿದ್ದಾದರೂ, ಸುಟ್ಟಿದ್ದಾದರೂ ಸ್ವಲ್ಪ ಉಪ್ಪಿನೊಂದಿಗೆ ತಿಂದುಬಿಡು ತ್ತಾನೆ. ಯಾವ ಪ್ರಾಣಿಯ ಮಾಂಸವಾದರೂ ಆಗಬಹುದು.

ನೀಗ್ರೊ ಜನರ ಭಾಷೆಗಳನ್ನು ಆಯಾ ಪಂಗಡದ ಹೆಸರಿನಂತೆ ಕರೆಯುತ್ತಾರೆ. ಯೂರೋಪಿಯನರು ಹೋದನಂತರ ಬರವಣಿಗೆಯನ್ನು ಕಲಿತರು. ನೀಗ್ರೊ ಭಾಷೆಗಳಿಗೆ ವರ್ಣಮಾಲೆ ಇಲ್ಲ. ಬೈಬಲ್ ಮುಂತಾದ ಗ್ರಂಥಗಳನ್ನು ರೋಮನ್ ಲಿಪಿಯಿಂದ ನೀಗ್ರೊ ಭಾಷೆಗಳಲ್ಲಿ ಅಚ್ಚುಹಾಕಿಸಿದಾರೆ. ಜುಲು ಭಾಷೆ ಬಹಳ ಇಂಪು. ಅನೇಕ ಶಬ್ದಗಳು 'ಆ' ಎಂದು ಕೊನೆಗಾಣುವುದರಿಂದ ಭಾಷೆ ಕಿವಿಗೆ ಬಹಳ ಮೃದುವಾಗಿ ಮನೋಹರವಾಗಿದೆ. ಜುಲು ಶಬ್ದಗಳು ಬಹಳ ಅರ್ಥಗರ್ಭಿತವಾಗಿ, ಕಾವ್ಯಮಯವಾಗಿ ಇರುತ್ತವೆ ಎಂದು ಕೇಳಿಯೂ ಇದ್ದೇನೆ; ಓದಿಯೂ ಇದ್ದೇನೆ. ನಾನು ಕಲಿತ ಕೆಲವು ಶಬ್ದಗಳಿಂದ ಅದು ನಿಜವೆಂದು ನನ್ನ ಭಾವನೆ. ಅನೇಕ ಊರುಗಳ ಹೆಸರು ಬಹಳ ಸೊಗಸಾಗಿವೆ; ಅವುಗಳ ಇಂಗ್ಲಿಷ್ ಅನುವಾದ ಸಹ ಕೊಟ್ಟಿದ್ದೇನೆ. ವಾಚಕರಿಗೆ ಪರಿಚಯ ಮಾಡಿಕೊಡಲು ಈಗ ನನಗೆ ಜ್ಞಾಪಕವಿಲ್ಲ.

ಕ್ರೈಸ್ತ ಪಾದ್ರಿಗಳ ಹೇಳಿಕೆಯನ್ನು ನಂಬುವುದಾದರೆ ನೀಗ್ರೊ ಜನರಿಗೆ ಹಿಂದೆಯೂ, ಈಗಲೂ, ಯಾವ ಧರ್ಮವೂ ಇಲ್ಲ. ಆದರೆ 'ಧರ್ಮ' ಎಂಬ ಶಬ್ದವನ್ನು ವಿಶಾಲದೃಷ್ಟಿಯಿಂದ ಗ್ರಹಿಸುವುದಾದರೆ ಮಾನವನ ತಿಳಿವಿಗೆ ಅಗೋಚರವಾದ ಪರಾತ್ಪರ ಶಕ್ತಿಯೊಂದಿರುವುದೆಂದು ನೀಗ್ರೊ ಜನರೂ ನಂಬಿ ಪೂಜಿಸುತ್ತಾರೆ; ಆ ಶಕ್ತಿಗೆ ಭೀತರೂ ಆಗಿದ್ದಾರೆ. ಮಾನವದೇಹವು ನಶಿಸಿಹೋದರೂ, ವ್ಯಕ್ತಿತ್ವವು ನಶಿಸಿಹೋಗುವುದಿಲ್ಲ ಎಂಬ ಮಸಕುಭಾವನೆ ಅವರಿಗೂ ಇದೆ. ನೀತಿಯೇ ಎಲ್ಲ ಧರ್ಮದ ತಳಹದಿ ಎಂದು ನಾವು ಒಪ್ಪಿದರೆ, ನೀಗ್ರೊ ಜನರು ನೀತಿಯುತರಾದ್ದರಿಂದ ಧರ್ಮಜೀವಿಗಳೆಂದೂ ಹೇಳಬಹುದು. ಸತ್ಯ ಅಸತ್ಯದ ಅರಿವು ಅವರಿಗೆ ಸಂಪೂರ್ಣ ಇದೆ. ನೀಗ್ರೊ ಜನರು ತಮ್ಮ ಅನಾಗರಿಕ ಜೀವನದಲ್ಲಿ ಸತ್ಯಕ್ಕೆ ಕೊಟ್ಟಿರುವ ಬೆಲೆಯನ್ನು ಯೂರೋಪಿಯನರಾಗಲಿ ನಾವಾಗಲಿ ಕೊಟ್ಟಿದ್ದೇವೆಂದು ನಾನು ಧೈರ್ಯವಾಗಿ ಹೇಳಲಾರೆ. ಅವರಲ್ಲಿ ದೇವಸ್ಥಾನಗಳಿಲ್ಲ. ಇತರ ಜನಾಂಗಗಳಂತೆ ಅವರಲ್ಲಿಯೂ ಅನೇಕ ಮೂಢನಂಬಿಕೆಗಳಿವೆ.

ದೇಹಶಕ್ತಿಯಲ್ಲಿ ಇತರ ಯಾವ ಜನಾಂಗಕ್ಕೂ ಕಡಮೆಯಿಲ್ಲದ ಈ ಜನರು, ಯೂರೋಪಿಯನರ ಒಂದು ಮಗುವನ್ನು ನೋಡಿ ಹೆದರುತ್ತಾರೆಂದು ಕೇಳಿ ನೀವು ಆಶ್ಚರ್ಯಪಡಬಹುದು. ಯಾರಾದರೂ ಒಂದು ಪಿಸ್ತೂಲನ್ನು ತೋರಿಸಿದರೆ ಸಾಕು, ನೀಗ್ರೊ ಮನುಷ್ಯನು ಕಾಲಿಗೆ ಬುದ್ಧಿ ಹೇಳುತ್ತಾನೆ; ಇಲ್ಲವೆ ಕದಲದಷ್ಟು ಸ್ತಂಭೀಭೂತನಾಗುತ್ತಾನೆ. ಇದಕ್ಕೆ ಕಾರಣವಿಷ್ಟೆ. ತಮ್ಮಷ್ಟು ಜನಬಾಹುಳ್ಯವುಳ್ಳ ಶಕ್ತಿಯುತ ಜನಾಂಗವನ್ನು ಅತ್ಯಲ್ಪ ಸಂಖ್ಯೆಯ ಯೂರೋಪಿಯನರು ಆಳಲು ಸಮರ್ಥರಿರಬೇಕಾದರೆ ಅವರಲ್ಲಿ ಏನೋ ದೈವಶಕ್ತಿ ಇದೆ ಎಂಬ ಭಾವನೆಯು ನೀಗ್ರೊ ಜನರಲ್ಲಿ ಬೇರೂರಿದೆ. ಭರ್ಜಿ ಬಿಲ್ಲು ಬಾಣಗಳ ಉಪಯೋಗದಲ್ಲಿ ನೀಗ್ರೊ ಜನರು ಬಹಳ ನಿಪುಣರು. ಆದರೆ ಈಗ ಅವುಗಳೆಲ್ಲ ಅವರ ಕೈತಪ್ಪಿವೆ. ಬಂದೂಕನ್ನು ನೋಡಿಯೇ ಇಲ್ಲ. ಯಾವಾಗಲೂ ಉಪಯೋಗಿಸಿಲ್ಲ. ಒಂದು ಕಡ್ಡಿಯನ್ನು ಸಹ ಗೀಚದೆ, ಒಂದು ಬೆರಳನ್ನು ಅಲುಗಾಡಿಸಿ, ಬಂದೂಕಿನ ನಳಿಗೆಯಿಂದ ಒಂದು ಶಬ್ದ, ಒಂದು ಬೆಳಕು,

ಅತ್ಯುತ್ತಮವಾದ ಭೂಮಿ ಎಂದೂ ದೇಶೀಯರು ವರ್ಷದಲ್ಲಿ ಕೆಲವು ತಿಂಗಳು ಮಾತ್ರ ಕೆಲಸಮಾಡಿ ಸುಲಭದಲ್ಲಿ ಬೆಳೆ ತೆಗೆಯುತ್ತಿರುವರೆಂದೂ ನೋಡಿದರು. ತಮ್ಮಲ್ಲಿ ಬಂದೂಕು ಇತ್ತು; ಯುಕ್ತಿಯೂ ಇತ್ತು. ಕಾಡುಮೃಗಗಳನ್ನು ಪಳಗಿಸಿದಂತೆ ಮನುಷ್ಯರನ್ನು ಪಳಗಿಸುವುದನ್ನೂ ಅರಿತಿದ್ದರು. ಅದು ತಮ್ಮ ಧರ್ಮಕ್ಕೆ ವಿರೋಧವಲ್ಲವೆಂದು ಅವರ ಭಾವನೆ. ದೇಶೀಯರ ಶ್ರಮದಿಂದ ಕೆಲಸವನ್ನು ಏಕೆ ತೆಗೆದುಕೊಳ್ಳಬಾರದು? ಆದ್ದರಿಂದ ನ್ಯಾಯಾನ್ಯಾಯದ ವಿಮರ್ಶೆಯ ಗೋಜಿಗೆ ಹೋಗದೆ ದೇಶೀಯರ ಜೀತದಿಂದ ಡಚ್ಚರು ವ್ಯವಸಾಯವನ್ನು ಆರಂಭಿಸಿದರು.

ಡಚ್ಚರಂತೆ ಇಂಗ್ಲಿಷರೂ ವಲಸೆ ರಾಷ್ಟ್ರಗಳಿಗಾಗಿ ಅಲೆಯುತ್ತಿದ್ದವರು ಅಲ್ಲಿಗೇ ಬಂದರು. ಇಂಗ್ಲಿಷರೂ ಡಚ್ಚರೂ ಒಂದೇ ಬುಡಕಟ್ಟಿನವರು. ಇಬ್ಬರ ಶೀಲ ಸ್ವಭಾವ ಆಶೋತ್ತರಗಳೂ ಒಂದೇ. ಒಂದೇ ಗರಡಿಯ ವಸ್ತಾದಿಗಳು ಸಂಧಿಸಿದರೆ ಕತ್ತಿಮಸೆತವೇ ಖಂಡಿತ. ಆದ್ದರಿಂದ ತಮ್ಮ ಸ್ವಾರ್ಥಸಾಧನೆಯಲ್ಲಿ—ನೀಗ್ರೊ ಜನರನ್ನು ವಶಪಡಿಸಿಕೊಳ್ಳುವುದರಲ್ಲಿ—ಒಬ್ಬರಿಗೊಬ್ಬರಿಗೆ ಘರ್ಷಣೆ ಪ್ರಾರಂಭವಾಯಿತು. ಮೊದಲು ಸಣ್ಣ ವ್ಯಾಜ್ಯಗಳಿಂದ ಮೊದಲಾಗಿ ಅನಂತರ ಯುದ್ಧಗಳೇ ಆಗಬೇಕಾಯಿತು. ಮಜೂಬಾ ಬೆಟ್ಟದ ಹತ್ತಿರ ಇಂಗ್ಲಿಷರಿಗೆ ಸೋಲಾಯಿತು. ಮಜೂಬಾ ಯುದ್ಧದ ಗಾಯವು ಮಾಯದೆ, ೧೮೯೯ರಿಂದ ೧೯೦೨ರವರೆಗೆ ನಡೆದ ಬೋಅರ್ ಯುದ್ಧದಲ್ಲಿ ಪರ್ಯವಸಾನ ಹೊಂದಿತು. ಜನರಲ್ ಕ್ರಾಂಜಿಯು ಶರಣಾಗತನಾದಾಗ ಮಜೂಬಾಕ್ಕೆ ಪ್ರತೀಕಾರವಾಯಿತು ಎಂದು ಲಾರ್ಡ್ ರಾಬರ್ಟ್ಸನು ವಿಕ್ಟೋರಿಯ ಮಹಾರಾಣಿಗೆ ಕೇಬಲ್ ಮಾಡಿದನು. ಬೋಅರ್ ಯುದ್ಧಕ್ಕೆ ಮುಂಚೆ ಈ ಎರಡು ಜನಾಂಗಗಳಿಗೆ ಘರ್ಷಣೆಯಾದ ಸಮಯದಲ್ಲಿ, ಅನೇಕ ಡಚ್ಚರು ಬ್ರಿಟಿಷರ ಅಧಿಕಾರವು ಹೆಸರಿಗೆ ಕೂಡ ಇರಬಾರದೆಂದು ದಕ್ಷಿಣ ಆಫ್ರಿಕದ ಒಳದೇಶಕ್ಕೆ ವಲಸೆ ಹೋದರು. ಟ್ರಾನ್ಸ್‌ವಾಲ್ ಮತ್ತು ಆರೇಂಜ್ ಫ್ರೀ ಸ್ಟೇಟ್ ಪ್ರಾಂತಗಳಿಗೆ ಇದೇ ಮೂಲ.

ಈ ಡಚ್ಚರಿಗೆ ದಕ್ಷಿಣ ಆಫ್ರಿಕದಲ್ಲಿ ಬೋಅರ್‌ಗಳೆಂದು ಹೆಸರಾಯಿತು. ಮಗು ತಾಯಿಯ ಮಡಿಲನ್ನು ತಬ್ಬುವಂತೆ ಈಗಲೂ ಅವರು

ತಮ್ಮ ಭಾಷೆಯನ್ನು ಮಾತ್ರ ಬಿಟ್ಟಿಲ್ಲ. ತಮ್ಮ ಭಾಷೆಗೂ ಸ್ವಾತಂತ್ರ್ಯಕ್ಕೂ ನಿಕಟ ಬಾಂಧವ್ಯವಿದೆ ಎಂಬುದನ್ನು ಅವರು ಮನಗಂಡಿದ್ದಾರೆ. ಅನೇಕ ತಲೆಮಾರುಗಳ ಮಧ್ಯೆ ತಮ್ಮ ತಾಯ್ನುಡಿಯನ್ನು ಮಾತ್ರ ಕಾಪಾಡಿಕೊಂಡು ಬಂದಿದ್ದಾರೆ. ಬೋಅರ್‌ಗಳ ವೈಶಿಷ್ಟ್ಯಕ್ಕನುಗುಣವಾಗಿ ಭಾಷೆಯೂ ಸ್ವಲ್ಪ ರೂಪಾಂತರಹೊಂದಿತು. ಹಾಲೆಂಡಿನೊಡನೆ ವ್ಯವಹಾರ ದೂರ ವಾಗುತ್ತ ಬಂದಂತೆ–ಸಂಸ್ಕೃತದಿಂದ ಪ್ರಾಕೃತ ಹುಟ್ಟಿದ ಹಾಗೆ–ಡಚ್ಚರ ಭಾಷೆಯೂ ಮಾರ್ಪಾಟು ಹೊಂದಿತು. ತಮ್ಮ ಮಕ್ಕಳಿಗೆ ಹೆಚ್ಚು ಶ್ರಮ ವಾಗದಿರಲೆಂದು ಆ ಭಾಷೆಗೇ ಒಂದು ರೂಪ ಕೊಟ್ಟು ಅದನ್ನು 'ತಾಲ್' ಎಂದು ಕರೆದರು. ಅವರ ಪುಸ್ತಕಗಳು ಅಚ್ಚಾಗುವುದು 'ತಾಲ್' ಭಾಷೆ ಯಲ್ಲಿ, ಮಕ್ಕಳ ವಿದ್ಯಾಭ್ಯಾಸ ಅದೇ ಭಾಷೆಯಲ್ಲಿ, ಯೂನಿಯನ್ ಪಾರ್ಲಿ ಮೆಂಟಿನಲ್ಲಿ ಮಾತನಾಡುವುದು ಸಹ ಅದೇ ಭಾಷೆಯಲ್ಲಿ. ಯೂನಿಯನ್ ಸರ್ಕಾರ ಏರ್ಪಟ್ಟ ಮೇಲೆ ದಕ್ಷಿಣ ಆಫ್ರಿಕದಲ್ಲೆಲ್ಲ ಇಂಗ್ಲಿಷ್ ಮತ್ತು ತಾಲ್ ಭಾಷೆಗಳೆರಡಕ್ಕೂ ಸಮಾನ ಸ್ಥಾನವಿದೆ. ಸರ್ಕಾರದ ಗೆಜೆಟ್ ಮತ್ತು ಪಾರ್ಲಿಮೆಂಟಿನ ಎಲ್ಲ ವರದಿಗಳೂ ಎರಡೂ ಭಾಷೆಗಳಲ್ಲಿ ಅಚ್ಚಾಗುತ್ತಿವೆ.

ಬೋಅರ್ ಜನರು ಸರಳಜೀವಿಗಳು, ಮುಚ್ಚುಮರೆಯಿಲ್ಲದೆ ಮಾತ ನಾಡುವವರು, ಧರ್ಮಶ್ರದ್ಧಾಳುಗಳು. ದೊಡ್ಡ ದೊಡ್ಡ ವ್ಯವಸಾಯ ಹಿಡುವಳಿಗಳ ಮಧ್ಯೆ ವಾಸಮಾಡುತ್ತಾರೆ. ಈ ಹಿಡುವಳಿಗಳ ವಿಸ್ತಾರ ವನ್ನು ನಾವು ಊಹಿಸುವುದು ಕಷ್ಟ. ನಮ್ಮಲ್ಲಿ ಹಿಡುವಳಿ ಎಂದರೆ ಒಂದು ಅಥವಾ ಎರಡು ಎಕರೆ ಅಥವಾ ಇನ್ನೂ ಕಡಮೆ. ದಕ್ಷಿಣ ಆಫ್ರಿಕದಲ್ಲಿ ಒಬ್ಬೊಬ್ಬ ಹಿಡುವಳಿದಾರನಿಗೆ ಸಾವಿರಾರು ಎಕರೆ ಭೂಮಿ. ಒಂದೇ ಬಾರಿ ಎಲ್ಲ ಭೂಮಿಯನ್ನೂ ಸಾಗುವಳಿ ಮಾಡಬೇಕೆಂಬ ಆಸೆ ಯಿಲ್ಲ. ಯಾರಾದರೂ ಕೇಳಿದರೆ "ಇವತ್ತು ಬೀಳು ಇದ್ದರೆ, ನಾಳೆ ನಮ್ಮ ಮಕ್ಕಳು ಸಾಗುವಳಿ ಮಾಡುತ್ತಾರೆ" ಎಂದು ಹೇಳುತ್ತಾನೆ.

ಪ್ರತಿಯೊಬ್ಬ ಬೋಅರನೂ ಒಳ್ಳೆಯ ಯೋಧ. ತಮ್ಮತಮ್ಮಲ್ಲಿ ಎಷ್ಟೇ ಅಂತಃಕಲಹಗಳಿದ್ದರೂ, ತಮ್ಮ ಸ್ವಾತಂತ್ರ್ಯಕ್ಕೆ ಚ್ಯುತಿ ಬಂದಾಗ ಎಲ್ಲರೂ ಒಬ್ಬನಂತೆ ನಿಂತು ಯುದ್ಧಸನ್ನದ್ಧರಾಗಿ ಕಾದುತ್ತಾರೆ. ಯುದ್ಧಮಾಡು

ವುದು ಆ ಜನಾಂಗದ ಸ್ವಾಭಾವಿಕ ಗುಣವಾದ್ದರಿಂದ ಅವರಿಗೆ ಹೆಚ್ಚು ತರಪೇತು ಬೇಕಾಗಿಲ್ಲ. ಜನರಲ್ ಸ್ಮಟ್ಸ್, ಜನರಲ್ ಡಿವೆಟ್, ಜನರಲ್ ಹರ್ಟ್‌ಜಾಗ್ ಇವರು ದೊಡ್ಡ ನ್ಯಾಯವಾದಿಗಳೂ ವ್ಯವಸಾಯಗಾರರೂ ಆಗಿರುವಂತೆ ನುರಿತ ಯೋಧರೂ ಆಗಿದಾರೆ. ಜನರಲ್ ಬೋಥಾ ಅವರ ಹಿಡುವಳಿಯ ವಿಸ್ತೀರ್ಣ ೯,೦೦೦ ಎಕರೆ. ವ್ಯವಸಾಯದ ಗುಟ್ಟೆಲ್ಲ ಆತನಿಗೆ ಗೊತ್ತು. ಶಾಂತಿ ಸಂಧಾನಕ್ಕೆಂದು ಯೂರೋಪಿಗೆ ಹೋದಾಗ ಯೂರೋಪಿನಲ್ಲಿ ಈತನಿಗಿಂತ ಹೆಚ್ಚಿನ ಕುರಿ ನಿಪುಣರು ಯಾರೂ ಇರಲಿಲ್ಲವಂತೆ. ಪ್ರೆಸಿಡೆಂಟ್ ಕ್ರೂಗರ್ ತರುವಾಯ ಜನರಲ್ ಬೋಥಾ ಆಡಳಿತಸೂತ್ರ ವಹಿಸಿಕೊಂಡನು. ಆತನಿಗೆ ಇಂಗ್ಲಿಷ್ ಪರಿಚಯ ಬಹಳ ಚೆನ್ನಾಗಿತ್ತು; ಆದಾಗ್ಗೂ ಇಂಗ್ಲೆಂಡಿನಲ್ಲಿ ರಾಜರನ್ನೂ ಮಂತ್ರಿಗಳನ್ನೂ ನೋಡಿದಾಗ ತನ್ನ ಮಾತೃಭಾಷೆಯಲ್ಲಿಯೇ ಮಾತನಾಡಿದನು. ಇದು ಸರಿಯಲ್ಲವೆಂದು ಹೇಳುವವರಾದರೂ ಯಾರು? ತನಗೂ ಇಂಗ್ಲಿಷ್ ಬರುತ್ತದೆಂದು ತೋರಿಸಿಕೊಳ್ಳಲು ಹೋಗಿ ತಪ್ಪು ಮಾಡುವ ಅವಕಾಶವನ್ನೇಕೆ ಕೊಡಬೇಕು? ಇಲ್ಲಿ ಯಾವ ಶಬ್ದವನ್ನು ಹಾಕಲಿ ಎಂದು ಹುಡುಕುವುದರಲ್ಲಿ ಯೋಚನಾಲಹರಿಯನ್ನೇಕೆ ಕೆಡಿಸಬೇಕು? ತಿಳಿದೋ ತಿಳಿಯದೆಯೋ ಇಂಗ್ಲಿಷ್ ಮಂತ್ರಿಗಳು ತನಗೆ ತಿಳಿಯದ ಇಂಗ್ಲಿಷ್ ಭಾಷಾಸರಣಿಯನ್ನು ಉಪಯೋಗಿಸಬಹುದು, ಅವರು ಹೇಳಿದ್ದು ತನಗೆ ಅರ್ಥವಾಗದಿರಬಹುದು; ತಪ್ಪು ಉತ್ತರ ಕೊಟ್ಟು ಆ ಮೂಲಕ ತಾನು ಬಂದ ಕೆಲಸ ಕೆಡಬಹುದು. ಆ ತಪ್ಪಿಗೆ ಅವಕಾಶ ಏಕೆ ಕೊಡಬೇಕು?

ಗಂಡಸರಂತೆ ಬೊಅರ್ ಹೆಂಗಸರೂ ಧೈರ್ಯಶಾಲಿಗಳು, ಸರಳ ಜೀವಿಗಳು. ಬೊಅರ್ ಯುದ್ಧದಲ್ಲಿ ಬೋಅರ್‌ಗಳು ರಕ್ತ ಚೆಲ್ಲಿದ್ದರೆ, ಈ ಆತ್ಮಯಜ್ಞಕ್ಕೆ ಪ್ರೇರಕರು ಬೊಅರ್ ಹೆಂಗಸರು; ಮತ್ತು ಅವರ ಧೈರ್ಯ. ವೈಧವ್ಯ ಪ್ರಾಪ್ತಿಯಾಗುವುದೆಂದು ಅವರು ಎದೆಗೆಡಲಿಲ್ಲ; ಪರಿಣಾಮದ ಯೋಚನೆಯಲ್ಲಿ ಕಾಲ ಕಳೆಯಲು ಒಡಂಬಡಲಿಲ್ಲ.

ಬೋಅರ್‌ಗಳು ಧರ್ಮಶ್ರದ್ಧಾಳುಗಳಾದ ಕ್ರೈಸ್ತರೆಂದು ಹೇಳಿದ್ದೇನೆ. ಆದರೆ ಬೈಬಲ್ಲಿನ ಹೊಸ ಒಡಂಬಡಿಕೆ (New Testament) ಅವರಿಗೆ

ಒಪ್ಪಿಗೆ ಇರಲಿಲ್ಲ. ವಾಸ್ತವವಾಗಿ ನೋಡಿದರೆ ಯೂರೋಪ್ ಖಂಡದಲ್ಲಿ ಯಾರಿಗೂ ಅದರಲ್ಲಿ ನಂಬಿಕೆ ಇಲ್ಲ. ಶಾಂತಿಯೇ ಕ್ರೈಸ್ತನ ಧರ್ಮವೆಂದು ತಿಳಿದು ಅನುಷ್ಠಾನಮಾಡುವವರು ಅತಿ ವಿರಳರಾದರೂ, ಯೂರೋಪಿನಲ್ಲಿ ಬೈಬಲಿಗೆ ಗೌರವವಿದೆಯೆಂದು ಹೇಳುತ್ತಿದ್ದಾರೆ. ಬೋಅರ್ ಜನರು ಹೊಸ ಬೈಬಲಿನ ಹೆಸರು ಮಾತ್ರ ಕೇಳಿ ಬಲ್ಲರು. ಹಳೆಯ ಬೈಬಲನ್ನು ಭಯಭಕ್ತಿಯಿಂದ ಓದಿ, ಅದರಲ್ಲಿನ ಯುದ್ಧವರ್ಣನೆ ಎಲ್ಲವೂ ಅವರ ಹೃದ್ಗತವಾಗಿವೆ. 'ಮುಯ್ಯಿಗೆ ಮುಯ್ಯಿ' ಎಂಬ ಮೋಸಸ್‌ನ ತತ್ವವನ್ನು ಸಂಪೂರ್ಣವಾಗಿ ಒಪ್ಪಿ, ಆಚರಣೆಗೆ ಸಹ ತಂದಿರುತ್ತಾರೆ.

ತಮ್ಮ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ಕಷ್ಟನಷ್ಟಗಳನ್ನು ಅನುಭವಿಸಬೇಕಾದ್ದು ತಮ್ಮ ಧಾರ್ಮಿಕ ಕರ್ತವ್ಯವೆಂದು ಬೋಅರ್ ಹೆಂಗಸರು ತಿಳಿದಿದ್ದರು. ಅದರಿಂದಲೇ ತಾಳ್ಮೆಯಿಂದಲೂ ಸಂತೋಷದಿಂದಲೂ ಎಲ್ಲ ಕಷ್ಟಗಳನ್ನೂ ಅನುಭವಿಸಿದರು. ಅವರ ದೃಢಪ್ರತಿಜ್ಞೆಯನ್ನು ಮುರಿಯಲು ಲಾರ್ಡ್ ಕಿಚನರ್ ಮಾಡಬಾರದ ಪ್ರಯತ್ನ ಮಾಡಿದನು. ಅವರನ್ನು ಪ್ರತ್ಯೇಕ ಸೆರೆಮನೆಗಳಲ್ಲಿಟ್ಟು ಹೇಳಿ ತೀರದ ಹಿಂಸೆ ಕೊಟ್ಟನು. ಹಸಿವು, ಹಲ್ಲುಕಚ್ಚುವ ಚಳಿ, ಉರಿಬಿಸಿಲು, ಎಲ್ಲವನ್ನೂ ಸಹಿಸಿದರು. ಕೆಲವು ವೇಳೆ ಹೆಂಡ ಕುಡಿದು ಕಾಮವಾಸನೆಯಿಂದ ಉನ್ಮತ್ತರಾದ ಸೈನಿಕರನ್ನು ನಿಸ್ಸಹಾಯಕರಾದ ಹೆಂಗಸರ ಮೇಲೆ ಬಿಡುತ್ತಿದ್ದನು. ಆದರೂ ಬೋಅರ್ ಹೆಂಗಸರು ಜಗ್ಗಲಿಲ್ಲ. ಕೊನೆಗೆ ಎಡ್ವರ್ಡ್ ದೊರೆ ಬೇಸರಗೊಂಡು ವ್ಯಥೆಪಟ್ಟು, ಈ ಯುದ್ಧನೀತಿಯನ್ನು ಒಪ್ಪಲು ತನಗೆ ಸಾಧ್ಯವಿಲ್ಲವೆಂದೂ, ಬೋಅರ್‌ಗಳನ್ನು ಜಯಿಸಲು ಅದೊಂದೇ ಮಾರ್ಗವಾದರೆ ಯುದ್ಧವನ್ನು ಮುಂದುವರಿಸುವುದಕ್ಕಿಂತ ಯಾವ ತರದ ಶಾಂತಿಯಾದರೂ ಮೇಲೆಂದು ತಿಳಿಸಿ, ಯುದ್ಧವನ್ನು ಜಾಗ್ರತೆ ಕೊನೆಗಾಣಿಸಬೇಕೆಂದು ಬರೆದನು.

ಈ ಆರ್ತರೋದನ ಇಂಗ್ಲೆಂಡಿಗೆ ಮುಟ್ಟಿದ ಕೂಡಲೆ ಇಂಗ್ಲಿಷ್ ಜನರಿಗೆ ಬಹಳ ವ್ಯಥೆಯಾಯಿತು. ಬೋಅರ್‌ಗಳ ಧೈರ್ಯವನ್ನು ಮೆಚ್ಚಿದರು. ಇಷ್ಟು ದೊಡ್ಡ ಸಾಮ್ರಾಜ್ಯವನ್ನು ಒಂದು ಸಣ್ಣ ಜನಾಂಗ ಯುದ್ಧದಲ್ಲಿ ಎದುರಿಸುತ್ತಿರುವುದು ತಮಗೆ ಅಗೌರವವೆಂದು ಭಾವಿಸಿದ್ದರು.

ಆದರೆ ಸೆರೆಮನೆಗಳಲ್ಲಿನ ಹೆಂಗಸರ ಗೋಳಿನ ಕರೆ ದಕ್ಷಿಣ ಆಫ್ರಿಕದ ಕೆಲವು ಉದಾರಹೃದಯರಾದ ಇಂಗ್ಲಿಷ್ ಜನರಿಂದ ತಿಳಿದ ಒಡನೆ ಇಂಗ್ಲಿಷರು ಬಹಳ ವ್ಯಸನಪಟ್ಟರು. ದಿವಂಗತ ಸರ್ ಹೆನ್ರಿ ಕ್ಯಾಂಬೆಲ್ ಬ್ಯಾನರ್‌ಮನ್ನರು ಇಂಗ್ಲಿಷರ ಮನವರಿತು ಯುದ್ಧವನ್ನು ನಿಲ್ಲಿಸಲು ಪ್ರಯತ್ನಪಟ್ಟರು. ದಿವಂಗತ ಸ್ಟೆಡ್‌ರು ಇಂಗ್ಲಿಷರಿಗೆ ಸೋಲಾಗಲೆಂದು ಬಹಿರಂಗವಾಗಿ ಪ್ರಾರ್ಥನೆ ನಡಸಿದರಲ್ಲದೆ, ಇತರರೂ ಆ ರೀತಿ ಪ್ರಾರ್ಥನೆ ಮಾಡಬೇಕೆಂದು ಸಾರಿದರು. ಇದು ನಿಜವಾಗಿಯೂ ಒಂದು ಆಶ್ಚರ್ಯ ಕರವಾದ ದೃಶ್ಯ. ಕಷ್ಟವನ್ನು ಧೈರ್ಯದಿಂದ ಸಹಿಸಿದರೆ ಕಲ್ಲಾದರೂ ಕರಗುತ್ತದೆ. ಆತ್ಮಯಜ್ಞದ ಅಥವಾ ತಪಸ್ಸಿನ ಶಕ್ತಿಯೇ ಅದು. ಇದೇ ಸತ್ಯಾಗ್ರಹದ ಗುಟ್ಟು.

ಕೊನೆಗೆ ವೆರೀನಿಗಿಂಗ್ ಎಂಬಲ್ಲಿ ಒಪ್ಪಂದವಾಯಿತು. ದಕ್ಷಿಣ ಆಫ್ರಿಕದ ನಾಲ್ಕು ಕಾಲೊನಿಗಳೂ ಒಂದು ರಾಜ್ಯಾಡಳಿತದಲ್ಲಿ ಸೇರಿದುವು. ವೃತ್ತಪತ್ರಿಕೆ ಓದುವವರೆಲ್ಲರಿಗೂ ಈ ಒಪ್ಪಂದದ ವಿಷಯ ತಿಳಿದಿದ್ದರೂ, ಅನೇಕರಿಗೆ ಆ ಸಂಬಂಧವಾದ ಹೆಚ್ಚಿನ ವಿಷಯಗಳು ತಿಳಿಯದು. ಒಪ್ಪಂದವಾದ ಮರುಕ್ಷಣದಲ್ಲಿಯೇ ಯೂನಿಯನ್ ಸರಕಾರ ಏರ್ಪಡಲಿಲ್ಲ. ಪ್ರತಿಯೊಂದು ವಲಸೆ ರಾಷ್ಟ್ರಕ್ಕೂ ಒಂದೊಂದು ನ್ಯಾಯವಿಧಾಯಕ ಸಭೆಯಿತ್ತು. ಮಂತ್ರಿಮಂಡಲವು ನ್ಯಾಯವಿಧಾಯಕ ಸಭೆಗೆ ಪೂರ್ಣ ಜವಾಬ್ದಾರಿಯಾಗಿರಲಿಲ್ಲ. ಟ್ರಾನ್ಸ್‌ವಾಲ್ ಮತ್ತು ಆರೇಂಜ್ ಫ್ರೀ ಸ್ಟೇಟ್ ಪ್ರಾಂತಗಳು ಕ್ರೌನ್ ಕಾಲೊನಿಗಳೆಂದು ಭಾವಿಸಲ್ಪಟ್ಟುವು. ಜನರಲ್ ಬೋಥಾ ಮತ್ತು ಸ್ಮಟ್ಸ್ ಇವರುಗಳಿಗೆ ಅಂತಹ ಅಧೀನ ಸ್ವಾತಂತ್ರ್ಯ ಬೇಕಿರಲಿಲ್ಲ. ಅವರು ನ್ಯಾಯವಿಧಾಯಕ ಸಭೆಯಿಂದ ಹೊರಗಾದರು. ಅಸಹಕಾರವನ್ನು ಪ್ರಾರಂಭಿಸಿದರು. ಸರಕಾರದೊಂದಿಗೆ ತಮಗೆ ಯಾವ ಸಂಬಂಧವೂ ಬೇಕಿಲ್ಲವೆಂದರು. ಜನರಲ್ ಬೋಥಾ ಸ್ವಪ್ರತಿಷ್ಠೆಗಾಗಿ ಆ ರೀತಿ ಮಾಡುತ್ತಿದ್ದಾನೆಂದೂ ಅವನ ಸಹಾಯವಿಲ್ಲದೆ ರಾಜ್ಯದ ಆಡಳಿತವನ್ನು ನಡಸಲಾಗುವುದೆಂದೂ ಲಾರ್ಡ್ ಮಿಲ್ನರ್ ಉಗ್ರಟೀಕೆ ಮಾಡಿದನು. ವರನಿಲ್ಲದೆ ಮದುವೆ ಮಾಡಲು ಲಾರ್ಡ್ ಮಿಲ್ನರ್ ನಿಶ್ಚಯಿಸಿದನು.

ಬೋಅರ್‌ಗಳ ಧೈರ್ಯ, ಸ್ವಾತಂತ್ರ್ಯಪ್ರೇಮ, ತ್ಯಾಗಬುದ್ಧಿಗಳ ವಿಷಯವಾಗಿ ನಾನು ಬಹಳ ಹೊಗಳಿದ್ದೇನೆ. ಆದರೂ, ಅವರಲ್ಲೂ ಆ ವಿಷಮಕಾಲದಲ್ಲಿ ಭಿನ್ನಾಭಿಪ್ರಾಯಗಳಿದ್ದುವು; ಅಂಜುಬುರುಕರೂ ಕೆಲವರಿದ್ದರು. ಅಲ್ಪತೃಪ್ತರಾದ ಕೆಲವು ಸ್ವಾರ್ಥಿಗಳನ್ನು ಒಳಹಾಕಿಕೊಂಡು ಲಾರ್ಡ್ ಮಿಲ್ನರನು ಬೋಅರ್‌ಗಳದೇ ಒಂದು ಪಕ್ಷ ಕಟ್ಟಿದನು. ಅವರ ಸಹಾಯದಿಂದ ನ್ಯಾಯವಿಧಾಯಕ ಸಭೆಗಳನ್ನು ನಡಸಬಹುದೆಂದು ನಂಬಿದನು. ಮುಖ್ಯ ನಟನಿಲ್ಲದೆ ನಾಟಕ ಆಡುವುದು ಸಹ ಕಷ್ಟ. ರಾಜಕೀಯದಲ್ಲಿ ರಾಜಕಾರಣ ಮುಖಂಡನಿಲ್ಲದೆ ರಾಜ್ಯಸೂತ್ರಗಳನ್ನು ನಡಸಬಲ್ಲೆನೆಂದು ಆತ್ಮವಂಚನೆ ಮಾಡಿಕೊಳ್ಳುವ ರಾಜತಂತ್ರಜ್ಞನು ಹುಚ್ಚನೇ ಸರಿ. ಲಾರ್ಡ್ ಮಿಲ್ನರನ ಅವಸ್ಥೆಯೂ ಹೀಗೆಯೇ ಆಯಿತು. ಹೊರಗೆ ಬಡಾಯಿ ಕೊಚ್ಚಿಕೊಳ್ಳುತ್ತಲಿದ್ದರೂ, ಜನರಲ್ ಬೋಥಾನ ಸಹಾಯವಿಲ್ಲದೆ ಟ್ರಾನ್ಸ್‌ವಾಲ್ ಮತ್ತು ಫ್ರೀಸ್ಟೇಟ್‌ಗಳ ರಾಜ್ಯಭಾರ ನಡಸುವುದು ದುಸ್ಸಾಧ್ಯವಾಯಿತು. ಅನೇಕ ವೇಳೆ ಲಾರ್ಡ್ ಮಿಲ್ನರನು ತನ್ನ ತೋಟದಲ್ಲಿ ಯೋಚನಾಮಗ್ನನಾಗಿ, ಮನಃಕ್ಲೇಶಪಡುತ್ತಲಿದ್ದನು. ವೆರೀನಿಗಿಂಗ್ ಒಪ್ಪಂದದ ಪ್ರಕಾರ ಒಳಆಡಳಿತದಲ್ಲಿ ಕೂಡಲೆ ಬೋಅರ್‌ಗಳಿಗೆ ಸಂಪೂರ್ಣ ಸ್ವಾತಂತ್ರ್ಯ ದೊರೆಯಬೇಕೆಂದು ಜನರಲ್ ಬೋಥಾ ಸ್ಪಷ್ಟವಾಗಿ ಹೇಳಿದನು. ಅದಿಲ್ಲದಿದ್ದರೆ ತಾನು ಒಪ್ಪಂದಕ್ಕೆ ಸಹಿ ಹಾಕುತ್ತಿದ್ದಿಲ್ಲವೆಂದು ತಿಳಿಸಿದನು. ಲಾರ್ಡ್ ಕಿಚನರ್ ಅಂತಹ ಯಾವ ವಚನವನ್ನೂ ಕೊಟ್ಟಿರಲಿಲ್ಲವೆಂದು ಅದಕ್ಕೆ ಉತ್ತರ ಕೊಟ್ಟನು. ತಮ್ಮ ರಾಜನಿಷ್ಠೆಯನ್ನು ಕಾರ್ಯತಃ ವ್ಯಕ್ತಗೊಳಿಸಿದಂತೆಲ್ಲ ಬೋಅರ್‌ಗಳಿಗೆ ಸ್ವರಾಜ್ಯವನ್ನು ಕೊಡುವುದಾಗಿ ತಿಳಿಸಿದನು. ಇವರಲ್ಲಿ ಯಾರ ಮಾತು ಸತ್ಯವೆಂಬುದನ್ನು ತೀರ್ಮಾನಿಸುವವರು ಯಾರು? ಪಂಚಾಯಿತಿಗೆ ಒಪ್ಪಿಸಿರೆಂದರೆ ಜನರಲ್ ಬೋಥಾ ಒಪ್ಪುವುದಾದರೂ ಹೇಗೆ? ಈ ಸಂದರ್ಭದಲ್ಲಿ ಸಮ್ರಾಟ ಸರಕಾರ ಕೊಟ್ಟ ತೀರ್ಪು ಬಹಳ ಅಭಿನಂದನೀಯವಾದುದು. ಬಲಹೀನಪಕ್ಷದ ಅಭಿಪ್ರಾಯವನ್ನು ಬಲಿಷ್ಠಪಕ್ಷ ಒಪ್ಪಬೇಕೆಂದು ಅವರು ತೀರ್ಮಾನಿಸಿದರು. ನ್ಯಾಯ ಮತ್ತು ಸತ್ಯದ ದೃಷ್ಟಿಯಲ್ಲಿ ಈ ತೀರ್ಮಾನವೇ ಸರಿ. ನಾನು ಏನೋ ಹೇಳ

ಬೇಕೆಂದು ಇಷ್ಟಪಟ್ಟಿರಬಹುದು. ಆದರೆ ನನ್ನ ಭಾಷಣ ಅಥವಾ ಬರಹ ದಿಂದ ನನ್ನ ಶ್ರೋತೃ ಅಥವಾ ಪಾಠಕನು ಯಾವ ಅರ್ಥದಲ್ಲಿ ಗ್ರಹಿಸು ತ್ತಾನೋ ಆ ಅರ್ಥವನ್ನೇ ನಾನು ಹೇಳಬಯಸಿದೆನೆಂದು ನಾನು ಒಪ್ಪ ಬೇಕು. ನಮ್ಮ ಜೀವನದಲ್ಲಿ ಈ ಚಿನ್ನದಂಥ ಮಾರ್ಗವನ್ನು ನಾವು ಅನೇಕ ವೇಳೆ ಬಿಟ್ಟುಬಿಡುತ್ತೇವೆ. ಆದ್ದರಿಂದಲೇ ಅನೇಕ ವ್ಯಾಜ್ಯಗಳು ಹುಟ್ಟು ವುದು. ಅಸತ್ಯಕ್ಕಿಂತಲೂ ಕೀಳಾದ ಅಪಾರ್ಥಗಳು ಹುಟ್ಟಿ ಸತ್ಯವನ್ನು ಮರೆಮಾಚುವುವು.

ಆದ್ದರಿಂದ ಸತ್ಯಕ್ಕೆ– ಇಲ್ಲಿ ಜನರಲ್ ಬೋಥಾ ಪಕ್ಷಕ್ಕೆ– ಜಯ ದೊರೆತ ಒಡನೆ ಆತನು ಪೂರ್ಣ ಸಹಕಾರವನ್ನು ನೀಡಿದನು. ಎಲ್ಲ ಕಾಲೊನಿಗಳೂ ಕೊನೆಯಲ್ಲಿ ಒಂದಾಗಿ ದಕ್ಷಿಣ ಆಫ್ರಿಕಕ್ಕೆ ಪೂರ್ಣ ಸ್ವರಾಜ್ಯ ಲಭಿಸಿತು. ಅದರ ಬಾವುಟ ಯೂನಿಯನ್ ಜಾಕ್ ಆಗಿದ್ದು, ಭೂಪಟದ ಮೇಲೆ ಅದು ಕೆಂಪುಬಣ್ಣದಿಂದ ಕಂಡರೂ, ದಕ್ಷಿಣ ಆಫ್ರಿಕ ಪೂರ್ಣ ಸ್ವತಂತ್ರ ರಾಷ್ಟ್ರ. ದಕ್ಷಿಣ ಆಫ್ರಿಕ ಸರಕಾರದ ಅನುಮತಿ ಇಲ್ಲದೆ ಒಂದು ಬಿಡಿಕಾಸನ್ನೂ ದಕ್ಷಿಣ ಆಫ್ರಿಕದಿಂದ ಬ್ರಿಟಿಷ್ ಸಮ್ರಾಟ ಸರಕಾರ ತೆಗೆದುಕೊಳ್ಳಲಾರದು. ಅಷ್ಟೇ ಅಲ್ಲ, ಯೂನಿಯನ್ ಜಾಕ್ ಬಾವುಟವನ್ನು ತೆಗೆದು, ಪೂರ್ಣ ಸ್ವತಂತ್ರ ರಾಷ್ಟ್ರವೆಂದು ಹೇಳಲು ಸಹ ದಕ್ಷಿಣ ಆಫ್ರಿಕಕ್ಕೆ ಅಧಿಕಾರವಿದೆ ಎಂದು ಬ್ರಿಟಿಷ್ ಸಚಿವರು ಹೇಳಿ ದ್ದಾರೆ. ಬೋಅರ್‌ಗಳು ಇದುವರೆಗೆ ಆ ರೀತಿ ಮಾಡದೆ ಇದ್ದರೆ ಅದಕ್ಕೆ ಬಲವಾದ ಕಾರಣಗಳಿವೆ. ಬೋಅರ್ ಮುಖಂಡರು ಬುದ್ಧಿವಂತರು ಮತ್ತು ದೂರಾಲೋಚನೆಯುಳ್ಳವರು. ಬ್ರಿಟಿಷ್ ಚಕ್ರಾಧಿಪತ್ಯದೊಡನೆ ಪಾಲುಗಾರಿಕೆಯಲ್ಲಿರುವುದರಲ್ಲಿ ಅವರಿಗೆ ಯಾವ ನಷ್ಟವೂ ಇಲ್ಲ. ನೇಟಾಲಿನಲ್ಲಿ ಇಂಗ್ಲಿಷರ ಸಂಖ್ಯೆ ಹೆಚ್ಚು. ಕೇಪ್ ಕಾಲೊನಿಯಲ್ಲಿ ಬೋಅರ್ ಜನರಷ್ಟು ಇಲ್ಲದೆಹೋದರೂ, ಇಂಗ್ಲಿಷರ ಸಂಖ್ಯೆಯೇನೂ ಕಡೆಗಣಿಸುವಂತೆ ಇಲ್ಲ. ಜೋಹನೆಸ್‌ಬರ್ಗ್‌ನಲ್ಲಿಯೂ ಇಂಗ್ಲಿಷರ ಪ್ರಾಬಲ್ಯ ಹೆಚ್ಚು. ಈ ಸಂದರ್ಭದಲ್ಲಿ ಸ್ವತಂತ್ರ ರಿಪಬ್ಲಿಕನ್ನು ಏರ್ಪಡಿಸಲು ಬೋಅರ್‌ಗಳು ಪ್ರಯತ್ನಪಟ್ಟರೆ ಅಂತಃಕಲಹ, ದಂಗೆ ಗಳಿಗೆ ಅವಕಾಶ ಆಗುತ್ತದೆಯೇ ವಿನಾ ಯಾವ ಪ್ರಯೋಜನವೂ ಇಲ್ಲ.

ಆದ್ದರಿಂದ ದಕ್ಷಿಣ ಆಫ್ರಿಕ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಒಂದು ಡೊಮಿನಿಯನ್ ಆಗಿ ಉಳಿದಿದೆ.

ಯೂನಿಯನ್ ರಾಜ್ಯದ ರಾಜ್ಯಾಂಗ ರಚನೆ ಹೇಗಾಯಿತೆಂದು ತಿಳಿಯುವುದು ಆವಶ್ಯಕ. ಕಾಲೊನಿಗಳ ನ್ಯಾಯವಿಧಾಯಕ ಸಭೆಗಳು ಚುನಾಯಿಸಿದ ಎಲ್ಲ ಪಕ್ಷಗಳ ಪ್ರತಿನಿಧಿಗಳೂ ಒಂದು ರಾಷ್ಟ್ರಮಹಾಸಭೆಯಲ್ಲಿ ಸೇರಿ ಒಮ್ಮತದಿಂದ ಒಂದು ರಾಜ್ಯಾಂಗ ಮಸೂದೆಯನ್ನು ತಯಾರಿಸಿದರು. ಬ್ರಿಟಿಷ್ ಪಾರ್ಲಿಮೆಂಟು ಚಾಚೂ ತಪ್ಪದೆ ಅದನ್ನು ಅನುಮೋದಿಸಿತು. ಇಂಗ್ಲೆಂಡಿನ ಕಾಮನ್ಸ್ ಸಭೆಯ ಸದಸ್ಯರೊಬ್ಬರು ಅದರಲ್ಲಿನ ವ್ಯಾಕರಣ ನ್ಯೂನತೆಯನ್ನು ತಿದ್ದಬೇಕೆಂದು ಸೂಚಿಸಿದರು. ದಿವಂಗತ ಸರ್ ಹೆನ್ರಿ ಕ್ಯಾಂಬೆಲ್ ಬ್ಯಾನರ್‌ಮನ್ನರು, "ರಾಜ್ಯಾಡಳಿತ ನಡಸಲು ವ್ಯಾಕರಣಶುದ್ಧತೆ ಮುಖ್ಯವಲ್ಲ; ಬ್ರಿಟಿಷ್ ಮಂತ್ರಿಮಂಡಲಕ್ಕೂ ದಕ್ಷಿಣ ಆಫ್ರಿಕ ಮಂತ್ರಿಗಳಿಗೂ ಆದ ಒಪ್ಪಂದದ ಪ್ರಕಾರ ಏರ್ಪಟ್ಟ ರಾಜ್ಯಾಂಗವಿದು; ವ್ಯಾಕರಣದ ತಪ್ಪನ್ನು ಸರಿಪಡಿಸಲು ಸಹ ಬ್ರಿಟಿಷ್ ಪಾರ್ಲಿಮೆಂಟಿಗೆ ಅಧಿಕಾರವಿಲ್ಲ" ಎಂದು ತಿದ್ದುಪಡಿಯನ್ನು ವಿರೋಧಿಸಿದರು. ಕೊನೆಯಲ್ಲಿ ಅದೇ ರಾಜ್ಯಾಂಗ ಮಸೂದೆಯನ್ನು ಸ್ವಲ್ಪವೂ ತಿದ್ದದೆ ಸಾಮ್ರಾಜ್ಯ ಶಾಸನವನ್ನಾಗಿ ಪಾರ್ಲಿಮೆಂಟಿನಲ್ಲಿ ಅನುಮೋದಿಸಿದರು.

ಈ ಸಂದರ್ಭದಲ್ಲಿ ಇನ್ನೊಂದು ವಿಶೇಷ ವಿಷಯವನ್ನು ಗಮನಿಸಬೇಕಾದ ಅವಶ್ಯವಿದೆ. ಯೂನಿಯನ್ ರಾಜ್ಯಾಂಗ ಶಾಸನದ ವಿಧಿಗಳು ಅರ್ಥವಿಲ್ಲದ ಆಡಂಬರಗಳೆಂದು ಕಾಣಬಹುದು. ಅದರಿಂದ ವೆಚ್ಚವೂ ಹೆಚ್ಚಿದೆ. ಇದು ರಾಜ್ಯಾಂಗ ನಿರ್ಮಾಣಕರಿಗೆ ಗೊತ್ತಿರಲಿಲ್ಲವೆಂದಲ್ಲ. ಆದರೆ ಅವರ ಆಸೆ ತಮ್ಮದೇ ಕೊನೆಯ ಮಾತಾಗಿರಬೇಕೆಂದಿರಲಿಲ್ಲ; ಸಾಧ್ಯವಾದಮಟ್ಟಿಗೆ ಭಿನ್ನಾಭಿಪ್ರಾಯಗಳನ್ನು ಅರಿತು, ಸರಿಪಡಿಸಿ, ರಾಜ್ಯಘಟನೆಯನ್ನು ಯಶಸ್ವಿಯಾಗಿ ಮಾಡಬೇಕೆಂದಿತ್ತು. ಆದ್ದರಿಂದ ಯೂನಿಯನ್ ಸರಕಾರಕ್ಕೆ ಈಗಲೂ ನಾಲ್ಕು ಮುಖ್ಯ ಪಟ್ಟಣಗಳಿವೆ; ಯಾವ ಕಾಲೊನಿಗೂ ತನ್ನ ಮುಖ್ಯ ಪಟ್ಟಣವನ್ನು ಬಿಟ್ಟುಕೊಡಲು ಇಷ್ಟವಿಲ್ಲ. ಅದರಂತೆ ಹಿಂದಿನ ಕಾಲೊನಿಗಳ ನ್ಯಾಯವಿಧಾಯಕ

ಸಭೆಗಳನ್ನು ರದ್ದುಗೊಳಿಸಿದರೂ, ಸ್ವಲ್ಪ ಹೆಚ್ಚು ಕಡಮೆ ಅಷ್ಟೇ ಅಧಿಕಾರದ ಪ್ರಾಂತ ಸಭೆಗಳು ಏರ್ಪಟ್ಟಿವೆ. ಗವರ್ನರ್ ಹುದ್ದೆಗಳನ್ನು ತೆಗೆದು ಇದ್ದರೂ ಸಮಾನ ಅಧಿಕಾರದ ಪ್ರಾಂತೀಯ ಆಡಳಿತಗಾರರ ಅಧಿಕಾರ ಸ್ಥಾನಗಳು ನಿರ್ಮಾಣವಾಗಿವೆ. ನಾಲ್ಕು ಸ್ಥಳೀಯ ಪ್ರಾಂತ ಸಭೆಗಳು, ನಾಲ್ಕು ಮುಖ್ಯ ಪಟ್ಟಣಗಳು, ನಾಲ್ಕು ಗವರ್ನರುಗಳು ಆಡಂಬರ ಮಾತ್ರ ವಲ್ಲದೆ ಅನವಶ್ಯವೆಂದೂ ಎಲ್ಲರಿಗೂ ತಿಳಿದಿದೆ. ಆದರೆ ದಕ್ಷಿಣ ಆಫ್ರಿಕದ ರಾಜಕಾರಣ ನಿಪುಣರು ಅವುಗಳೆಲ್ಲವನ್ನೂ ಲಕ್ಷಿಸಲಿಲ್ಲ. ಆಡಂಬರ, ದುಂದುಗಾರಿಕೆ–ಎಂದು ತೋರಿದರೂ, ನಾಲ್ಕು ರಾಷ್ಟ್ರಗಳ ಒಕ್ಕೂಟ ಅವಶ್ಯವಾಗಿದ್ದ ಕಾರಣ ಹೊರಗಿನವರು ಏನೇ ಹೇಳಲಿ ತಮಗೆ ಸರಿ ತೋರಿದಂತೆ ನಡೆದು ಬ್ರಿಟಿಷ್ ಪಾರ್ಲಿಮೆಂಟಿನ ಒಪ್ಪಿಗೆ ಮುದ್ರೆಯನ್ನು ಪಡೆದರು.

ದಕ್ಷಿಣ ಆಫ್ರಿಕದ ಸತ್ಯಾಗ್ರಹ ಸಮರದ ಒಳಗುಟ್ಟಿನ ವಿವರಣೆ ದಕ್ಷಿಣ ಆಫ್ರಿಕದ ಚರಿತ್ರೆ ತಿಳಿಯದೆ ಅರ್ಥವಾಗುವುದು ಕಷ್ಟವಾದ್ದರಿಂದ ಆದಷ್ಟು ಸಂಕ್ಷೇಪವಾಗಿ ಆ ಚರಿತ್ರೆಯನ್ನು ಇಲ್ಲಿ ತಿಳಿಸಿದ್ದೇನೆ. ಸತ್ಯಾಗ್ರಹ ಪ್ರಾರಂಭಿಸುವ ಮೊದಲು ಭಾರತೀಯರು ದಕ್ಷಿಣ ಆಫ್ರಿಕಕ್ಕೆ ಹೇಗೆ ಬಂದರು, ಅಲ್ಲಿನವರೆಗೆ ಅವರ ಕಷ್ಟಗಳೇನು ಎಂಬುದನ್ನು ಇನ್ನು ತಿಳಿಸಿದರೆ ಸಾಕು.

## ೩. ದಕ್ಷಿಣ ಆಫ್ರಿಕದಲ್ಲಿ ಭಾರತೀಯರ ಪ್ರವೇಶ

ಇಂಗ್ಲಿಷರು ಹೇಗೆ ಬಂದರೆಂದು ಹಿಂದಿನ ಪ್ರಕರಣದಲ್ಲಿ ನೋಡಿದ್ದೇವೆ. ನೇಟಾಲಿನಲ್ಲಿ ವಲಸೆ ನಿಂತು ಜುಲುಗಳಿಂದ ಕೆಲವು ರಿಯಾಯಿತಿ ಪಡೆದರು. ನೇಟಾಲಿನಲ್ಲಿ ಅತ್ಯುತ್ತಮವಾದ ಕಬ್ಬು, ಟೀ ಮತ್ತು ಕಾಫಿ ಬೆಳೆಯಬಹುದೆಂದು ಕಂಡುಹಿಡಿದರು. ಅಧಿಕ ಪ್ರಮಾಣದಲ್ಲಿ ಪೈರು ಬೆಳೆಯಲು ಸಾವಿರಾರು ಜನ ಕೆಲಸಗಾರರು ಬೇಕಾಯಿತು; ಅದು ವಲಸೆ ಹೋದ ಅಲ್ಪಸ್ವಲ್ಪ ಜನರ ಶಕ್ತಿಯನ್ನು ಮೀರಿದ ಕೆಲಸವಾಗಿತ್ತು. ನೀಗ್ರೊ ಜನರಿಂದ ಕೆಲಸ ತೆಗೆದುಕೊಳ್ಳಬೇಕೆಂದು ಮೊದಲು ಅವರಿಗೆ ಆಸೆ ತೋರಿಸಿದರು, ಅನಂತರ ಹೆದರಿಸಿನೋಡಿದರು. ಆದರೆ ಗುಲಾಮಗಿರಿ

ಪದ್ಧತಿ ಹೋಗಿದ್ದುದರಿಂದ ನೀಗ್ರೋ ಜನರು ಯಾರೂ ಒಪ್ಪಲಿಲ್ಲ. ನೀಗ್ರೋ ಜನರು ಶ್ರಮಜೀವಿಗಳಲ್ಲ. ಸಾಮಾನ್ಯವಾಗಿ ವರ್ಷಕ್ಕೆ ಆರು ತಿಂಗಳು ಕೆಲಸಮಾಡಿ ವರ್ಷಕ್ಕಾಗುವ ಬೆಳೆಯನ್ನು ತೆಗೆಯುತ್ತಾರೆ. ವರ್ಷವೆಲ್ಲ ಜೀತಮಾಡಲು ಒಪ್ಪಿ ಮತ್ತೊಬ್ಬರ ಅಡಿಯಾಳು ಏಕಾಗ ಬೇಕು? ಕಾಯಂ ಕೂಲಿಗಳಿಲ್ಲದೆ ಇಂಗ್ಲಿಷ್ ವಲಸೆಗಾರರು ತಮ್ಮ ತೋಟಗಳಲ್ಲಿ ಕೆಲಸ ಮುಂದುವರಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ ತೋಟಗಾರರು ಇಂಡಿಯ ಸರಕಾರದೊಂದಿಗೆ ವ್ಯವಹಾರ ನಡಸಿ ಕೂಲಿ ಗಳನ್ನು ಒದಗಿಸಿಕೊಡಬೇಕೆಂದು ಕೇಳಿದರು. ಇಂಡಿಯ ಸರಕಾರ ಒಪ್ಪಿತು. ೧೮೬೦ನೆಯ ನವೆಂಬರ್ ೧೬ನೆಯ ದಿನ ಮೊದಲನೆಯ ಗುಂಪು ನೇಟಾಲ್ ಸೇರಿತು. ಅದು ನಿಜವಾಗಿಯೂ ಚರಿತ್ರಾರ್ಹವಾದ ದಿನ. ಇಲ್ಲದಿದ್ದರೆ ದಕ್ಷಿಣ ಆಫ್ರಿಕದಲ್ಲಿ ಭಾರತೀಯರೂ ಇರುತ್ತಿರಲಿಲ್ಲ; ಸತ್ಯಾಗ್ರಹವೂ ನಡೆಯುತ್ತಿರಲಿಲ್ಲ; ಈ ಪುಸ್ತಕ ಬರೆಯಲು ಅವಕಾಶವೂ ದೊರೆಯುತ್ತಿರಲಿಲ್ಲ.

ನನ್ನ ಅಭಿಪ್ರಾಯದಲ್ಲಿ ಇಂಡಿಯ ಸರಕಾರ ಆ ರೀತಿ ಕೂಲಿಗಳನ್ನು ಕಳುಹಿಸಲು ಒಪ್ಪಿದುದು ತಪ್ಪು. ಹಿಂದೂ ದೇಶದ ಬ್ರಿಟಿಷ್ ಅಧಿಕಾರಿ ಗಳು ತಿಳಿದೊ ತಿಳಿಯದೆಯೊ ನೇಟಾಲಿನ ತಮ್ಮ ಸೋದರರಿಗೆ ಪಕ್ಷಪಾತ ತೋರಿಸಿದರು. ಕೂಲಿಗಳ ಒಪ್ಪಂದದ ಷರತ್ತುಗಳಲ್ಲಿ ಕೂಲಿಗಾರರ ಹಿತಸಂರಕ್ಷಣೆಗೆ ಅವಶ್ಯವಾದ ಷರತ್ತುಗಳೆಲ್ಲವನ್ನೂ ಸೇರಿಸಿದ್ದೇನೊ ನಿಜ. ಅವರ ಊಟಕ್ಕೂ ಒಳ್ಳೆಯ ವ್ಯವಸ್ಥೆಯಿತ್ತು. ಆ ದೂರ ದೇಶದಲ್ಲಿ ಈ ನಿರಕ್ಷರಕುಕ್ಷಿಗಳಿಗೆ ಏನಾದರೂ ಕೊರತೆಗಳುಂಟಾದರೆ ಅವುಗಳನ್ನು ಹೇಗೆ ನಿವಾರಿಸಿಕೊಳ್ಳಬೇಕೆಂಬುದನ್ನು ಮಾತ್ರ ಯೋಚಿಸಲಿಲ್ಲ. ಅವರ ಧಾರ್ಮಿಕ ಜೀವನದ ಆವಶ್ಯಕತೆಗಾಗಲಿ, ನೀತಿರಕ್ಷಣೆಗಾಗಲಿ ಯಾವ ಗಮನವನ್ನೂ ಕೊಡಲಿಲ್ಲ. ಶಾಸನ ವಿಧಿಯಂತೆ ಗುಲಾಮಗಿರಿ ರದ್ದಾ ಗಿದ್ದರೂ ಬಂಡವಾಳಗಾರರು ಕೆಲಸಗಾರರನ್ನು ಗುಲಾಮರಂತೆ ನೋಡ ಬಹುದೆಂದು ಇಂಡಿಯ ಸರಕಾರದ ಅಧಿಕಾರಿಗಳು ಯೋಚಿಸಲಿಲ್ಲ. ನೇಟಾಲಿಗೆ ಹೋದ ಕೂಲಿಗಾರರು ತಮ್ಮ ಅವಧಿ ಮುಗಿಯುವ ವರೆಗೂ ಗುಲಾಮರಾಗುತ್ತಾರೆಂದು ಗ್ರಹಿಸಲಿಲ್ಲ. ಕೂಲಿಗಾರರ ಸ್ಥಿತಿಗತಿಗಳನ್ನು

ಕೂಲಂಕಷವಾಗಿ ವಿಚಾರಮಾಡಿದ್ದ ಸರ್ ಡಬ್ಲ್ಯು. ಡಬ್ಲ್ಯು. ಹಂಟರ್ ಎಂಬಾತನು ನೇಟಾಲಿನ ಭಾರತೀಯ ಕೂಲಿಗಾರರ ಸ್ಥಿತಿಯನ್ನು ನೋಡಿ, ಅವರ ಸ್ಥಿತಿ ಗುಲಾಮಗಿರಿಯನ್ನು ಹೋಲುತ್ತದೆ, 'ಅರೆ-ಗುಲಾಮಗಿರಿ' ಎಂದು ಹೇಳಿದ್ದಾನೆ. ಇನ್ನೊಂದು ಬಾರಿ ಒಂದು ಪತ್ರದಲ್ಲಿ ಅವರ ಸ್ಥಿತಿಗೂ ಗುಲಾಮಗಿರಿಗೂ ಬಹಳ ಸಮೀಪ ಎಂದಿದ್ದಾನೆ. ನೇಟಾಲಿನ ಯೂರೋಪಿಯನ್ ಮುಖಂಡನಾದ ಹ್ಯಾರಿ ಎಸ್ಕಾಮ್ ಎಂಬಾತನು ಒಂದು ಸಮಿತಿಯ ಮುಂದೆ ಸಾಕ್ಷ್ಯ ಕೊಟ್ಟಾಗ ಅದರ ಸತ್ಯಾಂಶವನ್ನು ಒಪ್ಪಿದ್ದಾನೆ. ನೇಟಾಲಿನ ಯೂರೋಪಿಯನ್ ಮುಖಂಡರ ಹೇಳಿಕೆಗಳಿಂದಲೇ ಇದಕ್ಕೆ ಬೇಕಾಷ್ಟು ಸಾಕ್ಷ್ಯವನ್ನು ಒದಗಿಸಬಹುದು; ಇಂಡಿಯ ಸರಕಾರಕ್ಕೆ ಕಳುಹಿದ ಅರ್ಜಿಗಳಲ್ಲಿ ಅವೆಲ್ಲ ಅಡಕವಾಗಿವೆ. ಆದರೆ ಅದೃಷ್ಟಕ್ಕೆ ಹೊಣೆ ಯಾರು? ಈ ಕೂಲಿಗಾರರನ್ನು ನೇಟಾಲಿಗೆ ಕರೆದೊಯ್ದ ಹಡಗೇ ಸತ್ಯಾಗ್ರಹ ಬೀಜವನ್ನೂ ಅವರೊಂದಿಗೆ ಕೊಂಡೊಯ್ದಿತು.

ನೇಟಾಲಿನಲ್ಲಿ ಕೆಲಸಕ್ಕೆ ಕೂಲಿಗಾರರನ್ನು ಸೇರಿಸುತ್ತಿದ್ದ ಭಾರತೀಯ ಮಧ್ಯಸ್ಥಗಾರರು ಕೂಲಿಗಾರರಿಗೆ ಆಸೆ ತೋರಿ ಹೇಗೆ ಮೋಸಮಾಡಿದರು, ಅವರು ಮೋಸವನ್ನು ನಂಬಿ ಹೇಗೆ ತಮ್ಮ ಮಾತೃಭೂಮಿಯನ್ನು ಬಿಟ್ಟರು, ನೇಟಾಲ್ ಸೇರಿದ ಒಡನೆ ಅವರ ಸವಿಗನಸುಗಳೆಲ್ಲವೂ ಹೇಗೆ ಒಡೆದು ಮಾಯವಾದುವು, ಅವರು ಹೇಗೆ ಅಲ್ಲಿಯೇ ನಿಲ್ಲಬೇಕಾಗಿ ಬಂದಿತು, ಧರ್ಮದ ಮತ್ತು ಅವರ ನೀತಿಯ ಕಟ್ಟುಗಳೆಲ್ಲವನ್ನೂ ಹೇಗೆ ಮೀರಿದರು, ಈ ಅದೃಷ್ಟಹೀನರ ಕೈಹಿಡಿದ ಹೆಂಡತಿಗೂ ವೇಶ್ಯೆಗೂ ಇದ್ದ ವ್ಯತ್ಯಾಸ ಸಹ ಹೇಗೆ ಮಾಯವಾಯಿತು– ಎಂಬುದನ್ನು ವಿವರಿಸಲು ಇಲ್ಲಿ ಅವಕಾಶವಿಲ್ಲ.

ಅವಧಿ ಕೆಲಸಗಾರರು ನೇಟಾಲಿಗೆ ಹೋಗಿದ್ದಾರೆಂದು ಮಾರಿಷಸ್ ನಗರದಲ್ಲಿ ತಿಳಿದ ಒಡನೆ, ಅಂತಹ ಕೆಲಸಗಾರರೊಡನೆ ವ್ಯವಹಾರವಿದ್ದ ವ್ಯಾಪಾರಸ್ಥರಿಗೆ ಅವರನ್ನು ಹಿಂಬಾಲಿಸುವಂತೆ ಪುಸಲಾಯಿಸಿದರು. ಹಿಂದೂಸ್ಥಾನಕ್ಕೂ ನೇಟಾಲಿಗೂ ಮಧ್ಯೆ ಇರುವ ಮಾರಿಷಸ್‌ನಲ್ಲಿ ಅನೇಕ ಭಾರತೀಯರು– ಕೆಲಸಗಾರರು ಮತ್ತು ವ್ಯಾಪಾರಸ್ಥರು– ನೆಲಸಿದ್ದಾರೆ. ಮಾರಿಷಸ್‌ನ ಭಾರತೀಯ ವರ್ತಕನಾದ ದಿವಂಗತ ಸೇಟ್ ಅಬುಬಕರ್

ಆಮೋದ್ ಎಂಬಾತನು ನೇಟಾಲಿನಲ್ಲಿ ಒಂದು ಅಂಗಡಿ ಪ್ರಾರಂಭಿಸಲು ಯೋಚಿಸಿದನು. ನೇಟಾಲಿನ ಆಗಿನ ಇಂಗ್ಲಿಷರಿಗೆ ಭಾರತೀಯ ವರ್ತಕರ ಶಕ್ತಿ ಸಾಮರ್ಥ್ಯಗಳು ತಿಳಿದಿರಲಿಲ್ಲ; ಅವರು ಆ ಕಡೆ ಲಕ್ಷಿಸಲೂ ಇಲ್ಲ. ಈ ಅವಧಿ ಕೂಲಿಗಳ ಸಹಾಯದಿಂದ ಕಬ್ಬು, ಟೀ, ಕಾಫಿ ಮುಂತಾದ ಲಾಭಕರವಾದ ಬೆಳೆ ತೆಗೆದಿದ್ದರು. ಸಕ್ಕರೆ ತಯಾರಿಸಿ ಅತ್ಯಲ್ಪಕಾಲದಲ್ಲಿ ದಕ್ಷಿಣ ಆಫ್ರಿಕಕ್ಕೆಲ್ಲ ತಕ್ಕಷ್ಟು ಸಕ್ಕರೆ, ಕಾಫಿ, ಟೀಗಳನ್ನು ಒದಗಿಸಿ ಕೊಟ್ಟರು. ಅರಮನೆಗಳಂತಹ ಸೌಧಗಳನ್ನು ಕಟ್ಟಿ, ಕಾಡು ಮೇಡುಗಳನ್ನು ನಗುವ ನಂದನವನಗಳನ್ನಾಗಿ ಮಾಡುವಷ್ಟು ಧನಿಕರಾದರು. ಆ ಉನ್ನತಿಯ ಕಾಲದಲ್ಲಿ ಅಬುಬಕರ್ ಸೇಟನಂತಹ ಪ್ರಾಮಾಣಿಕನೂ, ಸಾಹಸಿಯೂ ಆದ ಒಬ್ಬ ವರ್ತಕನಿದ್ದರೆ ತಮಗೇನೆಂದು ಗಮನಿಸಲಿಲ್ಲ. ಇದಕ್ಕೆ ಸರಿಯಾಗಿ ಒಬ್ಬ ಇಂಗ್ಲಿಷ್ ವರ್ತಕನು ಆತನ ಪಾಲುದಾರನಾದನು. ಅಬುಬಕರ್ ಸೇಟನು ತನ್ನ ವ್ಯಾಪಾರವನ್ನು ವೃದ್ಧಿಗೊಳಿಸಿ ಜಮೀನು ಸಹ ಮಾಡಿದನು. ಆತನ ಕೀರ್ತಿ ಪೋರ್ ಬಂದರಿಗೂ, ಆತನ ಊರಿಗೂ, ಸುತ್ತಮುತ್ತಲಿನ ನಾಡಿಗೂ ಹಬ್ಬಿತು. ಇದರ ಪರಿಣಾಮವಾಗಿ ಇನ್ನು ಕೆಲವು ಮೆಮನ್‌ರೂ, ಸೂರತ್ತಿನ ಬೋರಾಗಳೂ ನೇಟಾಲಿಗೆ ಬಂದರು. ಇವರಿಗೆ ಲೆಕ್ಕ ಬರೆಯುವವರು ಬೇಕಾದ್ದರಿಂದ ಗುಜರಾತ್ ಮತ್ತು ಕಾಥಿಯವಾಡದಿಂದ ಹಿಂದೂ ಗುಮಾಸ್ತರು ಅವರೊಂದಿಗೆ ಬಂದರು.

ಆದ್ದರಿಂದ ಸ್ವತಂತ್ರ ವರ್ತಕರು ಹಾಗೂ ಅವರ ನೌಕರರು, ಮತ್ತು ಅವಧಿಕೂಲಿಗಳು–ಈರೀತಿ ಇಬ್ಬಗೆಯ ಭಾರತೀಯರು ನೇಟಾಲಿನಲ್ಲಿ ನೆಲಸಿದರು. ಕ್ರಮೇಣ ಕೂಲಿಗಾರರಿಗೆ ಮಕ್ಕಳಾದರು. ಶ್ರಮಜೀವನದ ನಿರ್ಬಂಧವೇನೂ ಮಕ್ಕಳಿಗೆ ಇಲ್ಲದೆ ಇದ್ದರೂ ಬಹಳ ಕ್ರೂರ ಶಾಸನಗಳ ನಿರ್ಬಂಧಕ್ಕೆ ಅವರು ಒಳಗಾದರು. ಗುಲಾಮರ ಮಕ್ಕಳು ಗುಲಾಮಗಿರಿಯಿಂದ ತಪ್ಪಿಸಿಕೊಳ್ಳುವುದು ಹೇಗೆ? ಕೂಲಿಗಾರರು ಐದು ವರ್ಷಗಳ ಕಾಲ ದುಡಿಯುವುದಾಗಿ ಒಪ್ಪಂದ ಮಾಡಿಕೊಂಡು ಹೋಗಿದ್ದರು. ವಾಯಿದೆ ಮುಗಿದಮೇಲೆ ಕೆಲಸ ಮಾಡಲೇಬೇಕೆಂಬ ನಿರ್ಬಂಧವಿರಲಿಲ್ಲ. ಸ್ವತಂತ್ರ ಕೂಲಿಗಳಾಗಿ ಅಥವಾ ವ್ಯಾಪಾರಮಾಡಿ ನೇಟಾಲಿನಲ್ಲಿ ಇರಬಹು

ದಾಗಿತ್ತು. ಕೆಲವರು ಹಾಗೆ ಅಲ್ಲಿಯೇ ನೆಲಸಿದರು, ಇನ್ನೂ ಕೆಲವರು ಹಿಂದೂಸ್ಥಾನಕ್ಕೆ ಹಿಂದಿರುಗಿದರು. ನೇಟಾಲಿನಲ್ಲಿಯೇ ನಿಂತವರನ್ನು ಅವಧಿವಿಮುಕ್ತ ಭಾರತೀಯರೆಂದು ಕರೆಯಲಾರಂಭಿಸಿದರು. ಇವರ ಸ್ಥಾನಮಾನಗಳನ್ನು ತಿಳಿಯುವುದು ಅವಶ್ಯ. ಮೇಲೆ ತಿಳಿಸಿದ ಸ್ವತಂತ್ರ ಭಾರತೀಯರಿಗೆ ಇದ್ದ ಸ್ವಾತಂತ್ರ್ಯ ಇವರಿಗೆ ಇರಲಿಲ್ಲ. ಒಂದು ಸ್ಥಳ ದಿಂದ ಇನ್ನೊಂದು ಸ್ಥಳಕ್ಕೆ ಹೋಗಲು ಇವರು ಅಪ್ಪಣೆ ಪಡೆಯಬೇಕಾ ಗಿತ್ತು. ಮದುವೆ ಮಾಡಿಕೊಂಡು, ಆ ಮದುವೆ ಶಾಸನಸಮ್ಮತವಾಗಲು "ಪ್ರೊಟೆಕ್ಟರ್ ಆಫ್ ಇಂಡಿಯನ್ ಇಮಿಗ್ರಂಟ್" ಎಂಬ ಅಧಿಕಾರಿಯ ಮುಂದೆ ರಿಜಿಸ್ಟರು ಮಾಡಿಸಬೇಕಾಗಿತ್ತು. ಇನ್ನೂ ಕೆಲವು ನಿರ್ಬಂಧ ಗಳನ್ನು ಇವರಮೇಲೆ ಹಾಕಿದ್ದರು.

ಭಾರತೀಯ ವರ್ತಕರು, ಕೂಲಿಗಾರರು ಮತ್ತು ಅವಧಿವಿಮುಕ್ತ ಭಾರತೀಯರೊಡನೆ ಅಲ್ಲದೆ ನೀಗ್ರೊ ಜನರೊಡನೆ ಸಹ ವ್ಯಾಪಾರ ಮಾಡ ಬಹುದೆಂದು ಕಂಡುಕೊಂಡರು. ನೀಗ್ರೊ ಜನರು ಯೂರೋಪಿಯನರಿಗೆ ಬಹಳ ಭೀತರಾಗಿದ್ದಕಾರಣ, ಭಾರತೀಯರಲ್ಲಿ ವ್ಯಾಪಾರ ಮಾಡುವುದು ಅವರಿಗೆ ಬಹಳ ಅನುಕೂಲವಾಗಿತ್ತು. ಯೂರೋಪಿಯನ್ ವ್ಯಾಪಾರಿಗೆ ತಾನೊಬ್ಬನೆ ನೀಗ್ರೊ ಜನರೊಂದಿಗೆ ವ್ಯಾಪಾರ ಮಾಡಬೇಕೆಂಬ ಆಸೆ ಬಲವಾಗಿತ್ತು. ಆದರೆ ನೀಗ್ರೊ ಜನರಿಗೆ ಆತನಿಂದ ಯಾವ ಗೌರವವೂ ದೊರೆಯುತ್ತಿರಲಿಲ್ಲ. ತಮ್ಮ ದುಡ್ಡಿನ ಬೆಲೆಗೆ ಸರಿಯಾದ ಮಾಲು ದೊರೆತರೆ ತಾವೇ ಅದೃಷ್ಟಶಾಲಿಗಳೆಂದು ತಿಳಿದಿದ್ದರು. ನಾಲ್ಕು ಷಿಲಿಂಗ್ ಸಾಮಾನು ತೆಗೆದುಕೊಂಡು ಒಂದು ಸವರನ್ ಕೊಟ್ಟರೆ, ಹದಿನಾರು ಷಿಲಿಂಗ್ ಚಿಲ್ಲರೆ ಕೊಡುವ ಬದಲು ನಾಲ್ಕು ಷಿಲಿಂಗ್ ಕೊಟ್ಟದ್ದೂ, ಅನೇಕವೇಳೆ ಅದೂ ಇಲ್ಲದೆ ಕಳುಹಿಸಿದ್ದೂ ಅವರ ಅನುಭವವಾಗಿತ್ತು. ಚಿಲ್ಲರೆ ಕೇಳಿದರೆ, ಅಥವಾ ಕಡಮೆ ಕೊಟ್ಟುದನ್ನು ತಿಳಿಸಿದರೆ ಬೈಗುಳ ಸುರಿಮಳೆ. ಅಷ್ಟಕ್ಕೇ ಮುಗಿದರೆ ಅವನೇ ಪುಣ್ಯವಂತ; ಬೈಗುಳೊಂದಿಗೆ ಏಟೋ ಅಥವಾ ಒದೆಯೋ ದೊರೆಯುತ್ತಿತ್ತು. ಎಲ್ಲ ಇಂಗ್ಲಿಷ್ ವ್ಯಾಪಾರಿಗಳೂ ಹೀಗೆಯೇ ಇದ್ದರೆಂದಲ್ಲ; ಆದರೆ ಅಂಥವರ ಸಂಖ್ಯೆಯೇ ಹೆಚ್ಚು. ಭಾರತೀಯರು, ನೀಗ್ರೊ ಜನರೊಡನೆ ಉಪಚಾರದ ಮಾತು

ಗಳನ್ನಾಡಿ ಅನೇಕವೇಳೆ ಸಂತೋಷವಾಗಿ ಸರಸವಾಡುತ್ತಿದ್ದುದೂ ಉಂಟು. ನೀಗ್ರೊ ಜನರಿಗೆ ಅಂಗಡಿಗಳಲ್ಲಿನ ಸಾಮಾನುಗಳನ್ನು ಸ್ವತಃ ಪರೀಕ್ಷಿಸಿ, ಕೊಳ್ಳಬೇಕೆಂಬ ಇಚ್ಛೆ ಇತ್ತು. ಭಾರತೀಯ ವ್ಯಾಪಾರಿಗಳು ಇದಕ್ಕೆ ಅವಕಾಶ ಕೊಡುತ್ತಿದ್ದರು. ಪಾರಮಾರ್ಥಿಕ ದೃಷ್ಟಿಯಿಂದಲೇ ಅಷ್ಟು ಸಲಿಗೆ ಕೊಡುತ್ತಿದ್ದರೆಂದಲ್ಲ; ಪ್ರಾಯಶಃ ಸ್ವಲ್ಪ ಸ್ವಾರ್ಥಸಾಧನೆಗೂ ಇರಬಹುದು. ಆದರೆ ತನ್ನ ಸವಿಮಾತಿನಿಂದ ಭಾರತೀಯ ವ್ಯಾಪಾರಿ ನೀಗ್ರೊ ಜನರ ಆದರಕ್ಕೆ ಪಾತ್ರನಾದನು. ಅಲ್ಲದೆ, ಭಾರತೀಯ ವ್ಯಾಪಾರಿಗೆ ನೀಗ್ರೊ ಜನರು ಹೆದರುವ ಸಂಭವ ಇರಲಿಲ್ಲ. ಭಾರತೀಯರ ಮೋಸ ನೀಗ್ರೊ ಜನರಿಗೆ ಗೊತ್ತಾದ ಅನೇಕವೇಳೆ ನೀಗ್ರೊ ಜನರು ಭಾರತೀಯ ವ್ಯಾಪಾರಿಗಳಿಗೆ ಪ್ರತೀಕಾರವನ್ನೂ ಮಾಡಿದ್ದಾರೆ. ಅನೇಕ ವೇಳೆ ನೀಗ್ರೊ ಜನರು ಭಾರತೀಯ ವ್ಯಾಪಾರಿಗಳನ್ನು ಬೈದೂ ಇದ್ದಾರೆ. ಅದುದರಿಂದ ಭಾರತೀಯರು ಮತ್ತು ನೀಗ್ರೊ ಜನರಲ್ಲಿ ಭಾರತೀಯರೇ ನೀಗ್ರೊ ಜನರಿಗೆ ಹೆದರುತ್ತಾರೆ. ಒಟ್ಟಿನಲ್ಲಿ ನೀಗ್ರೊ ಜನರೊಂದಿನ ವ್ಯಾಪಾರ ಭಾರತೀಯರಿಗೆ ತುಂಬ ಲಾಭದಾಯಕವಾಯಿತು. ದಕ್ಷಿಣ ಆಫ್ರಿಕದಲ್ಲಿ ಎಲ್ಲಿ ನೋಡಿದರೂ ನೀಗ್ರೊ ಜನರೇ ಹೆಚ್ಚು.

ಕಳೆದ ಶತಮಾನದ ೮೦–೯೦ ವರ್ಷಗಳಲ್ಲಿ ಟ್ರಾನ್ಸ್‌ವಾಲ್ ಮತ್ತು ಆರೇಂಜ್ ಫ್ರೀಸ್ಟೇಟ್‌ಗಳು ರಿಪಬ್ಲಿಕ್ ರಾಜ್ಯಗಳಾಗಿದ್ದವು. ಈ ರಿಪಬ್ಲಿಕ್‌ಗಳಲ್ಲಿ ನೀಗ್ರೊ ಜನರಿಗೆ ಯಾವ ಅಧಿಕಾರವೂ ಇರಲಿಲ್ಲ, ಎಲ್ಲವೂ ಬಿಳಿಯ ಜನರ ರಾಜ್ಯವೇ ಆಗಿತ್ತು. ಸರಳಜೀವಿಗಳೂ ಆಡಂಬರ ರಹಿತರೂ ಆದ ಡಚ್ಚರು ತಮ್ಮೊಡನೆ ವ್ಯಾಪಾರ ಮಾಡುವುದು ಅಗೌರವ ಎಂದು ತಿಳಿಯಲಾರರೆಂದು ನಂಬಿ, ಅನೇಕ ಭಾರತೀಯ ವರ್ತಕರು, ಟ್ರಾನ್ಸ್‌ವಾಲ್ ಮತ್ತು ಫ್ರೀ ಸ್ಟೇಟ್‌ಗಳಿಗೆ ಹೋಗಿ ಅಂಗಡಿಗಳನ್ನಿಟ್ಟರು. ಆಗ ರೈಲುಗಳಿಲ್ಲದ್ದರಿಂದ ವರ್ತಕರು ಒಳ್ಳೆಯ ಲಾಭ ಸಂಪಾದಿಸಿದರು. ಭಾರತೀಯ ವರ್ತಕರ ಆಸೆ ಫಲಿಸಿತು; ಬೋಅರ್ ಜನರೊಂದಿಗೂ ನೀಗ್ರೊ ಜನರೊಂದಿಗೂ ಯಥೇಚ್ಛವಾಗಿ ವ್ಯಾಪಾರ ಮಾಡತೊಡಗಿದರು. ಇದರಂತೆ ಕೆಲವರು ಕೇಪ್ ಕಾಲೊನಿಗೂ ಹೋಗಿ ವ್ಯಾಪಾರದಿಂದ ಚೆನ್ನಾಗಿ ದ್ರವ್ಯಸಂಪಾದನೆ ಮಾಡಿದರು. ಈ ರೀತಿ ಭಾರತೀಯರು

ನಾಲ್ಕು ವಲಸೆ ಪ್ರಾಂತಗಳಲ್ಲೂ ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಸಂಖ್ಯೆಯಲ್ಲಿ ಹಂಚಿಹೋದರು.

ಈಗ ಸಂಪೂರ್ಣ ಸ್ವತಂತ್ರರಾದ ಭಾರತೀಯರು ೪೦,೦೦೦ ಜನರೂ, ಕೂಲಿಗಾರರಾಗಿ ಹೋಗಿ ಅವಧಿ ವಿಮುಕ್ತರಾದವರು ಮತ್ತು ಅವರ ಸಂತತಿಯವರು ಸೇರಿ ೧,೦೦,೦೦೦ ಜನರೂ ಇದ್ದಾರೆ.

# ೪. ಭಾರತೀಯರ ಕುಂದುಕೊರತೆಗಳು

## ನೇಟಾಲ್

ನೇಟಾಲಿನ ಯೂರೋಪಿಯನ್ ಪ್ಲಾಂಟರುಗಳಿಗೆ ಬೇಕಾಗಿದ್ದುದು ಗುಲಾಮರು ಮಾತ್ರ. ಒಪ್ಪಂದದ ವಾಯಿದೆ ಮುಗಿದಮೇಲೆ ಸ್ವತಂತ್ರರಾಗಿ ಎಷ್ಟೇ ಅಲ್ಪವೆಂದರೂ, ತಮ್ಮೊಂದಿಗೆ ಪೈಪೋಟಿ ನಡಸುವ ಕೂಲಿಗಳು ಬೇಕಿರಲಿಲ್ಲ. ಭಾರತದಲ್ಲಿ ವ್ಯವಸಾಯ ಅಥವಾ ಇತರ ಕೆಲಸದಲ್ಲಿ ನಷ್ಟ ಹೊಂದಿದವರೇ ನೇಟಾಲಿಗೆ ಕೂಲಿಗಳಾಗಿರಲು ಒಪ್ಪಿ ಹೋದುದು ನಿಜ. ಆದರೆ ಅವರಿಗೆ ವ್ಯವಸಾಯ ಬರುತ್ತಿರಲಿಲ್ಲವೆಂಬುದಾಗಲಿ, ಭೂಮಿಯ ಬೆಲೆ ಅವರಿಗೆ ತಿಳಿಯದೆಂಬುದಾಗಲಿ ನಿಜವಲ್ಲ. ಭಾರತೀಯರು ನೇಟಾಲಿನಲ್ಲಿ ತರಕಾರಿಯೊಂದನ್ನು ಬೆಳೆದರೇನೆ ಸುಖ ಜೀವನ ನಡಸಬಹುದೆಂದೂ, ಜೊತೆಗೆ ಸ್ವಲ್ಪ ಭೂಮಿಯನ್ನೂ ಕೊಂಡರೆ ನೆಮ್ಮದಿಯಾಗಿರಬಹುದೆಂದೂ ಕಂಡುಕೊಂಡರು. ತಮ್ಮ ಕೆಲಸದ ಅವಧಿ ಮುಗಿದ ಒಡನೆ ಅನೇಕರು ಸಣ್ಣ ವ್ಯಾಪಾರೋದ್ಯಮಗಳನ್ನು ಪ್ರಾರಂಭಿಸಿದರು. ಒಟ್ಟಿನಲ್ಲಿ ನೇಟಾಲಿಗೆ ಹೋದ ಕೆಲಸಗಾರರಿಗೆ ಅನುಕೂಲವಾಯಿತು. ಒಳ್ಳೆಯ ವ್ಯವಸಾಯಗಾರರಿಲ್ಲದೆ ಬೆಳೆಯಲಾಗದ ಕಾಯಿಪಲ್ಯಗಳು ಇಗ ಹೇರಳವಾಗಿ ದೊರಕಲಾರಂಭಿಸಿದುವು. ಸ್ವಲ್ಪ ಸ್ವಲ್ಪ ದೊರೆಯುತ್ತಿದ್ದ ಕಾಯಿಪಲ್ಯಗಳು ಸಮೃದ್ಧಿಯಾಗಿ ಪೇಟೆಗೆ ಬರಲಾರಂಭಿಸಿದುವು. ಇದರ ಪರಿಣಾಮವಾಗಿ ಕಾಯಿಪಲ್ಯಗಳ ಬೆಲೆ ತಗ್ಗಿತು. ಈ ಹೊಸ ಸನ್ನಿವೇಶ ಯೂರೋಪಿಯನ್ ಪ್ಲಾಂಟರುಗಳಿಗೆ ಸರಿಬೀಳಲಿಲ್ಲ. ಯಾವ ವ್ಯವಸಾಯ ಕ್ಷೇತ್ರ ತಮಗೆ ಮೀಸಲೆಂದು ತಿಳಿದಿದ್ದರೋ ಅಲ್ಲಿ ಈಗ ಪೈಪೋಟಿ ಮಾಡುವವರು ಹುಟ್ಟಿದರೆಂದು ಭಾರತೀಯರ ಮೇಲೆ

ರೇಗಿದರು. ಆದ್ದರಿಂದ ಈ ವಾಯಿದೆ ವಿಮುಕ್ತ ಕೆಲಸಗಾರರ ಮೇಲೆ ಒಂದು ಚಳವಳಿ ಹೂಡಿದರು. ಯೂರೋಪಿಯನರು ಹಿಂದೂಸ್ಥಾನ ದಿಂದ ಹೆಚ್ಚು ಹೆಚ್ಚು ಕೆಲಸಗಾರರನ್ನು ಕರಸಿಕೊಂಡರೂ, ಅಲ್ಲಿ ವಾಯಿದೆ ಮುಗಿಸಿದ ಕೆಲಸಗಾರರಿಗೆ ಹಿಂಸೆ ಕೊಡಲು ಮೊದಲು ಮಾಡಿದರು. ಭಾರತೀಯರ ದೇಹಶ್ರಮ ಮತ್ತು ಬುದ್ಧಿಕೌಶಲ್ಯಕ್ಕೆ ಇದೇ ಬಹುಮಾನ!

ಚಳವಳಿ ಬಗೆಬಗೆಯಲ್ಲಿ ಉಗ್ರಸ್ವರೂಪವನ್ನು ತಾಳಿತು. ಕೆಲವು ಚಳವಳಿಗಾರರು ಅವಧಿ ಮುಗಿಸಿದ ಕೆಲಸಗಾರರನ್ನೆಲ್ಲ ಹಿಂದಕ್ಕೆ ಕಳುಹಿಸಿರೆಂದರು; ಹೊಸದಾಗಿ ಕೆಲಸಕ್ಕೆ ಬರುವವರ ಒಪ್ಪಂದದಲ್ಲಿ ಕೆಲಸದ ಕಾಲ ಮುಗಿದ ಒಡನೆ ಅವಧಿಯನ್ನು ಹೆಚ್ಚಿಸಿಕೊಳ್ಳದೆ ಹೋದರೆ ಹಿಂದಕ್ಕೆ ಹೋಗಬೇಕೆಂಬ ಷರತ್ತನ್ನು ಸೇರಿಸಬೇಕೆಂದರು. ಮೊದಲ ಐದು ವರ್ಷಗಳ ಅನಂತರ ಅವಧಿಯನ್ನು ಹೆಚ್ಚಿಸಿಕೊಳ್ಳುವವರ ಮೇಲೆ ವಾರ್ಷಿಕ ತಲೆ ಕಂದಾಯ ಹೇರಬೇಕೆಂದರು. ಏನಾದರೂ ಪ್ರಯತ್ನ ಮಾಡಿ ಈ ಅವಧಿ ವಿಮುಕ್ತ ಕೂಲಿಗಾರರು ಸ್ವತಂತ್ರರಾಗಿ ನೇಟಾಲಿನಲ್ಲಿ ನೆಲಸದಂತೆ ಮಾಡಬೇಕೆಂಬುದೇ ಎರಡೂ ಗುಂಪುಗಳ ಉದ್ದೇಶ. ಈ ಚಳವಳಿಯ ಪರಿಣಾಮವಾಗಿ ನೇಟಾಲ್ ಸರಕಾರ ಒಂದು ವಿಚಾರಣಾಸಮಿತಿಯನ್ನು ಏರ್ಪಡಿಸಿತು. ಆದರೆ ಚಳವಳಿಗಾರರ ಬೇಡಿಕೆಗಳು ಬಹಳ ಅನ್ಯಾಯವಾಗಿದ್ದುದರಿಂದಲೂ, ಆರ್ಥಿಕ ದೃಷ್ಟಿಯಿಂದ ಅವಧಿವಿಮುಕ್ತ ಕೆಲಸಗಾರರು ನೇಟಾಲಿನಲ್ಲಿರುವುದು ಒಟ್ಟಿನಲ್ಲಿ ಪ್ರಜಾಸಮುದಾಯಕ್ಕೆ ಅನುಕೂಲವಾಗಿದ್ದುದರಿಂದಲೂ, ವಿಚಾರಣಾಸಮಿತಿಯ ಮುಂದೆ ದೊರೆತ ಸಾಕ್ಷ್ಯದಿಂದ ಯೂರೋಪಿಯನರಿಗೆ ಏನೂ ಉಪಯೋಗವಾಗಲಿಲ್ಲ; ಸ್ವಲ್ಪ ಕಾಲ ಅವರ ಬೇಳೆ ಏನೂ ಬೇಯಲಿಲ್ಲ. ಬೆಂಕಿ ಆರಿಸಿದರೂ ಕರಿ ನಿಲ್ಲುವಂತೆ ಈ ಚಳವಳಿ ನೇಟಾಲ್ ಸರಕಾರದ ಮೇಲೆ ಸ್ವಲ್ಪ ಪರಿಣಾಮವನ್ನು ಉಂಟುಮಾಡಿತು. ಅಲ್ಲದೆ ಬೇರೆ ಸಾಧ್ಯವೆ? ನೇಟಾಲ್ ಸರಕಾರದ ಸಹಾನುಭೂತಿಯೆಲ್ಲವೂ ತೋಟಗಾರರ ಕಡೆ. ಆದ್ದರಿಂದ ಇಂಡಿಯ ಸರಕಾರದೊಂದಿಗೆ ವ್ಯವಹಾರ ನಡಸಿ ಎರಡು ತಂಡದ ಬೇಡಿಕೆಗಳನ್ನೂ ಅವರ ಮುಂದೆ ಇಟ್ಟರು. ಆದರೆ ಇಲ್ಲಿಂದ ಹೋದ ಕೆಲಸಗಾರರನ್ನು ಗುಲಾಮಗಿರಿಗೆ ತಳ್ಳುವ ಸಲಹೆಗಳನ್ನು ಇಂಡಿಯ ಸರಕಾರ ಒಪ್ಪಿಕೊಳ್ಳಲಿಲ್ಲ.

ಕೆಲಸಗಾರರು ತಮ್ಮ ಅವಧಿ ಮುಗಿದ ಮೇಲೆ, ಸ್ವತಂತ್ರರಾಗಿ, ಸ್ವಾವಲಂಬಿಗಳಾಗಿ ತಮ್ಮ ಆರ್ಥಿಕ ಮಟ್ಟವನ್ನು ಉತ್ತಮಗೊಳಿಸಿಕೊಳ್ಳಲೆಂದೇ ಇಲ್ಲಿಂದ ದೂರದೇಶಕ್ಕೆ ಕೂಲಿಗಳನ್ನು ಕಳುಹಿಸುತ್ತಿದ್ದುದು. ಆಗ ನೇಟಾಲ್ ಒಂದು ಕ್ರೌನ್ ಕಾಲೊನಿಯಾಗಿದ್ದ ಕಾರಣ, ಅದರ ರಾಜ್ಯಾಡಳಿತವೆಲ್ಲ ಇಂಗ್ಲೆಂಡಿನ ವಲಸೆ ಕಛೇರಿಯ (ಕಲೋನಿಯಲ್ ಆಫೀಸ್) ಪೂರ್ಣ ಜವಾಬ್ದಾರಿಯಲ್ಲಿ ಇತ್ತು. ಆದ್ದರಿಂದ ತನ್ನ ಅನ್ಯಾಯದ ಬೇಡಿಕೆಗಳ ಸಾಫಲ್ಯಕ್ಕೆ ಅತ್ತಲಿಂದಲೂ ನೇಟಾಲಿಗೆ ಸಹಾನುಭೂತಿ ದೊರೆಯುವಂತೆ ಇರಲಿಲ್ಲ. ಈ ಮತ್ತು ಇನ್ನೂ ಇತರ ಕಾರಣಗಳಿಂದ ನೇಟಾಲಿನಲ್ಲಿ ಜವಾಬ್ದಾರಿ ಸರಕಾರ ಚಳವಳಿ ಆರಂಭವಾಗಿ ೧೮೯೩ರಲ್ಲಿ ನೇಟಾಲಿಗೆ ಜವಾಬ್ದಾರಿ ಸರಕಾರ ದೊರೆಯಿತು. ನೇಟಾಲ್ ಈಗ ತನ್ನ ಶಕ್ತಿಯನ್ನು ಚಲಾಯಿಸಲು ಮೊದಲುಮಾಡಿತು. ಈಗ ನೇಟಾಲ್ ಸೂಚಿಸುವ ಯಾವ ಸಲಹೆಗಳನ್ನೂ ವಲಸೆ ಕಛೇರಿ ತೆಗೆದು ಹಾಕುವಂತೆ ಇರಲಿಲ್ಲ. ನೇಟಾಲ್ ಸರಕಾರದ ಪ್ರತಿನಿಧಿಗಳು ಇಂಡಿಯ ಸರಕಾರದೊಂದಿಗೆ ಸಂಧಾನ ನಡಸಲು ಹಿಂದೂಸ್ಥಾನಕ್ಕೆ ಬಂದರು. ಕೂಲಿ ಕೆಲಸದಿಂದ ಬಿಡುಗಡೆ ಹೊಂದಿದ ಪ್ರತಿಯೊಬ್ಬ ಭಾರತೀಯನೂ ವರ್ಷ ಒಂದಕ್ಕೆ ೨೫ ಪೌಂಡು ಅಥವಾ ೩೭೫ ರೂಪಾಯಿಗಳ ತಲೆ ಕಂದಾಯ ಕೊಡಬೇಕೆಂಬ ಸೂಚನೆ ತಂದರು. ಅಷ್ಟು ತಲೆಕಂದಾಯ ಕೊಟ್ಟು ಯಾವ ಭಾರತೀಯನೂ ನೇಟಾಲಿನಲ್ಲಿ ವಾಸಮಾಡಲು ಸಾಧ್ಯವಿರಲಿಲ್ಲ. ಇಂಡಿಯಾ ಗವರ್ನರ್ ಜನರಲ್ ಆದ ಲಾರ್ಡ್ ಎಲ್ಗಿನನು ೨೫ ಪೌಂಡುಗಳ ತಲೆಕಂದಾಯ ಹೆಚ್ಚೆಂದು ಮನಗಂಡು ಕೊನೆಗೆ ೩ ಪೌಂಡುಗಳಿಗೆ ಇಳಿಸಿದನು. ಒಪ್ಪಂದದ ಕೂಲಿಗಳ ೬ ತಿಂಗಳ ಉತ್ಪತ್ತಿಯೇ ೩ ಪೌಂಡುಗಳಾಗಿತ್ತು. ಈ ಕಂದಾಯವನ್ನು ಕೂಲಿಗಾರನೊಬ್ಬನ ಮೇಲೆ ಮಾತ್ರ ಹೇರುತ್ತಿರಲಿಲ್ಲ. ಆತನ ಹೆಂಡತಿ, ೧೩ ವರ್ಷಕ್ಕೆ ಮೇಲ್ಪಟ್ಟ ಹೆಣ್ಣುಮಕ್ಕಳು, ೧೬ ವರ್ಷಕ್ಕೆ ಮೇಲ್ಪಟ್ಟ ಗಂಡುಮಕ್ಕಳು ಇವರಮೇಲೆ ಸಹ ಈ ಕಂದಾಯದ ಹೊರೆ ಬಿದ್ದಿತು. ಹೆಂಡತಿ ಮತ್ತು ಒಂದೆರಡು ಮಕ್ಕಳಿಲ್ಲದ ಕೂಲಿಗಾರರೇ ಅಪರೂಪ. ಆದ್ದರಿಂದ ಸಾಮಾನ್ಯವಾಗಿ ಪ್ರತಿಕೂಲಿಯೂ ೧೨ ಪೌಂಡುಗಳಾದರೂ ತಲೆಕಂದಾಯ

ಕೊಡಬೇಕಾಯಿತು. ಈ ಕಂದಾಯದ ಹೊರೆಯಿಂದ ಆದ ಕಷ್ಟವನ್ನು ಬಣ್ಣಿಸಲು ಅಸಾಧ್ಯ. ಅದರ ದುಃಖ ಅನುಭವಿಸಿದವನಿಗೆ, ಕಣ್ಣಾರ ಕಂಡವರಿಗೆ ಮಾತ್ರ ಗೊತ್ತು.

ನೇಟಾಲ್ ಸರಕಾರದ ಈ ತೀರ್ಮಾನಕ್ಕೆ ವಿರೋಧವಾಗಿ ಭಾರತೀಯರು ಸಹ ವಿರೋಧ ಚಳುವಳಿ ಹೂಡಿದರು. ಸಾಮ್ರಾಜ್ಯ ಸರಕಾರಕ್ಕೂ, ಇಂಡಿಯ ಸರಕಾರಕ್ಕೂ ಕಳುಹಿಸಿದ ಪ್ರತಿಭಟನೆಗಳಿಂದ ಕಂದಾಯದ ಹೊರೆ ಸ್ವಲ್ಪ ಕಡಮೆಯಾಯಿತೇ ಹೊರತು ಕಂದಾಯ ಪೂರ್ತಿ ಯಾಗಿ ಹೋಗಲಿಲ್ಲ. ನಿಸ್ಸಹಾಯಕರಾದ ಕೂಲಿಗಾರರು ಏನುತಾನೆ ಮಾಡಬಲ್ಲರು ? ಈ ವಿಷಯ ಅವರಿಗೆ ತಿಳಿಯುವ ಬಗೆಯಾದರೂ ಹೇಗೆ? ಭಾರತೀಯ ವ್ಯಾಪಾರಿಗಳು ದೇಶಾಭಿಮಾನದಿಂದಲೂ, ಕನಿಕರದಿಂದಲೂ ಕೂಲಿಗಳ ಪರವಾಗಿ ಕಾದಾಡಿದರು.

ಸ್ವತಂತ್ರರಾದ ಭಾರತೀಯರ ಪಾಡೂ ಅದೇ ಗೋಳಾಗಿತ್ತು. ನೇಟಾಲಿನ ಯೂರೋಪಿಯನ್ ವರ್ತಕರು ಅದೇ ಕಾರಣದಿಂದ ಭಾರತೀಯ ವ್ಯಾಪಾರಿಗಳ ವಿರುದ್ಧ ಚಳವಳಿ ಹೂಡಿದರು. ಭಾರತೀಯ ವ್ಯಾಪಾರಿಗಳು ಒಳ್ಳೆಯ ಸ್ಥಿತಿವಂತರಾಗಿ, ಉತ್ತಮ ಪ್ರದೇಶಗಳಲ್ಲಿ ಭೂಮಿಕಾಣಿಯನ್ನು ಸಂಪಾದಿಸಿದ್ದರು. ಅವಧಿವಿಮುಕ್ತ ಕೂಲಿಗಾರರ ಸಂಖ್ಯೆ ಹೆಚ್ಚಿದಂತೆ, ಅವರ ಜೀವನಕ್ಕೆ ಆವಶ್ಯಕವಾದ ಮಾಲುಗಳ ಗಿರಾಕಿಯೂ ಹೆಚ್ಚಿತು. ಹಿಂದೂಸ್ಥಾನದಿಂದ ಸಾವಿರಾರು ಮೂಟೆ ಅಕ್ಕಿಯನ್ನು ಆಮದುಮಾಡಿ ಒಳ್ಳೆಯ ಲಾಭ ಪಡೆದರು. ಈ ವ್ಯಾಪಾರವೂ ಜುಲು ಜನರೊಂದಿನ ಬಹುಮಟ್ಟಿನ ವ್ಯಾಪಾರವೂ ಭಾರತೀಯರ ಕೈಯಲ್ಲೇ ಇತ್ತು. ಆದ್ದರಿಂದ ಭಾರತೀಯ ವ್ಯಾಪಾರಿಗಳನ್ನು ಕಂಡರೆ ಸಣ್ಣ ಯೂರೋಪಿಯನ್ ವ್ಯಾಪಾರಿಗಳಿಗೆ ಹೊಟ್ಟೆಕಿಚ್ಚು. ಇಂಗ್ಲಿಷರು ಕೆಲವರು, ಭಾರತೀಯ ವ್ಯಾಪಾರಿಗಳಿಗೆ ನೇಟಾಲ್ ನ್ಯಾಯವಿಧಾಯಕ ಸಭೆಗೆ ವೋಟು ಕೊಡುವ ಮತ್ತು ಉಮೇದುವಾರರಾಗಿ ನಿಲ್ಲುವ ಅಧಿಕಾರ ಇರುತ್ತದೆ ಎಂದು ತೋರಿಸಿದರು. ಕೆಲವು ಭಾರತೀಯರು ಆಗ ವೋಟರು ಪಟ್ಟಿಯಲ್ಲಿ ತಮ್ಮ ಹೆಸರನ್ನು ಸೇರಿಸಿಕೊಂಡರು. ಇದನ್ನು ನೋಡಿ ನೇಟಾಲಿನ ಕೆಲವು ಯೂರೋಪಿಯನ್ ರಾಜಕೀಯ ಮುಖಂಡರು

ಕೋಪಗೊಂಡು ಭಾರತೀಯರ ವಿರುದ್ಧ ಪಂಗಡವನ್ನು ಸೇರಿದರು. ಭಾರತೀಯರ ಗೌರವ ಹೆಚ್ಚಿ ಅವರ ಶಕ್ತಿ ಸಂಘಟಿತವಾದರೆ ಭಾರತೀಯರೊಂದಿಗೆ ಪೈಪೋಟಿ ನಡಸಲು ತಮಗೆ ಕಷ್ಟವಾಗಬಹುದೆಂದು ಸಹ ಯೋಚಿಸಿದರು. ಆದ್ದರಿಂದ ಜವಾಬ್ದಾರಿ ಸರಕಾರ ಬಂದೊಡನೆ ನೇಟಾಲ್ ಸರಕಾರ ಕೈಗೊಂಡ ಪ್ರಥಮ ಕಾರ್ಯವೆಂದರೆ ಆ ಮೊದಲಿನ ವೋಟರು ಪಟ್ಟಿಯಲ್ಲಿನ ಭಾರತೀಯರ ಹೊರತು, ಉಳಿದೆಲ್ಲ ಸ್ವತಂತ್ರ ಭಾರತೀಯರೂ ವೋಟುಗಳಿಗೆ ಅನರ್ಹರೆಂದು ತೀರ್ಮಾನಿಸಿದ್ದು. ೧೮೯೪ರಲ್ಲಿ ಇಂಥ ಒಂದು ಮಸೂದೆಯನ್ನು ನೇಟಾಲ್ ಶಾಸನಸಭೆಯ ಮುಂದೆ ಮೊದಲು ತಂದರು. ಭಾರತೀಯರೆಂಬ ನೆಪದಿಂದಲೇ ವೋಟಿಗೆ ಅನರ್ಹರೆಂಬ ತತ್ತ್ವದಮೇಲೆ ಈ ಮಸೂದೆ ಸಿದ್ಧವಾಯಿತು. ಜನಾಂಗ ಮಾತ್ಸರ್ಯದಿಂದ ಭಾರತೀಯರಮೇಲೆ ಸಿದ್ಧಗೊಳಿಸಿದ ಮಸೂದೆಗಳಲ್ಲಿ ಇದೇ ಮೊದಲನೆಯದು. ಭಾರತೀಯರು ಇದನ್ನು ಉಗ್ರವಾಗಿ ಪ್ರತಿಭಟಿಸಿದರು. ಒಂದೇ ರಾತ್ರಿ ಒಂದು ಅಹವಾಲು ಅರ್ಜಿಯನ್ನು ಬರೆದು ಅದಕ್ಕೆ ನಾಲ್ಕು ನೂರು ಜನರು ಸಹಿಮಾಡಿದರು. ಶಾಸನಸಭೆಯ ಮುಂದೆ ಆ ಅರ್ಜಿಯನ್ನು ಕೊಟ್ಟಾಗ ಶಾಸನಸಭೆಗೆ ದಂಗು ಬಡಿದಂತಾಯಿತು. ಆದರೂ ಮಸೂದೆಯೇನೋ ಶಾಸನವಾಯಿತು. ಹತ್ತು ಸಾವಿರ ಜನರ ರುಜುವಿನ ಅಹವಾಲನ್ನು ಆಗಿನ ವಲಸೆ ರಾಷ್ಟ್ರಗಳ ಮಂತ್ರಿಗಳಾದ ಲಾರ್ಡ್ ರಿಪ್ಪನ್‌ರಿಗೆ ಕೊಡಲಾಯಿತು. ಹತ್ತು ಸಾವಿರ ರುಜುಗಳೆಂದರೆ ಆಗ ಅಲ್ಲಿದ್ದ ಸ್ವತಂತ್ರ ಭಾರತೀಯರ ಒಟ್ಟು ಪ್ರಜಾಸಂಖ್ಯೆ! ಲಾರ್ಡ್ ರಿಪ್ಪನ್‌ರು ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ವರ್ಣದ್ವೇಷವನ್ನುಂಟುಮಾಡುವ ಯಾವ ಮಸೂದೆಗೂ ಸಮ್ರಾಟ ಸರಕಾರ ಒಪ್ಪುವುದಿಲ್ಲವೆಂದು ಈ ಮಸೂದೆಗೆ ಒಪ್ಪಿಗೆ ಕೊಡಲಿಲ್ಲ. ಈ ವಿಜಯದ ಬೆಲೆ ಎಷ್ಟು ಮಹತ್ತರವಾದುದೆಂಬುದು ವಾಚಕರಿಗೆ ಮುಂದೆ ತಿಳಿಯುತ್ತದೆ. ಆಗ ನೇಟಾಲ್ ಸರಕಾರ ವರ್ಣಭೇದವನ್ನು ತೆಗೆದರೂ ಇತರ ಕಾರಣಗಳಿಂದ ಭಾರತೀಯರಿಗೆ ವೋಟಿನ ಅನರ್ಹತೆಯನ್ನುಂಟುಮಾಡುವ ಬೇರೊಂದು ಮಸೂದೆಯನ್ನು ತಂದರು. ಭಾರತೀಯರು ಇದನ್ನು ವಿರೋಧಿಸಿದರೂ ಫಲವಾಗಲಿಲ್ಲ. ಈ ಮಸೂದೆಯ ಅರ್ಥ ಬಹಳ ಅಸ್ಪಷ್ಟವಾಗಿತ್ತು. ಆ

ಕಾನೂನಿನ ಅರ್ಥವಿವರಣೆಗೆ ಭಾರತೀಯರು ಪ್ರೀವಿ ಕೌನ್ಸಿಲ್ ಜ್ಯುಡಿಷಿಯಲ್ ಕಮಿಟಿಯ ಮುಂದೆ ವಾದ ಹೂಡಬಹುದಾಗಿತ್ತು ; ಆದರೆ ಅಷ್ಟು ಲಾಭದಾಯಕವೆಂದು ಭಾರತೀಯರಿಗೆ ಕಾಣಲಿಲ್ಲ. ತೀರದ ಈ ವ್ಯಾಜ್ಯವನ್ನು ಬಿಟ್ಟುದೇ ಒಳ್ಳೆಯದೆಂದು ಈಗಲೂ ನನ್ನ ಅಭಿಪ್ರಾಯ. ಆದರೆ ವರ್ಣಭೇದಕ್ಕೆ ಅವಕಾಶ ಕೊಡದಿದ್ದುದು ಮಾತ್ರ ಅಲ್ಪ ವಿಷಯವಲ್ಲ.

ಆದರೆ ತೋಟಗಾರರೂ ನೇಟಾಲ್ ಸರಕಾರವೂ ಅಷ್ಟಕ್ಕೆ ತೃಪ್ತರಾಗಲಿಲ್ಲ. ಭಾರತೀಯರ ರಾಜಕೀಯ ಹಕ್ಕುಗಳೆಲ್ಲವನ್ನೂ ಮೊಳಕೆಯಲ್ಲಿಯೇ ಕಿತ್ತೊಗೆಯಬೇಕಾದ್ದು ಅವರಿಗೆ ಅನಿವಾರ್ಯವೆನಿಸಿತು ; ಆದರೆ ಅವರ ನಿಜವಾದ ವಿರೋಧ ಭಾರತೀಯರ ವ್ಯಾಪಾರ ಮತ್ತು ವಲಸೆಯ ಮೇಲೆ. ಇಂಡಿಯ ದೇಶದ ಕೋಟ್ಯನುಕೋಟಿ ಭಾರತೀಯರು ನೇಟಾಲನ್ನು ಮುತ್ತಿದರೆ ಯೂರೋಪಿಯನರ ಗತಿ ಏನು ಎಂಬ ಭಯ ಉಂಟಾಯಿತು. ಆಗ ನೇಟಾಲಿನಲ್ಲಿ ೪೦,೦೦೦೦ ಜುಲುಗಳೂ, ೪೦,೦೦೦ ಯೂರೋಪಿಯನರೂ ಇದ್ದರು. ಇದಕ್ಕೆ ಪ್ರತಿಯಾಗಿ ೬೦,೦೦೦ ಭಾರತೀಯ ಕೂಲಿಗಳೂ, ೧೦,೦೦೦ ಬಿಡುಗಡೆ ಹೊಂದಿದ ಕೂಲಿಗಳೂ, ೧೦,೦೦೦ ಸ್ವತಂತ್ರ ಭಾರತೀಯರೂ ಇದ್ದರು. ಯೂರೋಪಿಯನರ ಭೀತಿಗೆ ಬುಡವೇನೂ ಇರಲಿಲ್ಲ. ಆದರೆ ನಿರಾಧಾರವಾದ ಭೀತಿಯಿಂದ ಬುದ್ಧಿ ಕದಡಿದವರನ್ನು ಪರಸ್ಪರ ಚರ್ಚೆಯಿಂದ ಸಮಾಧಾನಮಾಡುವುದು ಕಷ್ಟ. ಇಂಡಿಯ ದೇಶದಲ್ಲಿನ ಭಾರತೀಯರ ದಾರುಣ ಸ್ಥಿತಿಯೂ ಭಾರತೀಯರ ನಡೆನುಡಿಗಳ ಪರಿಚಯವೂ ಇಲ್ಲದ್ದರಿಂದ, ತಮ್ಮಂತೆಯೇ ಭಾರತೀಯರೂ ಮುಂದೆ ನುಗ್ಗುವ ಸ್ವಭಾವದವರೆಂದೂ, ಕಾರ್ಯಕುಶಲರೆಂದೂ ತಿಳಿದಿದ್ದರು. ಭಾರತದ ಅಸಂಖ್ಯಾತ ಜನಬಲವನ್ನು ತಮ್ಮ ಅಲ್ಪ ಜನಸಂಖ್ಯೆಯೊಡನೆ ಹೋಲಿಸಿಕೊಂಡು ಹೆದರಿದ್ದರೆ ಅವರನ್ನು ದೂರುವುದು ಸರಿಯಲ್ಲ. ಏನೇ ಆಗಲಿ, ವೋಟಿನ ಅನರ್ಹತೆಯ ಮಸೂದೆಯನ್ನು ವಿರೋಧಿಸಿದ್ದರ ಫಲವಾಗಿ, ನೇಟಾಲ್ ಶಾಸನಸಭೆಯಲ್ಲಿ ಅಂಗೀಕೃತವಾದ ಇನ್ನೆರಡು ಶಾಸನಗಳಲ್ಲಿ ವರ್ಣಭೇದವನ್ನು ತೆಗೆದು ಅದೇ ಉದ್ದೇಶವನ್ನು ಬೇರೆ ಮಾರ್ಗದಿಂದ ಸಾಧಿಸಬೇಕಾಯಿತು. ಆಗಲೂ ಭಾರತೀಯರು ತೀವ್ರವಾಗಿ ವಿರೋಧಿಸಿದರೂ, ಅವು ಶಾಸನಗಳಾದುವು.

ಮೊದಲನೆಯ ಶಾಸನದ ಪ್ರಕಾರ, ಅದರ ವಿಧಿಗಳಿಗನುಸಾರವಾಗಿ ನೇಮಕವಾದ ಅಧಿಕಾರಿಯಿಂದ ರಹದಾರಿ ಪಡೆಯದೆ ಯಾರೂ ವ್ಯಾಪಾರ ಮಾಡುವಂತೆ ಇರಲಿಲ್ಲ. ಆದರೆ ಕಾರ್ಯತಃ ಯೂರೋಪಿಯನಿಗೆ ಬಹು ಸುಲಭವಾಗಿ ರಹದಾರಿ ದೊರೆಯುತ್ತಿತ್ತು ; ಭಾರತೀಯರಿಗೆ ರಹದಾರಿ ಕೊಡುವುದರಲ್ಲಿ ಆಗುತ್ತಿದ್ದ ತೊಂದರೆ ಅಷ್ಟಿಷ್ಟಲ್ಲ. ಒಬ್ಬ ವಕೀಲನನ್ನು ಇಟ್ಟು ಹಣ ವ್ಯಯ ಮಾಡಬೇಕಾಗಿತ್ತು. ಅದಿಲ್ಲದೆ ಹೋದರೆ ರಹದಾರಿ ದೊರೆಯುತ್ತಿರಲಿಲ್ಲ. ಇನ್ನೊಂದು ಶಾಸನದ ಮುಖ್ಯ ನಿಯಮದಂತೆ ಯಾವುದಾದರೊಂದು ಯೂರೋಪಿಯನ್ ಭಾಷೆಯ ಪರೀಕ್ಷೆಯಲ್ಲಿ ತೇರ್ಗಡೆಯಾಗದ ಹೊರತು ಯಾರೂ ನೇಟಾಲಿಗೆ ಬರುವಹಾಗಿರಲಿಲ್ಲ. ಇದರಿಂದ ಕೋಟ್ಯಂತರ ಭಾರತೀಯರಿಗೆ ನೇಟಾಲಿನ ದಾರಿ ಮುಚ್ಚಿತು. ಆದರೆ ಈ ಮಸೂದೆಯಲ್ಲಿ ಒಂದು ನಿಯಮವಿತ್ತು. ಆ ಶಾಸನಕ್ಕೆ ಮುಂಚೆ ಮೂರು ವರ್ಷಗಳ ಹಿಂದಿನಿಂದ ವಾಸಮಾಡುತ್ತ ಇದ್ದವರೆಲ್ಲರೂ ನೇಟಾಲ್ ಕಾಲೊನಿಯನ್ನು ಬಿಟ್ಟು ಹೊರಗೆ ಹೋಗಲು ಅಥವಾ ಬೇಕಾದಾಗ ಹೆಂಡತಿ ಮಕ್ಕಳೊಂದಿಗೆ ಹಿಂದಕ್ಕೆ ಬರಲು ಪರೀಕ್ಷೆಯಲ್ಲಿ ತೇರ್ಗಡೆಯಾಗದೆ ಇದ್ದರೂ ಡಾಮಿಸೈಲ್ ಪತ್ರವನ್ನು ಪಡೆಯಬಹುದೆಂಬ ಅನುಕೂಲ ಇತ್ತು.

ಅವಧಿ ಮತ್ತು ಅವಧಿವಿಮುಕ್ತ ಕೂಲಿಗಾರರಿಗೆ ಮೇಲೆ ಹೇಳಿದುವುಗಳಲ್ಲದೆ ನೇಟಾಲಿನಲ್ಲಿ ಇನ್ನೂ ಅನೇಕ ಶಾಸನ ನಿರ್ಮಿತವಾದ ಮತ್ತು ಶಾಸನವನ್ನೂ ಮೀರಿದ ನಿರ್ಬಂಧಗಳು ಇದ್ದುವು, ಈಗಲೂ ಇವೆ. ಅವೆಲ್ಲವನ್ನೂ ಪಟ್ಟಿ ಮಾಡಬೇಕಾದ್ದು ಇಲ್ಲಿ ಅನಾವಶ್ಯಕ. ವಿಷಯ ಗ್ರಹಣಕ್ಕೆ ಎಷ್ಟು ಅವಶ್ಯವೋ ಅಷ್ಟು ವಿವರವನ್ನು ಮಾತ್ರ ತಿಳಿಸುತ್ತೇನೆ. ದಕ್ಷಿಣ ಆಫ್ರಿಕದ ಇತರ ಭಾಗಗಳಲ್ಲಿ ನೆಲಸಿರುವ ಭಾರತೀಯರ ಸ್ಥಿತಿಯ ಚರಿತ್ರೆ ಬರೆಯುತ್ತ ಹೋದರೆ ಮೇರೆ ಮೀರುತ್ತದೆ. ಅಲ್ಲದೆ ಈ ಗ್ರಂಥಕ್ಕೆ ಅದು ಅನಾವಶ್ಯಕ.

# ೫. ಭಾರತೀಯರ ಕಷ್ಟಗಳು

## ಟ್ರಾನ್ಸ್‌ವಾಲ್ ಮತ್ತು ಇತರ ವಲಸೆ ರಾಷ್ಟ್ರಗಳು

ನೇಟಾಲಿನಂತೆ ಇತರ ವಲಸೆ ರಾಷ್ಟ್ರಗಳಲ್ಲಿಯೂ ೧೮೮೦ಕ್ಕೆ ಮುಂಚೆಯೇ ಭಾರತೀಯ ವಿರುದ್ಧ ಚಳವಳಿ ಆರಂಭವಾಗಿತ್ತು. ಕೇಪ್ ಕಾಲೊನಿ ಒಂದನ್ನು ಬಿಟ್ಟರೆ ಉಳಿದೆಡೆಗಳಲ್ಲಿ ಭಾರತೀಯರು ಕೂಲಿಗಳಾಗಿ ಮಾತ್ರ ಬರಬಹುದೆಂಬ ಭಾವನೆ ಬೇರೂರಿತ್ತು. ಆದರೆ ಸ್ವತಂತ್ರ ಭಾರತೀಯರು ದಕ್ಷಿಣ ಆಫ್ರಿಕದಲ್ಲಿ ಎಲ್ಲಿ ನೆಲಸಿದರೂ ಕೆಡುಕೆಂದು ಯೂರೋಪಿಯನರೂ ಭಾವಿಸಿದ್ದರು; ಟ್ರಾನ್ಸ್‌ವಾಲ್ ಪ್ರಾಂತ ರಿಪಬ್ಲಿಕ್ ರಾಷ್ಟ್ರವಾಗಿತ್ತು. ಅದರ ಅಧ್ಯಕ್ಷರೆದುರಿನಲ್ಲಿ ಭಾರತೀಯರು ಬ್ರಿಟಿಷ್ ಪ್ರಜೆಗಳೆಂದು ಹೇಳಲು ಹೋದರೆ ನಗೆಗೀಡಾಗುತ್ತಿತ್ತು. ಅವರ ಕೊರತೆಗಳೇನಿದ್ದರೂ ಪ್ರೆಟೋರಿಯಾ ಬ್ರಿಟಿಷ್ ಪ್ರತಿನಿಧಿಗೆ ಹೇಳಬೇಕಾಗಿತ್ತು. ಆದರೂ ಟ್ರಾನ್ಸ್‌ವಾಲ್ ಪ್ರಾಂತ ಬ್ರಿಟಿಷ್ ಧ್ವಜದಡಿ ಬಂದಮೇಲೆ ಅವರ ಸ್ಥಿತಿ ಇನ್ನೂ ಕೀಳಾಯಿತು. ಸ್ವತಂತ್ರವಾಗಿದ್ದಾಗ ಬ್ರಿಟಿಷ್ ಪ್ರತಿನಿಧಿ ಕೊಡುತ್ತಿದ್ದ ಸಹಾಯ ಸಹ ಈಗ ದೊರೆಯದಾಯಿತು. ಲಾರ್ಡ್ ಮಾರ್ಲೆ ಇಂಡಿಯ ಕಾರ್ಯದರ್ಶಿಯಾಗಿದ್ದಾಗ ಭಾರತೀಯರ ಪರ ಹೋಗಿದ್ದ ನಿಯೋಗ ಗೋಷ್ಠಿಯೊಂದಕ್ಕೆ. ಸಾಮ್ರಾಜ್ಯ ಸರಕಾರದವರು ಸ್ವತಂತ್ರ ಡೊಮಿಯನ್‌ಗಳಮೇಲೆ ಯಾವ ಅಧಿಕಾರವನ್ನೂ ಚಲಾಯಿಸಲು ಸಾಧ್ಯವಿಲ್ಲವೆಂದು ಹೇಳಿದನು. ಅವರಮೇಲೆ ಯಾವ ಒತ್ತಾಯವನ್ನೂ ಮಾಡುವಂತೆ ಇರಲಿಲ್ಲ. ಒಳ್ಳೆಯ ಮಾತಿನಲ್ಲಿ ವಾದಮಾಡಿ ತಮ್ಮ ತತ್ವಗಳಿಗೆ ಒಪ್ಪಿಸಿಕೊಳ್ಳಬೇಕೆ ಹೊರತು ಬೇರೆ ದಾರಿ ಇರಲಿಲ್ಲ. ಪರ ರಾಷ್ಟ್ರಗಳೊಂದಿಗಾದರೂ ಒತ್ತಾಯಪಡಿಸುವುದು ಸುಲಭವಾಗಿತ್ತು; ಆದರೆ ತಮ್ಮ ವಲಸೆ ರಾಷ್ಟ್ರಗಳ ಜನರಮೇಲೆ ಒತ್ತಾಯ ಮಾಡುವಂತೆ ಇರಲಿಲ್ಲ. ವಲಸೆ ರಾಷ್ಟ್ರಗಳಿಗೂ ಇಂಗ್ಲೆಂಡಿಗೂ ಇದ್ದ ಬಾಂಧವ್ಯ ಎಂದಾದರೂ ಕಡಿದುಹೋಗಬಹುದಾದಷ್ಟು ಸೂಕ್ಷ್ಮವಾಗಿತ್ತು. ಬಲಪ್ರಯೋಗ ನಿಷ್ಪ್ರಯೋಜಕವಾಗಿದ್ದ ಕಾರಣ ಸಂಧಾನದ ಮೂಲಕ ಆದಷ್ಟು ಸಹಾಯ ಮಾಡುವುದಾಗಿ ಲಾರ್ಡ್ ಮಾರ್ಲೆ ಭರವಸೆಕೊಟ್ಟನು. ಟ್ರಾನ್ಸ್‌ವಾಲ್

ಮೇಲೆ ಯುದ್ಧವನ್ನು ಹೂಡಿದಾಗ, ಲಾರ್ಡ್ ಸೆಲ್ಬೋರನ್, ಲಾರ್ಡ್ ಲ್ಯಾನ್ಸ್‌ಡೌನ್ ಮುಂತಾದ ಬ್ರಿಟಿಷ್ ರಾಜನೀತಿಜ್ಞರು ಭಾರತೀಯರಿಗೆ ದಕ್ಷಿಣ ಆಫ್ರಿಕದಲ್ಲಿ ಕೊಟ್ಟ ಅನ್ಯಾಯದ ಕಿರುಕುಳವೂ ಯುದ್ಧ ಹೂಡಲು ಒಂದು ಕಾರಣವೆಂದರು.

ಈ ಕಿರುಕುಳ ಹೇಗಿತ್ತೆಂಬುದನ್ನೀಗ ನೋಡೋಣ. ಭಾರತೀಯರು ಟ್ರಾನ್ಸ್‌ವಾಲಿಗೆ ಬಂದುದು ೧೮೮೧ರಲ್ಲಿ. ದಿವಂಗತ ಸೇಟ್ ಅಬುಬಕರ್ ಪ್ರೆಟೋರಿಯದಲ್ಲಿ ಅಂಗಡಿ ಇಟ್ಟು ಆ ಪಟ್ಟಣದ ಮುಖ್ಯ ಬೀದಿಗಳೊಂದರಲ್ಲಿ ಜಾಗವನ್ನು ಕೊಂಡರು. ಇತರ ವರ್ತಕರು ಅವರನ್ನು ಹಿಂಬಾಲಿಸಿದರು. ವ್ಯಾಪಾರದಲ್ಲಿ ಭಾರತೀಯರ ಮುನ್ನಡೆ ಯೂರೋಪಿಯನ್ನರಲ್ಲಿ ಈರ್ಷ್ಯೆಯನ್ನು ಕೆರಳಿಸಿತು. ವೃತ್ತಪತ್ರಿಕೆಗಳಲ್ಲಿ ಭಾರತೀಯ ವಿರುದ್ಧ ಚಳವಳಿ ಆರಂಭವಾಯಿತು. ಭಾರತೀಯರನ್ನು ದೇಶದಿಂದ ಹೊರಗೆ ಓಡಿಸಬೇಕೆಂದೂ, ಅವರ ವ್ಯಾಪಾರವನ್ನು ಕೊನೆಗಾಣಿಸಬೇಕೆಂದೂ ವೋಲ್ಕ್ಸ್‌ರಾಡ್‌ಗೆ (ಪಾರ್ಲಿಮೆಂಟ್) ಅರ್ಜಿಗಳನ್ನು ಕಳುಹಿಸಿದರು. ಈ ಹೊಸ ವಲಸೆ ರಾಷ್ಟ್ರದ ಯೂರೋಪಿಯನರ ಹಣದಾಸೆಗೆ ಮಿತಿಯೇ ಇರಲಿಲ್ಲ. ನೀತಿಧರ್ಮದ ಕಟ್ಟುಗಳಿಗೆ ಅವರು ಪರಕೀಯರಾಗಿದ್ದರು. ಅವರ ಅರ್ಜಿಗಳಲ್ಲಿ ಬರೆದಿದ್ದ ಕೆಲವು ಆಪಾದನೆಗಳನ್ನು ನೋಡಿ: "ಭಾರತೀಯರಿಗೆ ಮಾನವ ಸಹಜವಾದ ಮರ್ಯಾದೆಯೇ ಇಲ್ಲ. ಹೆಂಗಸರೆಲ್ಲರೂ ತಮ್ಮ ಕಾಮವಾಸನೆಯ ಬೇಟೆಗಳೆಂದು ಭಾವಿಸುತ್ತಾರೆ. ಹೆಂಗಸರೆಲ್ಲರೂ ಆತ್ಮಶೂನ್ಯರೆಂದು ಅವರ ಭಾವನೆ. ಅವರು ಅಸಹನೀಯವಾದ ರೋಗಗಳಿಂದ ನರಳುತ್ತಿದ್ದಾರೆ." ಈ ನಾಲ್ಕು ಆಪಾದನೆಗಳೂ ನಾಲ್ಕು ಸುಳ್ಳಿನ ಕಂತೆಗಳು. ಇಂತಹ ನಿದರ್ಶನಗಳು ಲೆಕ್ಕವಿಲ್ಲದಷ್ಟು ಇವೆ. ಯೂರೋಪಿಯನರಂತೆಯೇ ಅವರ ಪ್ರತಿನಿಧಿಗಳೂ. ಈ ಅನ್ಯಾಯದ ಚಳವಳಿಯ ದುಷ್ಪರಿಣಾಮ ಏನಾಗಬಹುದೆಂದು ಭಾರತೀಯ ವ್ಯಾಪಾರಿಗಳಿಗೆ ಕೊಂಚವೂ ತಿಳಿದಿರಲಿಲ್ಲ. ಅವರು ವೃತ್ತಪತ್ರಿಕೆಗಳನ್ನು ಓದುತ್ತಿರಲಿಲ್ಲ. ವೃತ್ತಪತ್ರಿಕೆಗಳಲ್ಲಿ ಮತ್ತು ಅರ್ಜಿಗಳ ಮೂಲಕ ನಡಸಿದ ಚಳವಳಿ ಫಲಕಾರಿಯಾಗತೊಡಗಿತು. 'ವೋಲ್ಕ್ಸ್‌ರಾಡ್' ಮುಂದೆ ಒಂದು ಮಸೂದೆ ಬಂದಿತು. ಸನ್ನಿವೇಶ ಎಷ್ಟು ವಿಷಮವಾಯಿತೆಂದು ನೋಡಿ

ಭಾರತೀಯ ಮುಖಂಡರು ಭಯಭರಿತರಾದರು. ಅಧ್ಯಕ್ಷ ಕ್ರೂಗರ್‌ನನ್ನು ನೋಡಲು ಹೋದರೆ ಮನೆಯೊಳಕ್ಕೆ ಸಹ ಕರೆಯದೆ ಅಂಗಳದಲ್ಲಿಯೇ ನಿಲ್ಲಿಸಿದನು. ಸ್ವಲ್ಪ ಹೊತ್ತು ಅವರ ಮಾತನ್ನು ಕೇಳಿ "ನೀವು ಇಸ್ಮೇಲನ ವಂಶೀಕರು, ಆದ್ದರಿಂದ 'ಈಸಾ'ನ ವಂಶೀಕರಿಗೆ ಗುಲಾಮರಾಗಿರ ಬೇಕಾದ್ದು ನಿಮ್ಮ ಅನುವಂಶೀಯ ಕರ್ತವ್ಯ. 'ಈಸಾ'ನ ವಂಶೀಕರಾದ ನಾವು ನಿಮ್ಮನ್ನು ಸರಿಸಮಾನಸ್ಕಂದರೆಂದು ಗಣಿಸಿ ಸಮಾನ ಹಕ್ಕು ಬಾಧ್ಯತೆಗಳನ್ನು ನಿಮಗೆ ಕೊಡಲು ಸಾಧ್ಯವಿಲ್ಲ. ನಾವು ಕೊಡುವಷ್ಟರಲ್ಲಿ ಮಾತ್ರ ನೀವು ತೃಪ್ತರಾಗಬೇಕು" ಎಂದು ಹೇಳಿಕಳುಹಿಸಿದನು. ಅಧ್ಯಕ್ಷರ ಈ ಉತ್ತರದಲ್ಲಿ ಅಸೂಯೆಯಾಗಲಿ, ಕೋಪವಾಗಲಿ ಇತ್ತೆಂದು ಹೇಳಲು ಸಾಧ್ಯವಿಲ್ಲ. ತನ್ನ ಬಾಲ್ಯದಿಂದಲೂ ಅಧ್ಯಕ್ಷ ಕ್ರೂಗರನು ಓದಿ ಕಲಿತದ್ದು ಹಳೆಯ ಬೈಬಲ್. ಅದರ ಕಥೆಗಳೆಲ್ಲವೂ ನಿಜವೆಂದೇ ಆತನ ನಂಬಿಕೆ. ತನ್ನ ಅಭಿಪ್ರಾಯಗಳು ಏನೇ ಇರಲಿ ಅವುಗಳನ್ನು ನಿರ್ಭಯವಾಗಿ ಹೇಳುವ ಮನುಷ್ಯನನ್ನು ದೂರುವುದು ಹೇಗೆ? ಸ್ಪಷ್ಟೋಕ್ತಿಯಿದ್ದರೂ, ಮೂಢಭಾವನೆ ಇದ್ದರೆ ಕೇಡು ಖಂಡಿತ. ಪರಿಣಾಮವಾಗಿ ೧೮೮೫ರಲ್ಲಿ, ಸಾವಿರಾರು ಜನ ಭಾರತೀಯರು ಎಲ್ಲಿ ಟ್ರಾನ್ಸ್‌ವಾಲ್ ಪ್ರಾಂತವನ್ನು ಮುತ್ತಿಗೆ ಹಾಕುತ್ತಾರೊ ಎಂಬಂತೆ, 'ವೋಲ್ಕ್ಸ್‌ರಾಡ್'ನಲ್ಲಿ ಒಂದು ಅವಸರದ ಉಗ್ರ ಶಾಸನವನ್ನು ಶಾಸನ ಕಡತಕ್ಕೆ ಏರಿಸಲಾಯಿತು. ಭಾರತೀಯ ಮುಖಂಡರ ಕೋರಿಕೆಯಂತೆ ಬ್ರಿಟಿಷ್ ಪ್ರತಿನಿಧಿ ಮಧ್ಯಸ್ಥಿಕೆ ಮಾಡಬೇಕಾಯಿತು. ವಲಸೆ ರಾಷ್ಟ್ರಗಳ ಕಾರ್ಯದರ್ಶಿಗಳವರೆಗೂ ದೂರನ್ನು ಕೊನೆಗಾಣಿಸಬೇಕಾಯಿತು. ೧೮೮೫ನೆಯ ಇಸವಿಯ ಈ ೩ನೆಯ ಶಾಸನ ವಿಧಿಯಂತೆ ಟ್ರಾನ್ಸ್‌ವಾಲ್ ರಿಪಬ್ಲಿಕ್‌ನಲ್ಲಿ ವ್ಯಾಪಾರ ನಡಸುತ್ತಿದ್ದ ಪ್ರತಿ ಭಾರತೀಯನೂ ೨೫ಪೌಂಡುಗಳ ಶುಲ್ಕವನ್ನು ಕೊಟ್ಟು ರಿಜಿಸ್ಟರ್ ಮಾಡಿಸಿಕೊಳ್ಳಬೇಕಾಯಿತು, ಅನೇಕ ದಂಡಗಳಿಗೆ ಗುರಿಯಾಗಬೇಕಾಯಿತು. ಯಾವ ಭಾರತೀಯನೂ ಒಂದು ಅಂಗುಲ ಭೂಮಿಯನ್ನಾಗಲಿ ನಾಗರಿಕ ಹಕ್ಕುಗಳನ್ನಾಗಲಿ ಹೊಂದಲು ಅವಕಾಶವಿಲ್ಲವಾಯಿತು. ಅನ್ಯಾಯವೆಂದು ಸ್ಪಷ್ಟವಾಗಿ ಮೇಲೆದ್ದು ತೋರುವ ಈ ಮಸೂದೆಯನ್ನು ಸಮರ್ಥಿಸಲು ಟ್ರಾನ್ಸ್‌ವಾಲ್ ಸರಕಾರಕ್ಕೆ ಬಾಯಿ ಇಲ್ಲದಾಯಿತು. ಲಂಡನ್

ಒಪ್ಪಂದದ ಹದಿನೈದನೆಯ ವಿಧಿಯಂತೆ ಬ್ರಿಟಿಷ್ ಪ್ರಜೆಗಳ ಹಕ್ಕುಗಳನ್ನು ಕಾಪಾಡುವುದಾಗಿ ಬೋಅರ್‌ಗಳಿಗೂ ಬ್ರಿಟಿಷರಿಗೂ ಒಪ್ಪಂದವಾಗಿತ್ತು. ಮೇಲ್ಕಂಡ ಶಾಸನ ಈ ವಿಧಿಗೆ ವಿರೋಧವೆಂದು ಬ್ರಿಟಿಷರು ಆಕ್ಷೇಪಿಸಿದರು. ಬೋಅರ್‌ಗಳು ಇದಕ್ಕೆ ಪ್ರತಿಯಾಗಿ, ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ಬ್ರಿಟಿಷ್ ಸರಕಾರ ಈ ಮಸೂದೆಗೆ ತನ್ನ ಒಪ್ಪಿಗೆಯನ್ನು ಕೊಟ್ಟಿರುವುದಾಗಿ ವಾದಹೂಡಿದರು.

ಈ ರೀತಿ ಬ್ರಿಟಿಷರಿಗೂ ಬೋಅರ್‌ಗಳಿಗೂ ಒಂದು ವ್ಯಾಜ್ಯ ಬಂದು, ವಿವಾದವನ್ನು ಪಂಚಾಯಿತಿಗೆ ಒಪ್ಪಿಸಲಾಯಿತು. ಪಂಚಾಯಿತನ ತೀರ್ಮಾನ ಅಸಮರ್ಪಕವಾಗಿತ್ತು. ಆತನು ಇಬ್ಬರನ್ನೂ ಮೆಚ್ಚಿಸಲು ಪ್ರಯತ್ನಪಟ್ಟನು. ಭಾರತೀಯರಿಗೆ ಇದರಿಂದ ನಷ್ಟವಾಯಿತು. ಅದಕ್ಕೂ ಹೆಚ್ಚಿನ ನಷ್ಟ ತಪ್ಪಿತೆಂಬುದೊಂದೇ ಸಮಾಧಾನ. ಪಂಚಾಯಿತನ ತೀರ್ಮಾನದಂತೆ ೧೮೮೬ರಲ್ಲಿ ಶಾಸನ ತಿದ್ದುಪಡಿಯಾಯಿತು. ರಿಜಿಸ್ಟ್ರೇಷನ್ ಶುಲ್ಕವನ್ನು ೨೫ ಪೌಂಡುಗಳಿಂದ ೩ ಪೌಂಡಿಗೆ ಇಳಿಸಲಾಯಿತು; ಭಾರತೀಯರು ಆಸ್ತಿಯನ್ನೇ ಕೊಳ್ಳಲಾಗದೆಂಬ ವಿಧಿಯನ್ನು ರದ್ದುಗೊಳಿಸಲಾಯಿತು; ಅದಕ್ಕೆ ಪ್ರತಿಯಾಗಿ ಟ್ರಾನ್ಸ್‌ವಾಲ್ ಸರಕಾರ ಭಾರತೀಯರಿಗೆಂದು ಗೊತ್ತುಮಾಡುವ ಸ್ಥಳ ಅಥವಾ ಬೀದಿಗಳಲ್ಲಿ ಆಸ್ತಿಯನ್ನು ಕೊಳ್ಳಬಹುದೆಂದು ವಿಧಿಸಲಾಯಿತು. ಆದರೆ ಸರಕಾರ ತಾನೇ ತಿದ್ದುಪಡಿ ಮಾಡಿದ ನಿಯಮವನ್ನು ಪಾಲಿಸಲಿಲ್ಲ. ಗೊತ್ತಾದ ಸ್ಥಳಗಳಲ್ಲಿಯೂ ಭಾರತೀಯರಿಗೆ ಆಸ್ತಿಮಾಡಲು ಅವಕಾಶ ಕೊಡಲಿಲ್ಲ. ಭಾರತೀಯರು ಇರುವ ಪಟ್ಟಣಗಳಲ್ಲೆಲ್ಲ ನೀರು ಬೆಳಕುಗಳ ವ್ಯವಸ್ಥೆ ಇಲ್ಲದ ಅನಾರೋಗ್ಯಕರ ಸ್ಥಳಗಳಲ್ಲಿ ಊರಿನಿಂದ ದೂರವಾಗಿ ಅವರಿಗೆ ಸ್ಥಳವನ್ನು ಗೊತ್ತುಮಾಡುತ್ತಿದ್ದರು. ಟ್ರಾನ್ಸ್‌ವಾಲಿನಲ್ಲಿ ಭಾರತೀಯರು ಈ ರೀತಿ 'ಪಂಚಮ'ರಾದರು. ಭಾರತದ ಹೊಲಗೇರಿಗೂ ಟ್ರಾನ್ಸ್‌ವಾಲಿನಲ್ಲಿ ಭಾರತೀಯರಿಗೆ ಕೊಟ್ಟ ಈ ಸ್ಥಳಗಳಿಗೂ ವಾಸ್ತವವಾಗಿ ಯಾವ ವ್ಯತ್ಯಾಸವೂ ಇರಲಿಲ್ಲ. ಪಂಚಮರನ್ನು ಮುಟ್ಟಿದರೆ ಅಥವಾ ಅವರ ಸಮೀಪವಾಸಮಾಡಿದರೆ ಮೈಲಿಗೆಯಾಗುವುದೆಂದು ಕುಲೀನ ಹಿಂದುಗಳು ಹೇಗೆ ಭಾವಿಸುವರೋ ಹಾಗೆಯೇ ಭಾರತೀಯರ ಸ್ಪರ್ಶ ಅಥವಾ

ಸಮೀಪವಾಸ ಅಷ್ಟು ಹೊಲಸೆಂದು ಟ್ರಾನ್ಸ್‌ವಾಲಿನ ಯೂರೋಪಿಯನರು ಕಾರ್ಯತಃ ನಂಬಿದ್ದರು. ಇದಲ್ಲದೆ ಪ್ರತ್ಯೇಕಗೊಳಿಸಿದ ಸ್ಥಳಗಳಲ್ಲಿ ಮಾತ್ರ ಭಾರತೀಯರು ವ್ಯಾಪಾರ ಮಾಡಬಹುದೆಂದು ೧೮೮೫ನೆಯ ಇಸವಿಯ ಮೂರನೆಯ ಶಾಸನದ ವಿಧಿಗೆ ಟ್ರಾನ್ಸ್‌ವಾಲ್ ಸರಕಾರ ಅರ್ಥಮಾಡಿತು. ಪಂಚಾಯಿತನು ಶಾಸನದ ಅರ್ಥನಿರೂಪಣೆಯನ್ನು ಟ್ರಾನ್ಸ್‌ವಾಲಿನ ಸಾಮಾನ್ಯ ನ್ಯಾಯಸ್ಥಾನಗಳಿಗೆ ಒಪ್ಪಿಸಿದ್ದನು. ಆದ್ದರಿಂದ ಭಾರತೀಯ ವ್ಯಾಪಾರಿಗಳು ಬಹಳ ಇಕ್ಕಟ್ಟಿಗೆ ಸಿಕ್ಕಿದರು. ಆದರೂ ಒಂದೆಡೆ ಶಾಂತಿಸಂಧಾನ, ಇನ್ನೊಂದೆಡೆ ನ್ಯಾಯಸ್ಥಾನಗಳಲ್ಲಿ ವ್ಯವಹಾರ, ಮತ್ತೊಂದೆಡೆ ತಮ್ಮ ದಾಕ್ಷಿಣ್ಯ–ಈ ರೀತಿ ಬಹು ಬುದ್ಧಿವಂತಿಕೆಯಿಂದ ಭಾರತೀಯ ವ್ಯಾಪಾರಿಗಳು ತಮ್ಮ ಸ್ಥಾನಮಾನಗಳ ಸಂರಕ್ಷಣೆ ಮಾಡಿಕೊಳ್ಳುತಿದ್ದರು. ಬೋಅರ್ ಯುದ್ಧಾರಂಭದಲ್ಲಿ ಟ್ರಾನ್ಸ್‌ವಾಲಿನಲ್ಲಿ ಭಾರತೀಯರ ಸ್ಥಿತಿ ನಿಜವಾಗಿಯೂ ಇಷ್ಟು ಕಷ್ಟತಮವೂ, ಭೀಕರವೂ ಆಗಿದ್ದಿತು.

ಇನ್ನು ಫ್ರೀ ಸ್ಟೇಟ್ ಕಡೆ ನೋಡೋಣ. ಇನ್ನೂ ಹತ್ತು ಹನ್ನೆರಡು ಜನ ಭಾರತೀಯರು ಅಂಗಡಿಗಳನ್ನು ಪ್ರಾರಂಭಿಸುವುದರಲ್ಲಿಯೇ ಯೂರೋಪಿಯನರು ಉಗ್ರಚಳವಳಿ ಆರಂಭಿಸಿದರು. ಫೋಲ್ಕ್‌ಸ್‌ರಾಡಿನಲ್ಲಿ ಕ್ರೂರಶಾಸನವಾಗಿ, ನೆಪಮಾತ್ರದ ಪರಿಹಾರ ಕೊಟ್ಟು ಭಾರತೀಯರೆಲ್ಲರನ್ನೂ ದೇಶದಿಂದ ಹೊರಗಟ್ಟಿದರು. ಆ ಶಾಸನದಂತೆ ಫ್ರೀ ಸ್ಟೇಟಿನಲ್ಲಿ ಭಾರತೀಯನಾರೂ ವ್ಯಾಪಾರವನ್ನಾಗಲಿ, ವ್ಯವಸಾಯವನ್ನಾಗಲಿ ಅವಲಂಬಿಸಲು ಸಾಧ್ಯವಿರಲಿಲ್ಲ; ಆಸ್ತಿ ಮಾಡುವುದಕ್ಕಾಗಲಿ, ವೋಟು ಕೊಡುವುದಕ್ಕಾಗಲಿ ಅಧಿಕಾರವಿರಲಿಲ್ಲ. ಪ್ರತ್ಯೇಕ ಅಪ್ಪಣೆ ಪಡೆದು ಹೋಟಿಲ್ ನೌಕರನಾಗಿ ಅಥವಾ ಕೂಲಿಯಾಗಿ ಮಾತ್ರ ಇರಬಹುದಿತ್ತು. ಆದರೆ ಎಲ್ಲ ಸಂದರ್ಭಗಳಲ್ಲಿ ಅಧಿಕಾರಿಗಳು ಈ ಅಮೋಘವಾದ ಅಪ್ಪಣೆ ಸಹ ಕೊಡಬೇಕೆಂಬ ವಿಧಿ ಇರಲಿಲ್ಲ. ಇದರ ಪರಿಣಾಮವಾಗಿ ಯಾವ ಮರ್ಯಾದಸ್ಥ ಭಾರತೀಯನೂ ಫ್ರೀ ಸ್ಟೇಟಿನಲ್ಲಿ ಎರಡು ದಿನ ಸಹ ಇರಲು ಸಾಧ್ಯವಿರಲ್ಲ. ಬೋಅರ್ ಯುದ್ಧಕಾಲದಲ್ಲಿ ಕೆಲವು ಹೋಟಿಲು ನೌಕರರ ಹೊರತು ಬೇರೆ ಭಾರತಿಯರಾರೂ ಫ್ರೀ ಸ್ಟೇಟಿನಲ್ಲಿ ಇರಲಿಲ್ಲ.

ಕೇಪ್ ಕಾಲೊನಿಯಲ್ಲಿ ಸಹ ಭಾರತೀಯರ ಮೇಲೆ ವೃತ್ತಪತ್ರಿಕೆಗಳಲ್ಲಿ ವಿರುದ್ಧ ಚಳವಳಿ ನಡೆಯುತ್ತಿತ್ತು. ಅನೇಕ ವೇಳೆ ಅವಮಾನಗೊಳಿಸುವ ಸಂದರ್ಭಗಳು ಸಹ ಒದಗುತ್ತಿದ್ದುವು. ಭಾರತೀಯರ ಮಕ್ಕಳಿಗೆ ಸಾರ್ವಜನಿಕ ಶಾಲೆಗಳಲ್ಲಿ ಪ್ರವೇಶವಿರಲಿಲ್ಲ: ಭಾರತೀಯರಿಗೆ ಹೋಟೆಲುಗಳಲ್ಲಿ ಸ್ಥಳ ದೊರೆಯುತ್ತಿರಲಿಲ್ಲ. ಆದರೆ ಬಹಳ ದಿನಗಳ ವರೆಗೆ ವ್ಯಾಪಾರಕ್ಕಾಗಲಿ, ಆಸ್ತಿಯನ್ನು ಕೊಳ್ಳುವುದಕ್ಕಾಗಲಿ ಯಾವ ಅಡ್ಡಿಯೂ ಇರಲಿಲ್ಲ.

ಇದಕ್ಕೆ ಬಲವಾದ ಕಾರಣಗಳಿದ್ದುವು. ಮುಖ್ಯವಾಗಿ ಕೇಪ್ ಟೌನಿನಲ್ಲಿ, ಸಾಮಾನ್ಯವಾಗಿ ಕೇಪ್ ಕಾಲೊನಿಯಲ್ಲಿ ಮಲಯ ಜನರ ಸಂಖ್ಯೆ ಹೆಚ್ಚು ಇತ್ತು. ಇವರೆಲ್ಲರೂ ಮುಸಲ್ಮಾನರಾದ್ದರಿಂದ ಸ್ವಮತಾವಲಂಬಿಗಳಾದ ಭಾರತೀಯ ಮುಸಲ್ಮಾನರೊಂದಿಗೂ, ಕ್ರಮೇಣ ಇತರ ಭಾರತೀಯರೊಂದಿಗೂ ಇವರ ಬಾಂಧವ್ಯ ಬೆಳೆಯಿತು. ಕೆಲವು ಭಾರತೀಯ ಮುಸಲ್ಮಾನರು ಮಲಯ ಹೆಂಗಸರನ್ನು ಮದುವೆ ಮಾಡಿಕೊಂಡರು. ಕೇಪ್ ಕಾಲೊನಿಯ ಸರಕಾರ ಮಲಯ ಜನರ ವಿರೋಧ ಶಾಸನ ಮಾಡುವುದಾದರೂ ಹೇಗೆ? ಕೇಪ್ ಕಾಲೊನಿಯೇ ಅವರ ಮಾತೃಭೂಮಿ. 'ಡಚ್' ಅವರ ಭಾಷೆ; ಮೊದಲಿನಿಂದಲೂ ಡಚ್ಚರೊಂದಿಗೆ ವಾಸ, ನಿತ್ಯಜೀವನದಲ್ಲಿ ಡಚ್ಚರ ಅನೇಕ ಪದ್ಧತಿಗಳ ಅನುಕರಣ. ಆದ್ದರಿಂದ ವರ್ಣದ್ವೇಷ ಬಹಳ ಕಡಮೆಯೆಂದರೆ ಕೇಪ್ ಕಾಲೊನಿಯಲ್ಲಿ ಮಾತ್ರ.

ಅದೂ ಅಲ್ಲದೆ ವಲಸೆ ರಾಜ್ಯಗಳಲ್ಲಿ ಕೇಪ್ ಕಾಲೊನಿಯೇ ಮೊದಲನೆಯದೂ ದಕ್ಷಿಣ ಆಫ್ರಿಕದ ಸಂಸ್ಕೃತಿಯ ಕೇಂದ್ರವೂ ಆದ್ದರಿಂದ ಅಲ್ಲಿಯ ಯೂರೋಪಿಯನರಲ್ಲಿ ಸಮತಾದೃಷ್ಟಿಯೂ, ಹೃದಯವೈಶಾಲ್ಯವೂ ಕಂಡುಬರುತ್ತಲಿತ್ತು. ನನ್ನ ಅಭಿಪ್ರಾಯದಲ್ಲಿ, ಸರಿಯಾದ ಅವಕಾಶವೂ ವಿದ್ಯಾಭ್ಯಾಸವೂ ದೊರೆತರೆ ಪ್ರಪಂಚದಲ್ಲಿ ಎಲ್ಲಿಯಾದರೂ, ಯಾವ ಜನಾಂಗದಲ್ಲಿಯಾದರೂ ಮಾನವಕುಲಕ್ಕೆ ರತ್ನಪ್ರಾಯರಾದವರು ಹುಟ್ಟಬಹುದು. ದಕ್ಷಿಣ ಆಫ್ರಿಕದ ಎಲ್ಲ ಭಾಗಗಳಲ್ಲೂ ಇಂತಹ ಮಾನವ ಶ್ರೇಷ್ಠರ ಪರಿಚಯಮಾಡಿಕೊಳ್ಳುವ ಭಾಗ್ಯ ನನ್ನ ಪಾಲಿಗೆ ಬಂದ ಪುಣ್ಯ.

ಕೇಪ್ ಕಾಲೊನಿಯಲ್ಲಿ ಅಂತಹ ಮನುಷ್ಯರ ಸಂಖ್ಯೆ ಹೆಚ್ಚಾಗಿತ್ತು. ಇವರಲ್ಲೆಲ್ಲ ಅತಿಮೇಧಾವಿಗಳೂ, ಸುಪ್ರಸಿದ್ಧರೂ ಆದವರು ಮೆರಿಮನ್ ಎಂಬವರು. ಇವರು, ೧೮೭೨ರಲ್ಲಿ ಕೇಪ್ ಕಾಲೊನಿಗೆ ಜವಾಬ್ದಾರಿ ಸರಕಾರ ಬಂದಂದಿನಿಂದ ಮೊದಲನೆಯ ಮಂತ್ರಿಮಂಡಲದಿಂದ ಕೊನೆಯ ವರೆಗೂ ಮಂತ್ರಿಗಳಾಗಿದ್ದರು; ೧೯೧೦ರಲ್ಲಿಯೂ ಯೂನಿಯನ್ ಸರಕಾರ ಏರ್ಪಟ್ಟಾಗ ಮುಖ್ಯಮಂತ್ರಿಗಳಾಗಿದ್ದರು; ದಕ್ಷಿಣ ಆಫ್ರಿಕದ ಗ್ಲ್ಯಾಡ್‌ಸ್ಟನ್ ಎಂದು' ಇವರು ಪ್ರಖ್ಯಾತರಾಗಿದ್ದರು. ಅಲ್ಲದೆ ಮಾಲ್ಟಿನೊ ಮತ್ತು ಶ್ರೀನರ್ ಮನೆತನಗಳವರೂ ಅಷ್ಟೇ ಪ್ರಖ್ಯಾತರು. ೧೮೭೨ರಲ್ಲಿ ಆ ವಲಸೆ ರಾಷ್ಟ್ರದ ಮುಖ್ಯಮಂತ್ರಿಗಳಾಗಿದ್ದವರು ಸರ್.ಜಾನ್ ಮಾಲ್ಟಿನೊರವರು. ಡಬ್ಲ್ಯು. ಪಿ. ಶ್ರೀನರರು ಸುಪ್ರಸಿದ್ಧ ನ್ಯಾಯವಾದಿಗಳು; ಕೆಲಕಾಲ ಅಟಾರ್ನಿ ಜನರಲ್ ಆಗಿದ್ದು ಅನಂತರ ಮುಖ್ಯಮಂತ್ರಿಗಳಾದರು. ಆತನ ಸಹೋದರಿ ಆಲಿವರ್ ಶ್ರೀನರ್ ಎಂಬಾಕೆ ದಕ್ಷಿಣ ಆಫ್ರಿಕದಲ್ಲಿ, ಇಂಗ್ಲಿಷ್ ಮಾತು ಬಳಕೆಯಿದ್ದ ಎಲ್ಲ ಕಡೆಗಳಲ್ಲಿ ಗೌರವಾನ್ವಿತಳಾದ ಗ್ರಂಥಕರ್ತಳು. 'ಸ್ವಪ್ನಗಳು' ಎಂಬ ಗ್ರಂಥ ಬರೆದು ಪ್ರಸಿದ್ಧಿಗೆ ಬಂದಳು. ಆಕೆಯ ಮಾನವಪ್ರೇಮಕ್ಕೆ ಮಿತಿಯೇ ಇರಲಿಲ್ಲ. ಆಕೆಯ ಕಣ್ಣುಗಳೇ ಆಕೆ ಪ್ರೇಮಮೂರ್ತಿ ಎಂದು ಸಾರುತ್ತಿದ್ದುವು. ಕುಲೀನ ಮನೆತನಕ್ಕೆ ಸೇರಿದವಳಾಗಿ, ವಿದ್ಯಾಪ್ರೌಢೆಯಾಗಿದ್ದರೂ ಬಹಳ ಸರಳಜೀವಿ; ತನ್ನ ಮನೆಯ ಪಾತ್ರೆಗಳನ್ನು ತಾನೇ ತೊಳೆಯುತ್ತಿದ್ದಳು. ಮೆರಿಮನ್, ಮಾಲ್ಟಿನೊ, ಶ್ರೀನರ್ ವಂಶದವರು ಯಾವಾಗಲೂ ನೀಗ್ರೊ ಪಕ್ಷಪಾತಿಗಳಾಗಿದ್ದರು. ನೀಗ್ರೊ ಜನರ ಹಕ್ಕಿಗೆ ಏನೇ ಆಘಾತ ಒದಗಿದರೂ ಇವರು ನೀಗ್ರೊ ಜನರ ಸಲುವಾಗಿ ಎದೆಗೊಟ್ಟು ಕಾದಾಡುತ್ತಿದ್ದರು. ನೀಗ್ರೊ ಜನರಿಗೂ ಭಾರತೀಯರಿಗೂ ಭೇದವನ್ನು ತೋರಿಸುತ್ತಿದ್ದರೂ, ಭಾರತೀಯರನ್ನೂ ದಯೆಯಿಂದ ಕಾಣುತ್ತಿದ್ದರು. ದಕ್ಷಿಣ ಆಫ್ರಿಕದಲ್ಲಿ ನೀಗ್ರೊ ಜನರು ಯೂರೋಪಿಯನರಿಗಿಂತ ಮುಂಚಿನಿಂದಲೂ ವಾಸ ಮಾಡುತ್ತಿದ್ದುದರಿಂದ ಯೂರೋಪಿಯನರು ನೀಗ್ರೊ ಜನರ ಸ್ವಭಾಸಿದ್ಧವಾದ ಆಜನ್ಮಸಿದ್ಧ ಹಕ್ಕುಗಳನ್ನು ಕಸಿದುಕೊಳ್ಳಲಾಗದೆಂದು ಅವರ ವಾದ. ಭಾರತೀಯರ ಅತಿಯಾದ ಪೈಪೋಟಿಯನ್ನು ಹತೋಟಿ

ಯಲ್ಲಿಡಲು ಶಾಸನ ಮಾಡಿದರೆ ತಪ್ಪಲ್ಲವೆಂದು ಅವರ ಭಾವನೆ. ಆದರೂ ಭಾರತೀಯರ ಮೇಲೂ ವಿಶ್ವಾಸವಿತ್ತು. ಗೋಖಲೆಯವರು ದಕ್ಷಿಣ ಆಫ್ರಿಕಕ್ಕೆ ಹೋದಾಗ, ಆಫ್ರಿಕದಲ್ಲಿ ಅವರಿಗೆ ಕೊಟ್ಟ ಸಾರ್ವಜನಿಕ ಸ್ವಾಗತಗಳಲ್ಲಿ ಮೊದಲನೆಯದು ಕೇಪ್ ಟೌನಿನಲ್ಲಿ. ನಗರ ಭವನದಲ್ಲಿ ಸೇರಿದ್ದ ಆ ಮಹಾಸಭೆಗೆ ಷ್ರೀನರರೇ ಅಧ್ಯಕ್ಷರಾಗಿದ್ದರು. ಮೆರಿಮನರೂ ಬಹಳ ಗೌರವದಿಂದ ಗೋಖಲೆಯವರನ್ನು ಕಂಡು ಭಾರತೀಯರ ಪರ ವಾಗಿ ಸಹಾನುಭೂತಿ ವ್ಯಕ್ತಪಡಿಸಿದರು. ಮೆರಿಮನರಂತೆ ಇನ್ನೂ ಅನೇಕ ಯೂರೋಪಿಯನರಿದ್ದರು. ಮಾದರಿಗಾಗಿ ಇಲ್ಲಿ ಈ ಹೆಸರಗಳನ್ನು ಮಾತ್ರ ಹೇಳಿದ್ದೇನೆ.

ಕೇಪ್ ಕಾಲೊನಿಯ ವೃತ್ತಪತ್ರಿಕೆಗಳು ಸಹ, ದಕ್ಷಿಣ ಆಫ್ರಿಕದ ಇತರ ವೃತ್ತಪತ್ರಿಕೆಗಳಿಗಿಂತ ಭಾರತೀಯರಿಗೆ ಹೆಚ್ಚು ಸೌಹಾರ್ದವನ್ನು ತೋರಿಸುತ್ತಿದ್ದುವು.

ಈ ಎಲ್ಲ ಕಾರಣಗಳಿಂದ ದಕ್ಷಿಣ ಆಫ್ರಿಕದ ಇತರ ಭಾಗಗಳಿಗಿಂತ ಕೇಪ್ ಕಾಲೋನಿಯಲ್ಲಿ ವರ್ಣದ್ವೇಷ ಕಡಮೆ ಇದ್ದುದು ನಿಜವಾದರೂ, ಇತರ ಕಾಲೊನಿಗಳಲ್ಲಿನ ಭಾರತೀಯ ವಿರೋಧ ಭಾವನೆ ಕ್ರಮೇಣ ಕೇಪ್ ಕಾಲೊನಿಯನ್ನೂ ಆವರಿಸಿತು. ಅಲ್ಲಿಯೂ ಸಹ ಭಾರತೀಯರು ವಲಸೆ ಬರುವುದನ್ನು ತಡೆಯುವುದಕ್ಕೂ, ವರ್ತಕರು ರಹದಾರಿ ಪಡೆ ಯುವುದಕ್ಕೂ ಶಾಸನಗಳಾದವು.

ಈ ರೀತಿ ಬೋಅರ್ ಯುದ್ಧದ ಹೊತ್ತಿಗೆ ಭಾರತೀಯರಿಗೆ ತೆರೆದಿದ್ದ ದಕ್ಷಿಣ ಆಫ್ರಿಕದ ಬಾಗಿಲು ಹೆಚ್ಚು ಕಡಮೆ ಮುಚ್ಚಿತು. ಟ್ರಾನ್ಸ್ವಾಲಿನಲ್ಲಿ ರಿಜಿಸ್ಟ್ರೇಷನ್ ಶುಲ್ಕ ಬಿಟ್ಟು ವಲಸೆಗಾರರಮೇಲೆ ಯಾವ ಅಡ್ಡಿಯೂ ಇರಲಿಲ್ಲ. ನೇಟಾಲ್ ಮತ್ತು ಕೇಪ್ ಕಾಲೊನಿಯ ಬಂದರುಗಳು ಭಾರತೀಯರಿಗೆ ಮುಚ್ಚಿದ ಒಡನೆ, ಟ್ರಾನ್ಸ್ವಾಲಿಗೆ ಹೋಗಲು ಸಹ ಬಂದರಿನಲ್ಲಿಳಿಯುವುದು ಕಷ್ಟವಾಯಿತು. ಪೋರ್ಚುಗೀಸ್ ಬಂದರಾದ ಡೆಲಗೋವ ಕೊಲ್ಲಿಯ ಬಂದರಿನ ಮುಖಾಂತರ ಹೋಗಬೇಕಾಗಿತ್ತು. ಆದರೆ ಪೋರ್ಚುಗೀಸರೂ ಇಂಗ್ಲಿಷರನ್ನು ಅನುಕರಿಸಿದರು. ಹಾಗೂ ಬಂದರುಗಳ ಅಧಿಕಾರಿಗಳಿಗೆ ಲಂಚ ಕೊಟ್ಟು, ಅನೇಕ ಕಷ್ಟ

ಗಳನ್ನೂ ಅನುಭವಿಸಿ ನೇಟಾಲ್ ಮುಖಾಂತರವೊ, ಡೆಲಗೋವ ಕೊಲ್ಲಿಯ ಮುಖಾಂತರವೊ ಕೆಲವರು ಭಾರತೀಯರು ಟ್ರಾನ್ಸ್‌ವಾಲನ್ನು ಸೇರಿದರು.

## ೬. ಸತ್ಯಾಗ್ರಹಕ್ಕೆ ಮುಂಚಿನ ಹೋರಾಟ

ಹಿಂದಿನ ಅಧ್ಯಾಯಗಳಲ್ಲಿ ಭಾರತೀಯರ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವಾಗ ತಮ್ಮ ಮೇಲಿನ ಹಲ್ಲೆಗಳನ್ನು ಅವರು ಯಾವ ರೀತಿ ಎದುರಿಸಿದರೆಂಬುದನ್ನು ತಕ್ಕಮಟ್ಟಿಗೆ ನೋಡಿದ್ದೇವೆ. ಆದರೂ ಸತ್ಯಾಗ್ರಹದ ಮೂಲವನ್ನು ಸರಿಯಾಗಿ ಗ್ರಹಿಸಬೇಕಾದರೆ ಸತ್ಯಾಗ್ರಹಕ್ಕೆ ಮುಂಚೆ ಭಾರತೀಯರು ತಮ್ಮ ಹಕ್ಕುಗಳ ರಕ್ಷಣೆಗಾಗಿ ಕೈಗೊಂಡ ಪ್ರಯತ್ನಗಳನ್ನು ವಿಶದಪಡಿಸುವುದು ಅವಶ್ಯ.

೧೮೯೩ರ ವರೆಗೆ ದಕ್ಷಿಣ ಆಫ್ರಿಕದಲ್ಲಿ ಭಾರತೀಯರ ಪಕ್ಷವನ್ನು ವಹಿಸಿ ಹೋರಾಡತಕ್ಕ ಸ್ವಾತಂತ್ರ್ಯಪ್ರಿಯರೂ ವಿದ್ಯಾವಂತರೂ ಆದ ಭಾರತೀಯರು ಯಾರೂ ಇರಲಿಲ್ಲ. ಭಾರತೀಯರಲ್ಲಿ ಇಂಗ್ಲಿಷ್ ಬಲ್ಲವರೆಂದರೆ ಗುಮಾಸ್ತರು ಮಾತ್ರ; ಅವರಿಗಿದ್ದ ಇಂಗ್ಲಿಷ್ ಜ್ಞಾನ ಲೆಕ್ಕ ಬರೆಯುವಮಟ್ಟಿಗೆ ಮಾತ್ರ; ಅರ್ಜಿಗಳನ್ನು ಬರೆಯುವಷ್ಟು ಜ್ಞಾನವಾಗಲಿ, ತಮ್ಮ ಯಜಮಾನನ ಕೆಲಸ ಬಿಟ್ಟು ಇತರ ವಿಷಯಗಳ ಕಡೆಗೆ ಗಮನ ಕೊಡುವಷ್ಟು ಕಾಲವಾಗಲಿ ಅವರಿಗಿರಲಿಲ್ಲ. ಇನ್ನು ಕೆಲವರು ದಕ್ಷಿಣ ಆಫ್ರಿಕದಲ್ಲೇ ಹುಟ್ಟಿ ಬೆಳೆದವರು. ಇವರೆಲ್ಲರೂ ಕೂಲಿಗಾರರ ಸಂತತಿಯವರಾಗಿ ನ್ಯಾಯಸ್ಥಾನಗಳಲ್ಲಿ ಸರಕಾರಿ ನೌಕರಿಯಲ್ಲಿ ಭಾಷಾಂತರಕಾರರಾಗಿದ್ದ ಕಾರಣ ಭಾರತೀಯರಿಗೆ ಮಾತಿನಲ್ಲಿ ಸಹಾನುಭೂತಿಯನ್ನು ತೋರುತ್ತಿದ್ದರೇ ಹೊರತು ಇತರ ಯಾವ ಸಹಾಯವನ್ನೂ ಮಾಡುವಂತೆ ಇರಲಿಲ್ಲ.

ವಾಯಿದೆ ಕೂಲಿಗಳೂ, ವಾಯಿದೆ ವಿಮುಕ್ತ ಕೂಲಿಗಳೂ ಮುಖ್ಯವಾಗಿ ಸಂಯುಕ್ತಪ್ರಾಂತ ಮತ್ತು ಮದರಾಸ್ ಕಡೆಗಳಿಂದ ಬಂದವರು; ಆದರೆ ಸ್ವತಂತ್ರರಾಗಿ ವ್ಯಾಪಾರ ಮತ್ತು ಗುಮಾಸ್ತೆ ಕೆಲಸಗಳಿಗಾಗಿ ಬಂದ ಮುಸಲ್ಮಾನ ವರ್ತಕರು ಮತ್ತು ಹಿಂದೂ ಗುಮಾಸ್ತರು ಎಲ್ಲರೂ ಗುಜರಾತಿನವರು. ಕೆಲವು ಜನ ಪಾರ್ಸಿ ವರ್ತಕರೂ ಗುಮಾಸ್ತರೂ ಇದ್ದರೂ

ಅವರ ಸಂಖ್ಯೆ ೩೦–೪೦ ಕ್ಕಿಂತ ಹೆಚ್ಚು ಇರಲಿಲ್ಲ. ಭಾರತದ ಹೊರಗೆ ಸಿಂಧುದೇಶದ ವರ್ತಕನು ಎಲ್ಲೇ ಇರಲಿ ಆತನ ವ್ಯಾಪಾರ ಮುಖ್ಯವಾಗಿ ರೇಷ್ಮೆ ಮತ್ತು ಕಸೂತಿ ಬಟ್ಟೆಗಳು, ಕೆತ್ತನೆ ಪೆಟ್ಟಿಗೆಗಳು, ಎಬೊನಿ, ಗಂಧ, ದಂತ ಮುಂತಾದ ಮೋಹಕ ವಸ್ತುಗಳು–ಇವುಗಳಿಗೆ ಸಂಬಂಧಪಟ್ಟದ್ದು. ಆತನ ಗಿರಾಕಿಗಳೆಲ್ಲರೂ ಮುಖ್ಯವಾಗಿ ಯೂರೋಪಿಯನ್ ಜನರು.

ವಾಯಿದೆ ಕೆಲಸಗಾರರನ್ನು ಯೂರೋಪಿಯನ್ ಜನರು ಕೂಲಿಗಳೆಂದು ಕರೆಯುತ್ತಿದ್ದರು. ಕೂಲಿ ಎಂದರೆ ಸಾಮಾನು ಹೊರುವವನು. ಈ ಶಬ್ದ ಎಷ್ಟು ಬಳಕೆಗೆ ಬಂದಿತೆಂದರೆ ವಾಯಿದೆ ಕೆಲಸಗಾರರೆಲ್ಲ ಕೂಲಿ ಎಂದೇ ತಮ್ಮ ವಿಳಾಸವನ್ನು ಬರಸತೊಡಗಿದರು. ಭಾರತೀಯ ನ್ಯಾಯವಾದಿಗಳನ್ನೂ ವರ್ತಕರನ್ನೂ ನೂರಾರು ಯೂರೋಪಿಯನರು ಕೂಲಿ ಲಾಯರುಗಳೆಂದೂ, ಕೂಲಿ ವರ್ತಕರೆಂದೂ ಕರೆಯುತ್ತಿದ್ದರು. ಹಾಗೆ ಕರೆಯುವುದು ಅವಮಾನವೆಂದು ನಂಬಲಾರದ ಅಥವಾ ಭಾವಿಸಲಾರದ ಯೂರೋಪಿಯನರು ಕೆಲವರಿದ್ದರು. ಆದರೆ ಅನೇಕರು ಉದ್ದೇಶಪೂರ್ವಕವಾಗಿ ಅಗೌರವ ಪಡಿಸಬೇಕೆಂದೇ ಆ ರೀತಿ ಕರೆಯುತ್ತಿದ್ದರು. ಆದ್ದರಿಂದ ಸ್ವತಂತ್ರರಾದ ಭಾರತೀಯರು ಕೂಲಿಗಳಿಂದ ಬೇರೆಯಾಗಲು ಪ್ರಯತ್ನಿಸಿದರು. ಇದು ಮತ್ತು ಇನ್ನಿತರ ಕಾರಣಗಳಿಂದ ಒಂದುಕಡೆ ವಾಯಿದೆ ಕೆಲಸಗಾರರು ಮತ್ತು ವಾಯಿದೆ ವಿಮುಕ್ತ ಕೆಲಸಗಾರರಿಗೂ ಇನ್ನೊಂದು ಕಡೆ ಸ್ವತಂತ್ರ ಭಾರತೀಯರಿಗೂ ಪರಸ್ಪರ ಭೇದಭಾವನೆಗೆ ಪ್ರಾರಂಭವಾಯಿತು.

ಸ್ವತಂತ್ರ ಭಾರತೀಯರು, ಅದರಲ್ಲೂ ಮುಸಲ್ಮಾನ ವರ್ತಕರು ಮೇಲೆ ಹೇಳಿದ ಅನ್ಯಾಯಗಳನ್ನು ಎದುರಿಸಲು ನಿಶ್ಚಯಿಸಿದರು. ಆದರೆ ವಾಯಿದೆ ಕೆಲಸಗಾರರ ಮತ್ತು ವಾಯಿದೆ ವಿಮುಕ್ತ ಕೆಲಸಗಾರರ ಸಹಕಾರ ಪಡೆಯಲು ಅವರು ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಪ್ರಾಯಶಃ ಅವರ ಸಹಾಯ ಪಡೆಯಬೇಕೆಂದು ಯಾರಿಗೂ ಹೊಳೆದಿರಲಿಕ್ಕಿಲ್ಲ; ಹೊಳೆದಿದ್ದರೂ ಕೆಲಸಗಾರರನ್ನು ತಮ್ಮ ಚಳವಳಿಗೆ ಸೇರಿಸಿಕೊಂಡರೆ ಅದರಿಂದ ತೊಂದರೆಯಾಗಬಹುದೆಂದು ಅವರ ಅಭಿಪ್ರಾಯವಿರಬಹುದು. ಯೂರೋಪಿಯನರ ಚಳವಳಿಯೆಲ್ಲ ಭಾರತೀಯ ವರ್ತಕರ ಮೇಲೆ

ಕೇಂದ್ರೀಕೃತವಾದ್ದರಿಂದ ಚಳವಳಿಯ ವಿರೋಧ ರಕ್ಷಣಾಕಾರ್ಯಕ್ರಮ ಗಳೆಲ್ಲವನ್ನೂ ಅವರೇ ತೆಗೆದುಕೊಂಡರು. ಇಂಡಿಯ ದೇಶದಲ್ಲಿ ಸಾರ್ವ ಜನಿಕ ಕ್ಷೇತ್ರಗಳಲ್ಲಿ ಕೆಲಸ ಮಾಡಿದ ಅನುಭವವಿಲ್ಲದೆ, ಇಂಗ್ಲಿಷ್ ವಿದ್ಯಾಭ್ಯಾಸವಿಲ್ಲದೆ ಬಹಳ ಅನನುಕೂಲದಲ್ಲಿದ್ದರೂ ಸ್ವತಂತ್ರ ಭಾರತೀಯರು ನಿಜವಾಗಿಯೂ ಧೈರ್ಯದಿಂದ ಕಷ್ಟಗಳನ್ನು ಎದುರಿ ಸಿದರು. ಯೂರೋಪಿಯನ್ ನ್ಯಾಯವಾದಿಗಳನ್ನಿಟ್ಟು, ಅರ್ಜಿಗಳನ್ನು ಬರೆಯಿಸಿ, ಕೆಲವುವೇಳೆ ಅಧಿಕಾರಿಗಳೆದುರಿಗೆ ನಿಯೋಗಗೋಷ್ಠಿಹೋಗಿ, ತಮ್ಮ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳಲು ಕೈಲಾದ ಎಲ್ಲ ಪ್ರಯತ್ನ ವನ್ನೂ ಮಾಡಿದರು. ೧೮೯೩ರ ವರೆಗೆ ಇದೇ ಸ್ಥಿತಿ ಇತ್ತು.

ಕೆಲವು ತಾರೀಖುಗಳನ್ನು ವಾಚಕರು ಜ್ಞಾಪಕದಲ್ಲಿಡುವುದು ಒಳ್ಳೆ ಯದು. ೧೮೯೩ಕ್ಕೆ ಮುಂಚೆಯೇ ಭಾರತೀಯರಿಗೆ ಆರೇಂಜ್ ಫ್ರೀ ಸ್ಟೇಟಿನಿಂದ ಉಚ್ಚಾಟನೆಯಾಯಿತು. ಟ್ರಾನ್ಸ್‌ವಾಲಿನಲ್ಲಿ ೧೮೮೫ನೆಯ ಶಾಸನದ ೩ನೆಯ ವಿಧಿ ಜಾರಿಯಲ್ಲಿತ್ತು. ನೇಟಾಲಿನಲ್ಲಿ ವಾಯಿದೆ ಕೆಲಸ ಗಾರರನ್ನು ಮಾತ್ರ ಬಿಟ್ಟು ಉಳಿದವರನ್ನು ಕಾಲೊನಿಯಿಂದ ಹೊರಡಿಸುವ ಕಾನೂನು ಮಾಡಬೇಕೆಂದಿದ್ದರು; ಅದೇ ಉದ್ದೇಶದಿಂದ ಜವಾಬ್ದಾರಿ ಸರಕಾರವನ್ನೂ ಸಂಪಾದಿಸಿದ್ದರು.

ನಾನು ೧೮೯೩ನೆಯ ಏಪ್ರಿಲ್‌ನಲ್ಲಿ ಇಂಡಿಯ ದೇಶ ಬಿಟ್ಟು ದಕ್ಷಿಣ ಆಫ್ರಿಕಕ್ಕೆ ಹೊರಟೆ. ವಲಸೆ ಹೋದ ಭಾರತೀಯರ ಪೂರ್ವ ಚರಿತ್ರೆ ಯಾವುದೂ ಗೊತ್ತಿರಲಿಲ್ಲ. ನನ್ನ ವಕೀಲಿ ವೃತ್ತಿಯ ಕೆಲಸಕ್ಕಾಗಿ ಮಾತ್ರ ನಾನು ಅಲ್ಲಿಗೆ ಹೋದುದು. ಪೋರ್ಬಂದರಿನ ಮೆಮನ್ ವ್ಯಾಪಾರಿ ಗಳೊಬ್ಬರು ಡರ್ಬಾನಿನಲ್ಲಿ ದಾದಾ ಅಬ್ದುಲ್ಲಾ ಎಂಬ ಹೆಸರಿನಿಂದ ಅಂಗಡಿ ಇಟ್ಟು ವ್ಯಾಪಾರ ಮಾಡುತ್ತಿದ್ದರು. ಪ್ರಿಟೋರಿಯಾದಲ್ಲಿ ತಾಯಿಬ್ ಹಾಜಿಖಾನ್ ಮಾಮದ್ ಎಂಬ ಹೆಸರಿನಿಂದ ಅಷ್ಟೇ ಪ್ರಖ್ಯಾತ ರಾದ ಇನ್ನೊಬ್ಬ ವರ್ತಕರು ಇವರಿಗೆ ಪ್ರತಿಕಕ್ಷಿಯಾಗಿ ವ್ಯಾಪಾರಮಾಡು ತ್ತಿದ್ದರು. ದುರದೃಷ್ಟವಶಾತ್ ಇವರಿಬ್ಬರಿಗೂ ಒಂದು ವ್ಯಾಜ್ಯ ಬಿದ್ದು ನ್ಯಾಯಸ್ಥಾನ ಹತ್ತಿದರು. ಪೋರ್ಬಂದರಿನ ದಾದಾ ಅಬ್ದುಲ್ಲಾನ ಪಾಲುಗಾರನು ಆ ವ್ಯಾಜ್ಯ ನಡಸಲು ನನ್ನನ್ನು ಕಳುಹಿಸಿದರೆ ತಮಗೆ

ಅನುಕೂಲವಾಗಬಹುದೆಂದು ಯೋಚಿಸಿದನು. ನಾನು ಆಗತಾನೆ ವಕೀಲಿ ವೃತ್ತಿಯನ್ನು ಪ್ರಾರಂಭಿಸಿದ್ದೆ. ವೃತ್ತಿಯ ಅನುಭವ ಏನೂ ಇರಲಿಲ್ಲ. ನಾನು ಮೊಕದ್ದಮೆಗೆ ಹಾಜರಾಗುವುದರಿಂದ ಮೊಕದ್ದಮೆ ಕೆಡುವುದೆಂಬ ಭಯವೇನೂ ಆತನಿಗೆ ಇರಲಿಲ್ಲ. ವ್ಯಾಜ್ಯವನ್ನು ನಾನೇ ನಡಸಬೇಕಾಗಿರಲಿಲ್ಲ. ಆತನ ಕಡೆಯ ದಕ್ಷಿಣ ಆಫ್ರಿಕದ ನ್ಯಾಯವಾದಿಗಳಿಗೆ ನನ್ನ ಸಲಹೆಗಳನ್ನು ಕೊಟ್ಟರೆ ಸಾಕಾಗಿತ್ತು. ಹೊಸ ಅನುಭವದ ಆಸೆ ನನಗೆ ಬಹಳವಿತ್ತು. ಹೊಸ ಸನ್ನಿವೇಶಗಳ ಪರಿಚಯ ಮಾಡಿಕೊಳ್ಳಬೇಕೆಂಬ ಕುತೂಹಲವಿತ್ತು. ಕಾಥಿಯವಾಡದ ಪಿತೂರಿಯ ವಾತಾವರಣದಲ್ಲಿ ನನಗೆ ಉಸಿರುಕಟ್ಟಿದಂತೆ ಇತ್ತು. ಒಂದು ವರ್ಷದವರೆಗೆ ಮಾತ್ರ ನನ್ನ ಒಪ್ಪಂದವಿತ್ತು. ಆಫ್ರಿಕಕ್ಕೆ ಹೋಗಲು ಇಷ್ಟವಿಲ್ಲವೆಂದು ಹೇಳಲು ನನಗೇನೂ ಅಭ್ಯಂತರವಿರಲಿಲ್ಲ. ನನಗೆ ಹೋಗಿಬರುವ ಮತ್ತು ದಕ್ಷಿಣ ಆಫ್ರಿಕದಲ್ಲಿರುವವರೆಗಿನ ಖರ್ಚುಗಳನ್ನು ಕೊಟ್ಟು, ನನ್ನ ರುಸುಮಿಗಾಗಿ ೧೦೫ ಪೌಂಡುಗಳನ್ನು ಕೊಡುವುದಾಗಿ ದಾದಾ ಅಬ್ದುಲ್ಲಾ ಅಂಗಡಿಯವರು ಒಪ್ಪಿದ್ದರಿಂದ ನನಗೆ ಯಾವ ನಷ್ಟವೂ ಇರಲಿಲ್ಲ. ನನಗೆ ತಂದೆಯಂತೆ ಇದ್ದು, ಈಗ ಗತಿಸಿರುವ ನನ್ನ ಅಣ್ಣಂದಿರು ಈ ಒಪ್ಪಂದ ಮಾಡಿದ್ದರು. ಅವರ ಮಾತು ನನಗೆ ವೇದವಾಕ್ಯ. ನಾನು ದಕ್ಷಿಣ ಆಫ್ರಿಕಕ್ಕೆ ಹೋಗಬೇಕೆಂದು ಅವರು ಇಷ್ಟಪಟ್ಟರು. ಅದರಂತೆ ೧೮೯೩ನೆಯ ಮೇ ತಿಂಗಳಲ್ಲಿ ನಾನು ಡರ್ಬಾನ್ ನಗರವನ್ನು ಸೇರಿದೆ.

ಬ್ಯಾರಿಸ್ಟರ್ ಪರೀಕ್ಷೆ ಮಾಡಿದ್ದುದರಿಂದ ನನ್ನ ದೃಷ್ಟಿಯಂತೆ ಒಳ್ಳೆಯ ಬಟ್ಟೆಯನ್ನೇ ಧರಿಸಿ ಸ್ವಲ್ಪ ಅಹಂಭಾವನೆಯಿಂದ ಡರ್ಬಾನಿನಲ್ಲಿ ಹಡಗು ಇಳಿದೆ. ಆದರೆ ಸ್ವಲ್ಪದರದಲ್ಲಿಯೇ ನನಗೆ ಜ್ಞಾನೋದಯವಾಯಿತು. ನನ್ನ ಕಕ್ಷಿಗಾರನಾದ ದಾದಾ ಅಬ್ದುಲ್ಲಾನ ಪಾಲುಗಾರನು ನೇಟಾಲಿನ ಸ್ಥಿತಿಗತಿಗಳನ್ನು ತಿಳಿಸಿದ್ದನು. ಆದರೆ ನಾನು ಕಣ್ಣಾರ ಕಂಡ ಚಿತ್ರಕ್ಕೂ ಆತನ ಹೇಳಿಕೆಗೂ ಯಾವ ಸಾಮ್ಯವೂ ಇರಲಿಲ್ಲ. ಅದರಲ್ಲಿ ಅವನ ತಪ್ಪು ಏನೂ ಇರಲಿಲ್ಲ. ವಸ್ತುಸ್ಥಿತಿ ಆತನಿಗೂ ತಿಳಿದಿರಲಿಲ್ಲ. ತನಗೆ ತಿಳಿದುದನ್ನು ನಿರ್ವಂಚನೆಯಿಂದ ತಿಳಿಸುವ ಸಾಧು ಪ್ರಕೃತಿ ಆತನದು. ನೇಟಾಲಿನಲ್ಲಿ ಭಾರತೀಯರ ಕಷ್ಟವೇನೆಂಬುದರ ಅರಿವು ಆತನಿಗೆ

ಎಳ್ಳಷ್ಟೂ ಇರಲಿಲ್ಲ. ಅಲ್ಲಿನ ಅವಮಾನಕರ ಸನ್ನಿವೇಶಗಳು ಆತನ ದೃಷ್ಟಿಯಲ್ಲಿ ಅಗೌರವವೆಂದೂ ತೋರಲಿಲ್ಲ. ನಾನು ಹೋದ ಮೊದಲನೆಯ ದಿನವೇ ಯೂರೋಪಿಯನರು ಭಾರತೀಯರನ್ನು ತುಚ್ಛವಾಗಿ ಕಂಡುದನು ನೋಡಿದೆ.

ನಾನು ಹೋಗಿ ಸೇರಿದ ಹದಿನೈದು ದಿವಸಗಳಲ್ಲಿಯೇ, ನ್ಯಾಯಸ್ಥಾನದ ನನ್ನ ಅನುಭವ, ರೈಲು ಗಾಡಿಗಳಲ್ಲಿ ನನಗೆ ಕೊಟ್ಟ ತೊಂದರೆ, ಮಧ್ಯ ದಾರಿಯಲ್ಲಿ ತಿಂದ ಏಟು, ಹೋಟೆಲುಗಳಲ್ಲಿ ಸ್ಥಳ ದೊರೆಯಲು ಪಟ್ಟ ಕಷ್ಟ ಮತ್ತು ಸ್ಥಳ ದೊರೆಯದ ಅನುಭವ ಇವು ಯಾವುವನ್ನೂ ಇಲ್ಲಿ ಹೇಳುವುದಿಲ್ಲ. ಅನುಭವಗಳೆಲ್ಲ ನನಗೆ ರಕ್ತಗತವಾದುವೆಂದರೆ ಸಾಕು. ಸ್ವಾರ್ಥದೃಷ್ಟಿ ಮತ್ತು ದೇಶ ನೋಡಬೇಕೆಂಬ ಆಸೆಯಿಂದ ಒಂದು ವಿವಾದ ನಡಸಲು ಅಲ್ಲಿಗೆ ನಾನು ಹೋಗಿದ್ದೆ. ಮೊದಲನೆಯ ವರ್ಷ ಈ ಕ್ರೂರ ವರ್ತನೆಗಳನ್ನು ಕಣ್ಣಾರ ಕಂಡುದಲ್ಲದೆ ಸ್ವತಃ ಅನುಭವಿಸಿದೆ. ಆಗ ನನಗೆ ಕರ್ತವ್ಯ ಜ್ಞಾನೋದಯವಾಯಿತು. ಸ್ವಾರ್ಥದೃಷ್ಟಿಯಿಂದ ದಕ್ಷಿಣ ಆಫ್ರಿಕದಲ್ಲಿ ನನಗೆ ಯಾವ ಉಪಯೋಗವೂ ಇಲ್ಲವೆಂದು ಭಾವಿಸಿದೆ. ಎಲ್ಲಿ ಗೌರವವಿಲ್ಲವೊ ಆ ದೇಶದಲ್ಲಿ ಹಣ ಸಂಪಾದಿಸುವುದಿರಲಿ, ವಾಸವಾಗಿರಲು ಇಷ್ಟವಿರುವುದೂ ಹಾಗಿರಲಿ, ನಿಜವಾಗಿಯೂ ಜುಗುಪ್ಸೆ ಸಹ ಹುಟ್ಟಿತು. ಆಗ ನನ್ನ ಸ್ಥಿತಿ ಮುಳ್ಳಿನಮೇಲೆ ನಿಂತಂತೆ ಇತ್ತು. ನನಗೆ ಆಗ ಇದ್ದುದು ಎರಡು ದಾರಿ. ಅಲ್ಲಿನ ಸ್ಥಿತಿಗತಿಗಳನ್ನು ಸರಿಯಾಗಿ ತಿಳಿಸದೆ ನನ್ನನ್ನು ಕರೆತಂದುದರಿಂದ ಇರಲು ಇಷ್ಟವಿಲ್ಲವೆಂದು ಹೇಳಿ, ದಾದಾ ಅಬ್ದುಲ್ಲಾ ಅಂಗಡಿಯವರ ಒಪ್ಪಂದದಿಂದ ನಿವೃತ್ತನಾಗಿ ಮರಳಿ ಭಾರತಕ್ಕೆ ಬರುವುದು; ಅಥವಾ ಎಲ್ಲ ಕಷ್ಟವನ್ನೂ ಸಹಿಸಿಕೊಂಡು ನನ್ನ ಒಪ್ಪಂದವನ್ನು ಪಾಲಿಸಿಕೊಂಡು ಬರುವುದು. ಮಾರಿಷ್‌ಬರ್ಗ್‌ನಲ್ಲಿ ಒಬ್ಬ ಪೋಲೀಸಿನವನು ನನ್ನನ್ನು ರೈಲುಗಾಡಿಯಿಂದ ಹೊರದೂಡಿದನು. ರೈಲು ಹೊರಟುಹೋದ್ದರಿಂದ ಪ್ರಯಾಣಿಕರ ಕೊಠಡಿಯಲ್ಲಿ ಕೊರೆಯುವ ಚಳಿಯಲ್ಲಿ ನಡುಗುತ್ತ ಕುಳಿತಿರಬೇಕಾಯಿತು. ನನ್ನ ಸಾಮಾನು ಎಲ್ಲಿದೆ ಎಂಬುದೂ ನನಗೆ ಗೊತ್ತಿರಲಿಲ್ಲ; ಪುನಃ ಅವಮಾನಗೊಳಿಸಿ ಹೊಡೆದಾರೆಂದು ಯಾರನ್ನೂ ವಿಚಾರಿಸಲಿಲ್ಲ. ಸಂಶಯ ನನ್ನ

ಮನಸ್ಸನ್ನು ಆವರಿಸಿತು. ನಡುರಾತ್ರಿಯಲ್ಲಿ, ಭಾರತಕ್ಕೆ ಓಡಿಹೋಗುವುದು ಹೇಡಿತನವೆಂದು ತೀರ್ಮಾನಿಸಿದೆ. ನಾನು ಕೈಗೊಂಡ ಕೆಲಸ ಪೂರೈಸಲೇ ಬೇಕು. ಎಷ್ಟೇ ಅವಮಾನವಾಗಲಿ, ಏಟು ತಿನ್ನಲಿ, ಪ್ರಿಟೋರಿಯಾ ಸೇರಬೇಕು; ಪ್ರಿಟೋರಿಯಾ ನನ್ನ ಗುರಿ. ಅಲ್ಲಿಯೇ ವ್ಯಾಜ್ಯ ನಡೆಯುತ್ತ ಇದ್ದುದು. ನನ್ನ ಕೆಲಸದೊಂದಿಗೆ ಸಾಧ್ಯವಾದರೆ ಇನ್ನೂ ಕೆಲವು ಕಾರ್ಯ ಕ್ರಮವನ್ನು ಕೈಕೊಳ್ಳಬೇಕೆಂದು ನಿರ್ಧರಿಸಿದೆ. ಈ ನಿರ್ಧಾರ ನನ್ನ ಮನಸ್ಸಿಗೆ ಸ್ವಲ್ಪ ಶಾಂತಿಯನ್ನುಂಟುಮಾಡಿ ಮನಸ್ಸ್ಥೈರ್ಯವನ್ನು ಕೊಟ್ಟಿತು. ಆದರೆ ನಿದ್ರೆ ಮಾತ್ರ ಬರಲಿಲ್ಲ.

ಬೆಳಗಾಗುತ್ತಲೆ ದಾದಾ ಅಬ್ದುಲ್ಲಾ ಅವರ ಅಂಗಡಿಯವರಿಗೂ, ರೈಲ್ವೆ ಜನರಲ್ ಮ್ಯಾನೇಜರವರಿಗೂ ಟೆಲಿಗ್ರಾಂ ಕೊಟ್ಟೆ. ಇಬ್ಬರೂ ಉತ್ತರ ಕೊಟ್ಟರು. ದಾದಾ ಅಬ್ದುಲ್ಲಾ ಮತ್ತು ಆಗ ನೇಟಾಲಿನಲ್ಲಿದ್ದ ಅವರ ಪಾಲುದಾರರಾದ ಸೇಟ್ ಅಬ್ದುಲ್ಲಾ ಹಾಜಿ ಆದಂ ಝಾವೇರಿ ಯವರು ಉಗ್ರ ಪ್ರತಿಭಟನೆಯ ಕಾರ್ಯಕ್ರಮವನ್ನು ಕೈಗೊಂಡರು. ಬೇರೆ ಬೇರೆ ಸ್ಥಳದ ತಮ್ಮ ಭಾರತೀಯ ಪ್ರತಿನಿಧಿಗಳಿಗೆ ನನ್ನ ಯೋಗ ಕ್ಷೇಮವನ್ನು ವಿಚಾರಿಸಿಕೊಳ್ಳಬೇಕೆಂದು ತಂತಿ ಕೊಟ್ಟರು. ಅದರಂತೆ ಜನರಲ್ ಮ್ಯಾನೇಜರನ್ನೂ ನೋಡಿದರು. ಅಲ್ಲಿನ ಪ್ರತಿನಿಧಿಗೆ ಬಂದ ತಂತಿ ವರ್ತಮಾನದ ಮೇಲೆ ಮಾರಿಷ್‌ಬರ್ಗ್‌ನ ಭಾರತೀಯ ವರ್ತಕರು ನನ್ನನ್ನು ನೋಡಲು ಬಂದರು. ನನ್ನಂತೆ ಅವರೆಲ್ಲರೂ ಸಂಕಟಕ್ಕೀಡಾಗಿರು ವುದಾಗಿಯೂ, ಆದರೆ ಅವರ ಪಾಲಿಗೆ ಅದು ಸರ್ವಸಾಮಾನ್ಯವಾದ ಕಾರಣ ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲವಾಗಿಯೂ ಹೇಳಿ ನನ್ನನ್ನು ಸಮಾಧಾನಪಡಿಸಲು ಪ್ರಯತ್ನಪಟ್ಟರು. ವ್ಯಾಪಾರಕ್ಕೂ ಮಾನ ಮರ್ಯಾದೆಗಳಿಗೂ ಬಹು ದೂರ. ದುಡ್ಡನ್ನು ಜೇಬಿಗೆ ಸೇರಿಸಿದಂತೆ ಅಗೌರವವನ್ನೂ ಸಹಿಸಬೇಕೆಂದು ನಿರ್ಧರಿಸಿದ್ದರು. ಭಾರತೀಯರು ಮುಖ್ಯ ಬಾಗಿಲಿನಿಂದ ರೈಲ್ವೆ ಸ್ಟೇಷನ್‌ಗಳಿಗೆ ಹೋಗಲು ಅವಕಾಶವಿಲ್ಲ ದುದನ್ನೂ ಟಿಕೆಟ್ ತೆಗೆದುಕೊಳ್ಳಲು ಅವರಿಗಿರುವ ಕಷ್ಟವನ್ನೂ ವಿವರಿ ಸಿದರು. ಅದೇ ರಾತ್ರಿ ಪ್ರಿಟೋರಿಯಾಕ್ಕೆ ಹೊರಟೆ. ಸರ್ವಪರೀಕ್ಷಕನಾದ ಭಗವಂತನು ನನ್ನ ದೃಢಪತ್ರಿಜ್ಞೆಯನ್ನು ಇನ್ನೂ ಒರೆಗೆ ಹಚ್ಚಿದನು.

ಪ್ರೆಟೋರಿಯಾ ಸೇರುವ ಮುಂಚೆ ದಾರಿಯಲ್ಲಿ ನನಗೆ ಇನ್ನೂ ಅವಮಾನವಾಗಿ ಏಟುಗಳೂ ಬಿದ್ದುವು. ಇವೆಲ್ಲವೂ ನನ್ನ ಪ್ರತಿಜ್ಞೆಯನ್ನು ಇನ್ನೂ ದೃಢಪಡಿಸಿದುವು.

ಈ ರೀತಿ ೧೮೯೩ರಲ್ಲಿ, ದಕ್ಷಿಣ ಆಫ್ರಿಕದಲ್ಲಿ ಭಾರತೀಯರಿಗೆ ಇದ್ದ ಕಷ್ಟಗಳು ನನಗೆ ಸ್ವತಃ ಪೂರ್ಣ ಅನುಭವವಾದುವು. ಈ ವಿಷಯ ಭಾರತೀಯರೊಂದಿಗೆ ಆಗಾಗ್ಗೆ ಮಾತುಕತೆ ನಡಸಿದೆನೇ ಹೊರತು ಬೇರೆ ಏನೂ ಮಾಡಲಿಲ್ಲ. ಅಂಗಡಿಯ ವಿವಾದ ನೋಡಿಕೊಂಡು ಅದೇ ಸಮಯದಲ್ಲಿ ದಕ್ಷಿಣ ಆಫ್ರಿಕದ ಭಾರತೀಯರ ಕುಂದುಕೊರತೆಗಳ ಪ್ರಶ್ನೆಯನ್ನೂ ನೋಡಿಕೊಳ್ಳುವುದು ಅಸಾಧ್ಯವೆನಿಸಿತು. ಎರಡೂ ಕೆಲಸಗಳನ್ನು ಮಾಡುತ್ತೇನೆಂದು ಹೋಗಿ ಎರಡನ್ನೂ ಹಾಳು ಮಾಡಬಹುದೆಂದು ತೋರಿತು. ಇಷ್ಟರಲ್ಲಿ ೧೮೯೪ಳನೆಯ ಇಸವಿ ಪ್ರಾರಂಭವಾಗಿತ್ತು. ನಾನು ಡರ್ಬಾನಿಗೆ ಬಂದು ಭಾರತಕ್ಕೆ ಹಿಂದಿರುಗಲು ಪ್ರಯತ್ನಿಸಿದೆ. ದಾದಾ ಅಬ್ದುಲ್ಲಾ ನನ್ನನ್ನು ಬೀಳ್ಕೊಡಲು ಏರ್ಪಡಿಸಿದ್ದ ಸಂತೋಷಕೂಟದಲ್ಲಿ ಯಾರೋ ಒಬ್ಬರು 'ನೇಟಾಲ್ ಮರ್ಕ್ಯುರಿ' ಎಂಬ ಪತ್ರಿಕೆಯ ಪ್ರತಿಯೊಂದನ್ನು ನನ್ನ ಕೈಲಿಟ್ಟರು. ಅದನ್ನು ಓದಿದೆ. ನೇಟಾಲ್ ಶಾಸನ ಸಭೆಯ ದೀರ್ಘ ವರದಿಯಲ್ಲಿ 'ಭಾರತೀಯರ ವೋಟಿನ ಹಕ್ಕು' ಎಂಬ ಶಿರೋನಾಮೆಯ ಕೆಳಗೆ ನಾಲ್ಕು ಪಙ್ಕ್ತಿಗಳನ್ನು ನೋಡಿದೆ. ಸ್ಥಳೀಯ ಸರಕಾರ ಭಾರತೀಯರ ವೋಟಿನ ಹಕ್ಕನ್ನು ಕಿತ್ತುಕೊಳ್ಳುವ ಶಾಸನ ತರುವುದರಲ್ಲಿತ್ತು. ಭಾರತೀಯರಿಗೆ ಇದ್ದ ಅಲ್ಪ ಹಕ್ಕುಗಳನ್ನೂ ಕಸಿದುಕೊಳ್ಳಲು ಮೊದಲ ಮಾರ್ಗವಾಯಿತು. ಆ ಸಮಯದಲ್ಲಿನ ಭಾಷಣಗಳಲ್ಲಿ ಸರಕಾರದ ಮನೋಭಿಪ್ರಾಯ ಸ್ಪಷ್ಟವಾಗಿ ಎದ್ದು ತೋರುತ್ತಿತ್ತು. ಅಲ್ಲಿದ್ದ ವರ್ತಕರಿಗೂ ಆ ವರದಿಯನ್ನು ಓದಿ ಹೇಳಿ ಸಾಧ್ಯವಾದ ಮಟ್ಟಿಗೆ ಪರಿಸ್ಥಿತಿಯನ್ನು ವಿವರಿಸಿದೆ. ಭಾರತೀಯರ ಹಕ್ಕುಗಳ ಮೇಲಿನ ಈ ಹಲ್ಲೆಯನ್ನು ತೀವ್ರವಾಗಿ ಪ್ರತಿಭಟಿಸಬೇಕೆಂದು ತಿಳಿಸಿದೆ. ಅವರೂ ಆ ರೀತಿ ಮಾಡಲು ಒಪ್ಪಿದರು. ಆದರೆ ತಮ್ಮಿಂದಲೇ ಹೋರಾಟ ನಡಸಲು ಸಾಧ್ಯವಿಲ್ಲವಾಗಿಯೂ, ನಾನು ಇರಲೇ ಬೇಕಾಗಿಯೂ ನನ್ನನ್ನು ಬಲಾತ್ಕರಿಸಿದರು. ಒಂದೆರೆಡು ತಿಂಗಳು ಇದ್ದು ಈ

ಹೋರಾಟವನ್ನು ನಡಸುವುದಾಗಿ ಒಪ್ಪಿದೆ. ಶಾಸನ ಸಭೆಯ ಮುಂದಿಡಲು ಅದೇ ರಾತ್ರಿ ಒಂದು ಅರ್ಜಿಯನ್ನು ತಯಾರಿಸಿದೆ. ಮುಂದಿನ ನಡವಳಿಕೆಗಳನ್ನು ನಿಲ್ಲಿಸಬೇಕೆಂದು ಸರಕಾರಕ್ಕೂ ತಂತಿಯನ್ನು ಕಳುಹಿಸಲಾಯಿತು. ಸೇಟ್ ಹಾಜಿ ಅದಮ್ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ಏರ್ಪಡಿಸಿ ಅವರ ಹೆಸರಿನಲ್ಲಿ ತಂತಿಯನ್ನು ಕಳುಹಿಸಿದೆವು. ಮಸೂದೆಯ ಪಠನ ಎರಡು ದಿನಗಳು ಮುಂದುವರಿಯಿತು. ದಕ್ಷಿಣ ಆಫ್ರಿಕದಲ್ಲಿ ಭಾರತೀಯರು ಶಾಸನ ಸಭೆಗೆ ಕಳುಹಿಸಿದ ಅರ್ಜಿ ಎಂದರೆ ಇದೇ ಮೊದಲನೆಯದು. ಮಸೂದೆ ಬಿದ್ದು ಹೋಗಲು ಆಗದಿದ್ದರೂ ಅರ್ಜಿಯ ಪ್ರಭಾವವೇನೊ ಬಹಳವಾಗಿತ್ತು. ಇದರ ಚರಿತ್ರೆಯನ್ನು ನಾಲ್ಕನೆಯ ಅಧ್ಯಾಯದಲ್ಲಿ ತಿಳಿಸಿದ್ದೇನೆ. ಈ ಮಾದರಿಯ ಚಳವಳಿಯಲ್ಲಿ ದಕ್ಷಿಣ ಆಫ್ರಿಕದ ಭಾರತೀಯರಿಗೆ ಇದೇ ಮೊದಲನೆಯ ಅನುಭವ. ಇಡಿಯ ಜನಾಂಗದಲ್ಲಿ ಒಂದು ಹೊಸ ಉತ್ಸಾಹದ ಆವೇಶ ಉಂಟಾಯಿತು. ಪ್ರತಿನಿತ್ಯವೂ ಸಭೆಗಳಾಗುತ್ತಿದ್ದುವು. ದಿನ ದಿನಕ್ಕೂ ಹೆಚ್ಚು ಜನರು ಸಭೆಗೆ ಬರಲಾರಂಭಿಸಿದರು. ಬೇಕಾದ ಹಣ ಒಂದಕ್ಕೆರಡರಷ್ಟು ಕೂಡಲಾರಂಭಿಸಿತು. ಯಾವ ಪ್ರತಿಫಲವೂ ಇಲ್ಲದೆ ನಕಲು ಮಾಡುವುದರಲ್ಲಿ, ಸಹಿ ಹಾಕಿಸುವುದರಲ್ಲಿ ಅನೇಕ ಸ್ವಯಂಸೇವಕರು ಸಹಾಯ ಮಾಡಲು ಮುಂದೆ ಬಂದರು. ಇನ್ನು ಕೆಲವರು ಕೆಲಸಮಾಡಿ ಹಣವನ್ನೂ ಕೊಡುತ್ತಿದ್ದರು. ವಾಯಿದೆ ವಿಮುಕ್ತ ಕೆಲಸಗಾರರ ಸಂತತಿಯವರು ಬಹು ಸಂತೋಷದಿಂದ ನಮ್ಮ ಚಳವಳಿಗೆ ಸೇರಿದರು. ಅವರಿಗೆ ಇಂಗ್ಲಿಷ್ ಪರಿಚಯವಿದ್ದುದಲ್ಲದೆ ಒಳ್ಳೆಯ ಬರಹಗಾರರೂ ಆಗಿದ್ದರು. ಹಗಲು ರಾತ್ರಿ ಎನ್ನದೆ ನಕಲು ಬರೆಯುವುದು ಮುಂತಾದ ಕೆಲಸಗಳನ್ನು ಗೊಣಗುಟ್ಟದೆ ಮಾಡುತ್ತಿದ್ದರು. ಒಂದು ತಿಂಗಳೊಳಗಾಗಿ ಹತ್ತುಸಾವಿರ ಜನರು ಸಹಿ ಮಾಡಿದ ಅರ್ಜಿಯನ್ನು ಲಾರ್ಡ್ ರಿಪನ್‌ಗೆ ಕಳುಹಿಸಿದೆವು. ನಾನು ಮಾಡಬೇಕೆಂದಿದ್ದ ತಾತ್ಕಾಲಿಕ ಕೆಲಸ ಮುಗಿಯಿತು.

ಇಂಡಿಯಕ್ಕೆ ಹೋಗಿಬರಲು ಅಪ್ಪಣೆ ಕೇಳಿದೆ. ಚಳವಳಿಯಿಂದ ಭಾರತೀಯರಲ್ಲಿ ಉಂಟಾದ ಉತ್ಸಾಹದಿಂದ ನನ್ನನ್ನು ಕಳುಹಿಸಲು ಅವರಿಗೆ ಇಷ್ಟಬರಲಿಲ್ಲ. "ನಮ್ಮ ವಿನಾಶಕ್ಕೆ ಇದೇ ಮೊದಲನೆಯ ಹೆಜ್ಜೆ

ಎಂದು ನೀನೇ ತಿಳಿಸಿದ್ದೀಯೆ. ನಮ್ಮ ಅರ್ಜಿಗೆ ವಲಸೆ ರಾಷ್ಟ್ರಗಳ ಮಂತ್ರಿ ಅನುಕೂಲವಾದ ಉತ್ತರ ಕೊಡುತ್ತಾನೆಂದು ಹೇಗೆ ಗೊತ್ತು. ನಮ್ಮ ಉತ್ಸಾಹ ಎಷ್ಟಿದೆ ಎಂಬುದು ನಿನಗೆ ಗೊತ್ತಿದೆ. ನೀನು ಹೇಳಿದಂತೆ ನಡೆಯಲು ಸಿದ್ಧರಿದ್ದೇವೆ. ಬೇಕಾದಷ್ಟು ಹಣವಿದೆ. ಸರಿಯಾದ ಮಾರ್ಗದರ್ಶಕನಿಲ್ಲದೆ ಮಾಡಿದ ಕೆಲಸವೆಲ್ಲ ವ್ಯರ್ಥವಾಗುತ್ತದೆ. ಆದ್ದರಿಂದ ನೀನು ಇಲ್ಲಿಯೇ ಇರಬೇಕಾದ್ದು ನಿನ್ನ ಕರ್ತವ್ಯ" ಎಂದರು. ಭಾರತೀಯರ ಹಿತರಕ್ಷಣೆಗೆ ಒಂದು ಶಾಶ್ವತ ಸಂಸ್ಥೆ ಇರಬೇಕಾದ್ದು ಅವಶ್ಯವೆಂದು ನನಗೂ ತೋರಿತು. ಆದರೆ ನಾನು ವಾಸಿಸುವುದು ಎಲ್ಲಿ? ಜೀವನೋಪಾಯಕ್ಕೇನು? ಕಾಯಂ ಆಗಿ ತಿಂಗಳು ತಿಂಗಳು ಸಂಬಳವನ್ನು ಕೊಡುವುದಾಗಿ ಹೇಳಿದರು; ನಾನು ಅದಕ್ಕೆ ಒಪ್ಪಲಿಲ್ಲ. ಸಾರ್ವಜನಿಕ ಕೆಲಸಮಾಡುವವನಿಗೆ ಭಾರಿ ಸಂಬಳ ಬರದೆ ಇರಬಹುದು. ಅಲ್ಲದೆ ಸಾರ್ವಜನಿಕ ಕಾರ್ಯದಲ್ಲಿ ನಾನಿನ್ನೂ ಹೊಸಬನಾಗಿದ್ದೆ. ಆಗಿನ ನನ್ನ ಮನೋಭಾವನೆಯಲ್ಲಿ ನಾನೂ ಬ್ಯಾರಿಸ್ಟರ್‌ಗಳಂತೆ ಜೀವನ ನಡಸಿ ನಮ್ಮ ಜನರ ಗೌರವ ಸಂಪಾದಿಸಬೇಕಾಗಿತ್ತು. ಅದಕ್ಕೆ ಹೆಚ್ಚು ಹಣ ಬೇಕು. ಸಾರ್ವಜನಿಕರಿಂದ ಚಂದಾ ಕೂಡಿಸಿದ ಹಣದಲ್ಲಿ ನನ್ನ ಜೀವನಕ್ಕೆ ಹಣ ತೆಗೆದುಕೊಳ್ಳುವುದು ಸರಿಕಾಣಲಿಲ್ಲ; ಅಲ್ಲದೆ ನನ್ನ ಸ್ವಾವಲಂಬನ ಶಕ್ತಿಯೂ ಹೋಗುವುದು. ಈ ಎಲ್ಲ ಕಾರಣಗಳಿಂದ ನನ್ನ ಸಾರ್ವಜನಿಕ ಕೆಲಸಗಳಿಗಾಗಿ ಯಾವ ಸಂಭಾವನೆಯನ್ನೂ ತೆಗೆದುಕೊಳ್ಳಲಾಗದೆಂದು ತೀರ್ಮಾನಿಸಿದೆ. ಆದರೆ ಅಲ್ಲಿನ ಮುಖ್ಯ ವರ್ತಕರು ತಮ್ಮ ವಿವಾದಗಳನ್ನು ನನಗೆ ಕೊಡುವುದಾಗಿ ವಾಗ್ದಾನಮಾಡಿ, ಅದಕ್ಕಾಗಿ ಸ್ವಲ್ಪ ಮುಂಗಡ ಹಣ ಕೊಟ್ಟರೆ ಅಲ್ಲಿಯೇ ಇರುವುದಾಗಿ ಒಪ್ಪಿದೆ. ಮುಂಗಡ ಒಂದು ವರ್ಷಕ್ಕಾದರೆ ಸಾಕೆಂದು ತಿಳಿಸಿದೆ. ಒಂದು ವರ್ಷದ ಅನುಭವದಲ್ಲಿ ಸಮರ್ಪಕವಾಗಿ ಕೆಲಸ ನಡೆದರೆ ಮುಂದೆಯೂ ಉಭಯತ್ರರ ಒಪ್ಪಿಗೆಯಿಂದ ನಮ್ಮ ವೃತ್ತಿ ಸಂಬಂಧವನ್ನು ಮುಂದುವರಿಸಬಹುದಾಗಿ ತಿಳಿಸಿದೆ. ಎಲ್ಲರೂ ಸಂತೋಷದಿಂದ ಈ ಸಲಹೆಗೆ ಒಪ್ಪಿದರು.

ನೇಟಾಲ್ ಸುಪ್ರೀಮ್ ಕೋರ್ಟಿನ ನ್ಯಾಯವಾದಿಯಾಗಿರಲು ಅಪ್ಪಣೆ ಕೇಳಿದೆ. ನೇಟಾಲ್ ನ್ಯಾಯವಾದಿ ಸಂಘದವರು ನಾನು ಬೇರೆ

ವರ್ಣದವನೆಂಬ ಕಾರಣ ಮಾತ್ರದಿಂದಲೆ ಕಾನೂನು ಪ್ರಕಾರ ನ್ಯಾಯ ವಾದಿಯಾಗಲು ಅವಕಾಶವಿಲ್ಲವೆಂದು ನನ್ನ ಅರ್ಜಿಯನ್ನು ಪ್ರತಿಭಟಿಸಿದರು. ಪ್ರಸಿದ್ಧ ನ್ಯಾಯವಾದಿಗಳೂ, ಅನಂತರ ಅಡ್ವೊಕೇಟ್ ಜನರಲ್ ಮತ್ತು ನೇಟಾಲಿನ ಮುಖ್ಯ ಮಂತ್ರಿಗಳೂ ಆದ ದಿವಂಗತ ಎಸ್ಕಾಮ್‌ರವರು ನನ್ನ ಪರ ನ್ಯಾಯವಾದಿಗಳು. ನ್ಯಾಯವಾದಿಗಳಲ್ಲಿ ಪ್ರಮುಖರಾದವರು ರುಸುಂ ಇಲ್ಲದೆ ಅಂತಹ ಅರ್ಜಿಗಳನ್ನು ವಾದಿಸಬೇಕಾದ್ದು ಅಲ್ಲಿನ ವಾಡಿಕೆಯಾಗಿತ್ತು; ಅದರಂತೆ ಎಸ್ಕಾಮರು ನನ್ನ ಅರ್ಜಿಯನ್ನು ವಾದಿಸಿದರು. ನನ್ನ ಕಕ್ಷಿಗಾರರಿಗೆ ಅವರು ಪ್ರಧಾನ ನ್ಯಾಯ ಸಲಹೆ ಗಾರರೂ ಆಗಿದ್ದರು. ಸುಪ್ರೀಮ್ ಕೋರ್ಟಿನವರು ನ್ಯಾಯ ಸಂಘದ ಆಕ್ಷೇಪಣೆಯನ್ನು ತಳ್ಳಿಹಾಕಿ ನನ್ನ ಅರ್ಜಿಯನ್ನು ಅಂಗೀಕರಿಸಿದರು. ನ್ಯಾಯವಾದಿ ಸಂಘದ ನಡತೆಯಿಂದ ಅನಪೇಕ್ಷಿತವಾಗಿ ನಾನು ಪ್ರಸಿದ್ಧಿಗೆ ಬಂದೆ. ದಕ್ಷಿಣ ಆಫ್ರಿಕದ ವೃತ್ತಪತ್ರಿಕೆಗಳು ನ್ಯಾಯವಾದಿ ಸಂಘದ ಅಧಿಕಾರಿಗಳನ್ನು ಅಪಹಾಸ್ಯಮಾಡಿ ಕೆಲವರು ನನಗೆ ಅಭಿನಂದನೆ ಸಹ ಕಳುಹಿಸಿದರು.

ಹಂಗಾಮಿಯಾಗಿ ನಿಯಮಿಸಿದ ಸಮಿತಿಯನ್ನು ಸ್ಥಿರಗೊಳಿಸ ಲಾಯಿತು. ಭಾರತದ ರಾಷ್ಟ್ರ ಮಹಾಸಭೆಯ ವಿಚಾರವಾಗಿ ಓದಿದ್ದೆನೇ ಹೊರತು ಅದರ ವಾರ್ಷಿಕಾಧಿವೇಶನಕ್ಕೆ ನಾನು ಎಂದೂ ಹೋಗಿರಲಿಲ್ಲ. ಭಾರತದ ವೃದ್ಧಪಿತಾಮಹರಾದ ದಾದಾಭಾಯಿಯವರನ್ನು ನೋಡಿದ್ದೆ. ಅವರನ್ನು ಕಂಡರೆ ನನಗೆ ಬಹಳ ಗೌರವ. ಆದ್ದರಿಂದ ಕಾಂಗ್ರೆಸ್ ಎಂದರೆ ನನಗೆ ಬಹಳ ಭಕ್ತಿ; ಆ ಹೆಸರನ್ನು ಜನಪ್ರಿಯವಾಗುವಂತೆ ಮಾಡಬೇಕೆಂದು ನನ್ನ ಆಸೆ. ನನಗೆ ಅನುಭವವಿಲ್ಲದೆ ಇದ್ದರೂ ಬೇರೆ ಹೆಸರನ್ನು ಹುಡುಕಲು ಪ್ರಯತ್ನಿಸಲಿಲ್ಲ. ಎಲ್ಲಿ ತಪ್ಪುಮಾಡುತ್ತೇನೆಯೊ ಎಂಬ ಭಯ ಬೇರೆ. ಆದ್ದರಿಂದ ಅಲ್ಲಿನ ಭಾರತೀಯರಿಗೆ ತಮ್ಮ ಸಂಸ್ಥೆ ಯನ್ನು ನೇಟಾಲ್ ಇಂಡಿಯನ್ ಕಾಂಗ್ರೆಸ್ ಎಂದು ನಾಮಕರಣ ಮಾಡ ಬೇಕೆಂದು ಸಲಹೆಕೊಟ್ಟೆ. ಭಾರತ ರಾಷ್ಟ್ರ ಮಹಾಸಭೆಯ ವಿಷಯ ನನಗೆ ತಿಳಿದಿದ್ದ ಅಲ್ಪಸ್ವಲ್ಪವನ್ನು ಅವರಿಗೂ ತಿಳಿಸಿದೆ. ಅಂತೂ ೧೮೯೪ನೆಯ ಮೇ ತಿಂಗಳಲ್ಲಿ ನೇಟಾಲ್ ಇಂಡಿಯನ್ ಕಾಂಗ್ರೆಸ್

ಪ್ರಾರಂಭವಾಯಿತು. ಭಾರತ ರಾಷ್ಟ್ರ ಮಹಾಸಭೆಗೂ ನೇಟಾಲ್ ಇಂಡಿಯನ್ ಕಾಂಗ್ರೆಸ್‌ಗೂ ಒಂದು ವ್ಯತ್ಯಾಸವಿತ್ತು. ನೇಟಾಲ್ ಇಂಡಿಯನ್ ಕಾಂಗ್ರೆಸ್ಸು ವರ್ಷವೆಲ್ಲ ಕೆಲಸಮಾಡುವ ಸಂಸ್ಥೆ. ಮತ್ತು ಸದಸ್ಯನಾಗಲು ವರ್ಷಕ್ಕೆ ಮೂರು ಪೌಂಡುಗಳ ಚಂದಾ ಹಣವನ್ನು ಕೊಟ್ಟವರಿಗೆ ಮಾತ್ರ ಅವಕಾಶವಿತ್ತು. ಅದಕ್ಕೂ ಹೆಚ್ಚಿನ ಹಣವನ್ನು ಕೃತಜ್ಞತೆಯಿಂದ ಸ್ವೀಕರಿಸುತ್ತಿದ್ದೆವು. ವರ್ಷಕ್ಕೆ ೨೦ ಪೌಂಡು ಚಂದಾ ಕೊಡುವವರು ೬–೭ ಜನರಿದ್ದರು; ೧೨ ಪೌಂಡುಗಳನ್ನು ಕೊಡುವವರು ಅನೇಕರಿದ್ದರು. ಒಂದೇ ತಿಂಗಳಲ್ಲಿ ೩೦೦ ಜನ ಸದಸ್ಯರನ್ನು ಸೇರಿಸಲಾಯಿತು. ಹಿಂದುಗಳು, ಮುಸಲ್ಮಾನರು, ಪಾರ್ಸಿಗಳು, ಕ್ರಿಶ್ಚಿಯನರು, ಎಲ್ಲರೂ ಸೇರಿದರು. ನೇಟಾಲಿನ ಎಲ್ಲ ಭಾರತೀಯ ಪ್ರಾಂತಗಳಿಂದಲೂ ಪ್ರತಿನಿಧಿಗಳು ದೊರೆತರು. ಮೊದಲನೆಯ ವರ್ಷ ಬಹಳ ಚುರುಕಿನಿಂದ ಕೆಲಸ ನಡೆಯಿತು. ಅನುಕೂಲಸ್ಥ ವರ್ತಕರು ತಮ್ಮ ಸ್ವಂತ ವಾಹನಗಳಲ್ಲಿಯೇ ದೂರದ ಹಳ್ಳಿಗಳಿಗೆ ಹೋಗಿ ಹೊಸ ಸದಸ್ಯರನ್ನು ಸೇರಿಸಿ ನಿಧಿ ಸಂಗ್ರಹದ ಕೆಲಸ ಮಾಡಿದರು. ಎಲ್ಲರೂ ಕೇಳಿದ ಕೂಡಲೆ ಹಣ ಕೊಡುತ್ತಿರಲಿಲ್ಲ. ಕೆಲವರಿಗೆ ಸ್ವಲ್ಪ ಒತ್ತಾಯ ಬೇಕಾಗಿತ್ತು. ಈ ಒತ್ತಾಯವೇ ಒಂದು ರಾಜಕೀಯ ಶಿಕ್ಷಣವಾಗಿ ಜನರಿಗೆ ತಮ್ಮ ಸ್ಥಿತಿಯ ಅರಿವುಂಟಾಯಿತು. ತಿಂಗಳಿಗೊಮ್ಮೆಯಾದರೂ ಕಾಂಗ್ರೆಸ್ ಸಭೆ ಸೇರಿಸಿ ಲೆಕ್ಕಪತ್ರಗಳ ವಿವರಗಳನ್ನು ಪರಿಶೀಲಿಸುತ್ತಿದ್ದೆವು. ಪ್ರಸಕ್ತ ವಿಷಯಗಳನ್ನು ವಿವರಿಸಿ ವರದಿ ಪುಸ್ತಕದಲ್ಲಿ ಬರೆದಿಡುತ್ತಿದ್ದೆವು. ಸದಸ್ಯರು ಪ್ರಶ್ನೆಗಳನ್ನು ಕೇಳಿ ಹೊಸಹೊಸ ವಿಷಯಗಳನ್ನು ಚರ್ಚಿಸುತ್ತಿದ್ದರು. ಇದರಿಂದ ಎಂದೂ ಮಾತನಾಡದವರು ಧೈರ್ಯದಿಂದ ಮಾತನಾಡುವಂತೆ ಅನುಕೂಲವಾಯಿತು. ಅದೂ ಅಲ್ಲದೆ ಭಾಷಣಗಳು ಅಚ್ಚುಕಟ್ಟಾಗಿರಬೇಕಿತ್ತು. ಇದೆಲ್ಲವೂ ಹೊಸ ಅನುಭವ. ಭಾರತೀಯರಿಗೆ ತೀವ್ರ ಆಸಕ್ತಿ ಹುಟ್ಟಿತು. ಇದೇ ಹೊತ್ತಿಗೆ ಲಾರ್ಡ್ ರಿಪನ್ ಭಾರತೀಯರ ವೋಟಿನ ಹಕ್ಕನ್ನು ಕಸಿದುಕೊಳ್ಳಲು ತಂದಿದ್ದ ಮಸೂದೆಯನ್ನು ತಿರಸ್ಕರಿಸಿದನೆಂಬ ವರ್ತಮಾನ ಬಂದಿತು; ಇದರಿಂದ ಅವರ ಉತ್ಸಾಹವೂ ಆತ್ಮವಿಶ್ವಾಸವೂ ಇಮ್ಮಡಿಯಾದುವು.

ಹೊರಗಿನ ಚಳವಳಿಯ ಜೊತೆಯಲ್ಲಿಯೇ ಒಳಗಿನ ಸುಧಾರಣೆಯ ಪ್ರಶ್ನೆಯ ಕಡೆಗೂ ಗಮನಕೊಡಲಾಯಿತು. ದಕ್ಷಿಣ ಆಫ್ರಿಕದ ಯೂರೋಪಿಯನರೆಲ್ಲರೂ ಭಾರತೀಯರ ಜೀವನ ಕ್ರಮವನ್ನು ಹೀಯಾಳಿಸುತ್ತಿದ್ದರು. ಭಾರತೀಯರು ಅಶುಚಿಯಾದವರೆಂದೂ ಕಾಸುಗಳ್ಳರೆಂದೂ ಅವರ ವಾದ. ಎಲ್ಲಿ ವ್ಯಾಪಾರಮಾಡುತ್ತಾರೆಯೊ ಅಲ್ಲಿಯೇ ಅವರ ವಾಸ. ಮನೆಗಳು ಬರಿಯ ಗುಡಿಸಿಲುಗಳು. ನಿರ್ಮಲರಾದ, ದಾನಶೂರರಾದ ಯೂರೋಪಿಯನರು, ತಮ್ಮ ಹೆಚ್ಚುವೆಚ್ಚಗಳನ್ನಿಟುಕೊಂಡು ಕೊಳಕರೂ ಕಿಲುಬರೂ ಆದ ಭಾರತೀಯರೊಂದಿಗೆ ವ್ಯಾಪಾರದಲ್ಲಿ ಪೈಪೋಟಿ ನಡಸುವುದು ಹೇಗೆ? ಕಾಂಗ್ರೆಸ್ ಸಭೆಗಳಲ್ಲಿ ಗೃಹನೈಮಲ್ಯ, ದೇಹಾರೋಗ್ಯ, ವ್ಯಾಪಾರಕ್ಕೂ ವಾಸಕ್ಕೂ ಪ್ರತ್ಯೇಕ ಸ್ಥಳಗಳ ಆವಶ್ಯಕತೆ, ಅನುಕೂಲಸ್ಥರಾದ ವರ್ತಕರು ತಮ್ಮ ಸಾಮಾಜಿಕ ಅಂತಸ್ಥಿಗೆ ಅನುಗುಣವಾಗಿ ವಾಸಮಾಡಬೇಕಾದ ಅವಶ್ಯಕತೆ ಮುಂತಾದ ವಿಷಯಗಳ ಮೇಲೆ ಉಪನ್ಯಾಸಗಳನ್ನು ಏರ್ಪಡಿಸಿ, ಚರ್ಚೆಮಾಡಿ ಸಲಹೆಗಳನ್ನು ಕೊಡುತ್ತಿದ್ದೆವು. ಸಭೆಯ ನಡವಳಿಕೆಗಳು ಗುಜರಾತಿಯಲ್ಲಿ ನಡೆಯುತ್ತಿದ್ದುವು.

ಈ ರೀತಿಯಾಗಿ, ಭಾರತೀಯರಿಗೆ ಎಷ್ಟು ಅನುಭವ ಮತ್ತು ರಾಜಕೀಯ ಜ್ಞಾನ ಉಂಟಾಯಿತೆಂದು ವಾಚಕರೇ ಊಹಿಸಬಹುದು. ನೇಟಾಲಿನಲ್ಲಿ ಹುಟ್ಟಿ ಇಂಗ್ಲಿಷ್ ಮಾತನ್ನು ಆಡುತ್ತಿದ್ದ ವಾಯಿದೆ ವಿಮುಕ್ತ ಕೆಲಸಗಾರರ ಮಕ್ಕಳಿಗೆ ಕಾಂಗ್ರೆಸ್ಸಿನ ಆಶ್ರಯದಲ್ಲಿ ವಿದ್ಯೆ ಕಲಿಸಲು 'ನೇಟಾಲ್ ಇಂಡಿಯನ್ ವಿದ್ಯಾಪ್ರಚಾರ ಸಂಘ' ಎಂಬ ಸಂಸ್ಥೆಯನ್ನು ಪ್ರಾರಂಭಿಸಿದೆವು. ಆ ಯುವಕರನ್ನು ಒಂದು ಕಡೆ ಸೇರಿಸಿ, ತಮ್ಮ ಮಾತೃಭೂಮಿಯಮೇಲೆ ಪ್ರೇಮ ಹುಟ್ಟುವಂತೆ ಪರಿಚಯಮಾಡಿಕೊಡುವುದೇ ಸಂಸ್ಥೆಯ ಮುಖ್ಯ ಉದ್ದೇಶವಾಗಿತ್ತು. ಸ್ವತಂತ್ರ ಭಾರತೀಯರು ಇವರನ್ನು ತಮ್ಮ ಬಾಂಧವರೆಂದೇ ಕಾಣುತ್ತಾರೆಂದು ತೋರಿಸುವುದೂ, ಸ್ವತಂತ್ರ ಭಾರತೀಯರು ಇವರ ಮೇಲೆ ಗೌರವವಿಡುವಂತೆ ಅವರ ಮನೋಭಿಪ್ರಾಯವನ್ನು ಪರಿವರ್ತಿಸುವುದೂ ಈ ಸಂಸ್ಥೆಯ ಉದ್ದೇಶವಾಗಿತ್ತು. ಕಾಂಗ್ರೆಸ್ಸಿನ ಖರ್ಚು ಕಳೆದು ಹಣ ಮಿಗುತ್ತಿತ್ತು. ಈ

ಹಣದಿಂದ ಭೂಮಿಯನ್ನು ಕೊಳ್ಳಲಾಯಿತು. ಈಗಲೂ ಆ ಭೂ ಆಸ್ತಿ ಯಿಂದ ಉತ್ಪತ್ತಿ ಬರುತ್ತಲಿದೆ.

ಸತ್ಯಾಗ್ರಹ ತನ್ನಷ್ಟಕ್ಕೇ ಹೇಗೆ ರೂಪುಗೊಂಡಿತು, ಭಾರತೀಯರು ಸ್ವಾಭಾವಿಕವಾಗಿ ಸತ್ಯಾಗ್ರಹಕ್ಕೆ ಹೇಗೆ ಸಿದ್ಧತೆ ಪಡೆದರು ಎಂಬುದನ್ನು ಅರ್ಥ ಮಾಡಿಕೊಳ್ಳುವುದು ಅವಶ್ಯವಾದ್ದರಿಂದ ಈ ವಿವರಗಳನ್ನು ಇಲ್ಲಿ ತಿಳಿಸಿದ್ದೇನೆ. ಕಾಂಗ್ರೆಸ್ಸಿಗೆ ಒದಗಿದ ಕಷ್ಟಗಳು, ಸರಕಾರದ ಅಧಿಕಾರಿಗಳು ಕೊಟ್ಟ ತೊಂದರೆ, ಈ ತೊಂದರೆಗಳಿಂದ ಪಾರಾದ ಬಗೆ–ಇವುಗಳನ್ನೆಲ್ಲ ನಾನು ಬಿಟ್ಟುಬಿಡಬೇಕಾಗಿದೆ. ಒಂದು ವಿಷಯ ಮಾತ್ರ ತಿಳಿಸಬೇಕಾದ್ದು ಆವಶ್ಯಕ. ಉತ್ಪ್ರೇಕ್ಷೆ ಮಾಡುವ ಅಭ್ಯಾಸವನ್ನು ಮಾತ್ರ ಭಾರತೀಯರಿಂದ ತಪ್ಪಿಸಲು ಪ್ರಯತ್ನ ಮಾಡಲಾಯಿತು. ತಮ್ಮ ತಪ್ಪುಗಳನ್ನು ತಾವೇ ತಿದ್ದಿಕೊಳ್ಳಲು ಪದೇ ಪದೇ ಎಚ್ಚರಿಸುತ್ತಿದ್ದೆವು. ಯೂರೋಪಿಯನರ ವಾದಸರಣಿಯಲ್ಲಿದ್ದ ನಿಜಾಂಶಗಳನ್ನೆಲ್ಲ ಒಪ್ಪುತ್ತಿದ್ದೆವು. ಆತ್ಮಗೌರವಕ್ಕೆ ಚ್ಯುತಿಯಿಲ್ಲದೆ ಸರಿಸಮಾನರಾಗಿ ಸಹಕರಿಸಿ ಕೆಲಸ ಮಾಡಬಹುದಾದ ಎಲ್ಲ ಸಮಯಗಳಲ್ಲಿ ಯೂರೋಪಿಯನರೊಂದಿಗೆ ಸಹಕರಿಸುತ್ತಿದ್ದೆವು. ವರ್ತಮಾನ ಪತ್ರಿಕೆಗಳು ಮುದ್ರಣ ಮಾಡುವಷ್ಟು ವಿಷಯವನ್ನು ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದೆವು. ಭಾರತೀಯರ ಮೇಲೆ ಅನ್ಯಾಯವಾದ ಲೇಖನಗಳು ಬಂದರೆ ಒಡನೆ ಅವುಗಳನ್ನು ಖಂಡಿಸಿ ಲೇಖನಗಳನ್ನು ಬರೆಯುತ್ತಿದ್ದೆವು.

ನೇಟಾಲ್ ಇಂಡಿಯನ್ ಕಾಂಗ್ರೆಸ್ಸಿನಂತೆ ಟ್ರಾನ್ಸ್‌ವಾಲಿನಲ್ಲೂ ಒಂದು ಸ್ವತಂತ್ರ ಸಂಸ್ಥೆ ಇತ್ತು. ಈ ಸಂಸ್ಥೆಗಳ ರಚನೆಯಲ್ಲಿ ಸ್ವಲ್ಪ ವ್ಯತ್ಯಾಸಗಳಿದ್ದುವು ; ಅವುಗಳ ಚರ್ಚೆ ಅನಾವಶ್ಯಕ. ಕೇಪ್ ಟೌನಿನಲ್ಲೂ ನೇಟಾಲ್ ಮತ್ತು ಟ್ರಾನ್ಸ್‌ವಾಲ್ ಸಂಸ್ಥೆಗಳಿಂದ ಬೇರೆಯಾಗಿ ಇನ್ನೂ ಒಂದು ಸಂಸ್ಥೆಯಾಯಿತು. ಆದರೆ ಈ ಮೂರು ಸಂಸ್ಥೆಗಳ ಕಾರ್ಯಕ್ರಮವೂ ಒಂದೇ ಆಗಿತ್ತು. ೧೮೯೫ನೆಯ ಇಸವಿ ಮಧ್ಯದ ಹೊತ್ತಿಗೆ ನೇಟಾಲ್ ಕಾಂಗ್ರೆಸಿಗೆ ಒಂದು ವರ್ಷ ತುಂಬಿತು. ನನ್ನ ಕಕ್ಷಿಗಾರರಿಗೆ ನನ್ನ ಕೆಲಸದಿಂದ ತೃಪ್ತಿಯಾಯಿತು. ನೇಟಾಲಿನಿಂದ ನನ್ನ ಪ್ರಯಾಣವೂ ಮುಂದುವರಿಯಿತು. ೧೮೯೬ರಲ್ಲಿ ಭಾರತೀಯರ ಅಪ್ಪಣೆ ಪಡೆದು ಆರು

ತಿಂಗಳು ಮಾತ್ರ ಭಾರತಕ್ಕೆ ಹಿಂದಿರುಗಿದೆ. ಇಂಡಿಯದಲ್ಲಿ ಇನ್ನೂ ಆರು ತಿಂಗಳು ಮುಗಿದಿರಲಿಲ್ಲ. ಅಷ್ಟರಲ್ಲೆ ಕೂಡಲೆ ಹಿಂದಕ್ಕೆ ಬರಬೇಕೆಂದು ನೇಟಾಲಿನಿಂದ ಕೇಬಲ್ ಬಂದಿತು. ಅದರಂತೆ ಹಿಂದಿರುಗಿದೆ. ೧೮೯೬–೯೭ನೆಯ ವರ್ಷದ ಘಟನೆಗಳಿಗೆ ಪ್ರತ್ಯೇಕ ಅಧ್ಯಾಯವೇ ಆವಶ್ಯಕ.

# ೭. ಸತ್ಯಾಗ್ರಹಕ್ಕೆ ಮುಂಚಿನ ಹೋರಾಟ

## (ಮುಂದುವರಿದುದು)

ಈ ರೀತಿ ನೇಟಾಲ್ ಇಂಡಿಯನ್ ಕಾಂಗ್ರೆಸ್ಸು ಚಿರಸ್ಥಾಯಿಯಾಯಿತು. ನೇಟಾಲಿನಲ್ಲಿ ರಾಜಕೀಯ ಕೆಲಸದಲ್ಲೆ ಎರಡೂವರೆ ವರ್ಷ ಕಾಲಕಳೆದೆ. ನಾನು ದಕ್ಷಿಣ ಆಫ್ರಿಕದಲ್ಲಿಯೇ ಮುಂದೆಯೂ ಇರಬೇಕಾದರೆ ನನ್ನ ಸಂಸಾರವನ್ನು ಕರೆತರುವುದು ಅವಶ್ಯವೆನಿಸಿತು. ಹಾಗೆಯೆ ಇಂಡಿಯ ದೇಶದಲ್ಲಿ ಸ್ವಲ್ಪ ಕಾಲವಿದ್ದು ಅಲ್ಲಿ ನಮ್ಮ ಜನರಿಗೆ ನೇಟಾಲ್ ಮತ್ತು ದಕ್ಷಿಣ ಆಫ್ರಿಕದ ಇತರ ಭಾಗಗಳಲ್ಲಿನ ಭಾರತೀಯರ ಸ್ಥಿತಿಗತಿಗಳ ಪರಿಚಯ ಮಾಡಿಕೊಡಬೇಕೆಂದು ತೀರ್ಮಾನಿಸಿದೆ. ಕಾಂಗ್ರೆಸ್ಸು ನನಗೆ ಆರು ತಿಂಗಳ ಅವಧಿ ಕೊಟ್ಟು, ನನ್ನ ಸ್ಥಾನದಲ್ಲಿ ನೇಟಾಲಿನ ಪ್ರಸಿದ್ಧ ವ್ಯಾಪಾರಿಯಾದ ದಿವಂಗತ ಶ್ರೀ ಆದಂಜಿ ಮಿಯಾನ್ ಖಾನ್ ಎಂಬಾತ ನನ್ನ ಕಾರ್ಯದರ್ಶಿಯಾಗಿ ನೇಮಕ ಮಾಡಿತು. ಆತನು ಬಹಳ ದಕ್ಷತೆಯಿಂದ ಕಾರ್ಯ ನಿರ್ವಹಿಸಿದನು. ಅಭ್ಯಾಸದಿಂದಲೂ ಬಳಕೆಯಿಂದಲೂ ಒಳ್ಳೆಯ ಇಂಗ್ಲಿಷ್ ಜ್ಞಾನವಿತ್ತು. ಸಾಧಾರಣಮಟ್ಟಿಗೆ ಗುಜರಾತಿಯನ್ನು ಅಭ್ಯಾಸಮಾಡಿದ್ದನು. ಜುಲುಗಳೊಂದಿಗೆ ಒಳ್ಳೆಯ ವ್ಯಾಪಾರ ನಡಸುತ್ತಿದ್ದುದರಿಂದ ಜುಲು ಭಾಷೆ ಚೆನ್ನಾಗಿ ಬರುತ್ತಿದ್ದಿತಲ್ಲದೆ ಜುಲುಗಳ ನಡೆನುಡಿಗಳ ಪರಿಚಯವಿತ್ತು. ಆತನು ಒಳ್ಳೆಯ ಶಾಂತ ಸ್ವಭಾವದ ಸ್ನೇಹಪರ ಮನುಷ್ಯ. ಹೆಚ್ಚು ಮಾತನಾಡುವ ಸ್ವಭಾವದವನಲ್ಲ. ಜವಾಬ್ದಾರಿಯ ಅಧಿಕಾರಸ್ಥಾನಗಳನ್ನು ಪಡೆಯಲು ಇಂಗ್ಲಿಷ್ ಪರಿಚಯ ಅಥವಾ ಪಾಂಡಿತ್ಯ ಮಾತ್ರ ಸಾಲದು; ಅದಕ್ಕಿಂತಲೂ ಮಿಗಿಲಾಗಿ ಸತ್ಯನಿಷ್ಠೆ, ತಾಳ್ಮೆ, ಸಹಿಷ್ಣುತೆ, ದೃಢಮನಸ್ಸು, ಮನಸ್ಥೈರ್ಯ, ದಿಟ್ಟತನ ಮತ್ತು ವ್ಯವಹಾರ ಜ್ಞಾನಗಳು ಇರಬೇಕಾದ್ದು

ಮುಖ್ಯವೆಂದು ತೋರಿಸಲು ಈ ಎಲ್ಲ ವಿವರವನ್ನು ಕೊಟ್ಟಿದ್ದೇನೆ. ಈ ಸದ್ಗುಣಗಳು ಯಾರಲ್ಲಿಲ್ಲವೋ ಆತನಲ್ಲಿ ಬೇಕಾದಷ್ಟು ಪಾಂಡಿತ್ಯವಿದ್ದರೂ ಸಾರ್ವಜನಿಕ ಕೆಲಸಕ್ಕೆ ಆತನು ನಿಷ್ಪ್ರಯೋಜಕ.

೧೮೯೬ ರ ಮಧ್ಯಭಾಗದಲ್ಲಿ ನಾನು ಹಿಂದೂಸ್ಥಾನಕ್ಕೆ ಹಿಂದಿರುಗಿದೆ. ನೇಟಾಲಿನಿಂದ ಬೊಂಬಾಯಿಗಿಂತ ಕಲ್ಕತ್ತಕ್ಕೆ ಸುಲಭವಾಗಿ ಹಡಗು ದೊರೆಯುತ್ತಿದ್ದ ಕಾರಣ ನಾನು ಕಲ್ಕತ್ತಕ್ಕೆ ಹೊರಟ ಹಡಗನ್ನೇ ಹತ್ತಿದೆ. ವಾಯಿದೆ ಕೆಲಸಗಾರರು ಬರುತ್ತಿದ್ದುದು ಕಲ್ಕತ್ತ ಮತ್ತು ಮದ್ರಾಸಿನಿಂದಲೇ ಹೆಚ್ಚು. ಕಲ್ಕತ್ತದಿಂದ ಬೊಂಬಾಯಿಗೆ ಹೊರಟಾಗ ದಾರಿಯಲ್ಲಿ ರೈಲು ತಪ್ಪಿ ಅಲಹಾಬಾದಿನಲ್ಲಿ ಒಂದು ದಿವಸ ನಿಲ್ಲಬೇಕಾಯಿತು. ಅಲ್ಲಿಯೇ ನನ್ನ ಕೆಲಸ ಪ್ರಾರಂಭವಾದದ್ದು. 'ಪಯೋನೀರ್' ಪತ್ರಿಕೆಯ ಚೆಸ್ನಿ ಯವರನ್ನು ನೋಡಿದೆ. ನನ್ನೊಂದಿಗೆ ಬಹಳ ಗೌರವದಿಂದ ಮಾತನಾಡಿದರೂ ತಮ್ಮ ಸಹಾನುಭೂತಿ ಯೂರೋಪಿಯನ್ ವಲಸೆಗಾರರ ಕಡೆ ಇರುವುದೆಂದು ಸ್ಪಷ್ಟವಾಗಿ ಹೇಳಿದರು. ಆದರೂ ನಾನು ಏನಾದರೂ ಬರೆದರೆ ಅದನ್ನು ಓದಿ ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುವುದಾಗಿ ತಿಳಿಸಿದರು. ನನಗೆ ಅಷ್ಟೇ ಸಾಕಾಗಿತ್ತು.

ಹಿಂದೂಸ್ಥಾನದಲ್ಲಿರುವಾಗಲೇ 'ದಕ್ಷಿಣ ಆಫ್ರಿಕದಲ್ಲಿನ ಭಾರತೀಯರ ಸ್ಥಿತಿ' ಎಂದು ಒಂದು ಸಣ್ಣ ಕೈಪಿಡಿಯನ್ನು ಬರೆದೆ. ಎಲ್ಲ ಪತ್ರಿಕೆಗಳವರೂ ಅದರಲ್ಲಿ ಕುತೂಹಲ ತೋರಿದರು; ಎರಡು ಸಲ ಅದನ್ನು ಮುದ್ರಿಸಬೇಕಾಯಿತು. ಹಿಂದೂಸ್ಥಾನದ ಬೇರೆಬೇರೆ ಪಟ್ಟಣಗಳಲ್ಲಿ ೫,೦೦೦ ಪ್ರತಿಗಳನ್ನು ಹಂಚಲಾಯಿತು. ಇದೇ ಸಮಯದಲ್ಲಿಯೇ ನಾನು ಸರ್ ಫಿರೋಸ್ ಷಾ ಮೆಹತಾ, ನ್ಯಾಯಮೂರ್ತಿಗಳಾದ ಬದ್ರುದೀನ್ ತೇಬ್ಜಿ, ಮಹದೇವ ಗೋವಿಂದ ರಾನಡೆ ಮುಂತಾದವರನ್ನು ಬೊಂಬಾಯಿಯಲ್ಲಿಯೂ, ಲೋಕಮಾನ್ಯ ತಿಲಕರು ಮತ್ತು ಅವರ ಅನುಯಾಯಿಗಳು, ಪ್ರೊಫೆಸರ್ ಭಂಡಾರ್‌ಕರ್, ಗೋಪಾಲಕೃಷ್ಣ ಗೋಖಲೆ ಮತ್ತು ಅವರ ಅನುಯಾಯಿಗಳನ್ನು ಪುಣೆಯಲ್ಲಿಯೂ ನೋಡಿದ್ದೆ. ಬೊಂಬಾಯಿ, ಪುಣೆ, ಮದ್ರಾಸ್ ಪಟ್ಟಣಗಳಲ್ಲಿ ಭಾಷಣಗಳನ್ನು ಮಾಡಿದೆ. ಇವುಗಳನ್ನೆಲ್ಲ ನಾನು ವಿಶದೀಕರಿಸುವುದಿಲ್ಲ.

ಆದರೆ ಪುಣೆಯಲ್ಲಿ ನಡೆದ ಒಂದು ಪವಿತ್ರ ಸನ್ನಿವೇಶವನ್ನು ಮಾತ್ರ –ಈ ಕಥೆಗೆ ಅಷ್ಟು ಮುಖ್ಯವಲ್ಲದೆ ಹೋದರೂ–ಹೇಳಬೇಕೆನಿಸುತ್ತದೆ. 'ಸಾರ್ವಜನಿಕ ಸಭೆ'ಯ ಆಡಳಿತ ಸೂತ್ರಗಳು ತಿಲಕರ ಕೈಲ್ಲಿದ್ದುವು; 'ಡೆಕ್ಕನ್ ಸಭೆ'ಯ ಆಡಳಿತ ಸೂತ್ರಗಳು ಗೋಖಲೆಯವರ ಕೈಲ್ಲಿದ್ದುವು. ಮೊದಲು ನಾನು ತಿಲಕ ಮಹಾರಾಜರನ್ನು ನೋಡಿದೆ. ಪುಣೆಯಲ್ಲಿ ಒಂದು ಸಭೆ ಸೇರಿಸಬೇಕೆಂಬ ನನ್ನ ಆಶೆಯನ್ನು ತಿಳಿಸಿದೆ. ಒಡನೆ "ಗೋಪಾಲರಾಯರನ್ನು ನೋಡಿದ್ದೆಯಾ" ಎಂದು ಅವರು ನನ್ನನ್ನು ಕೇಳಿದರು. ಯಾರನ್ನು ಕುರಿತು ಹೇಳುತ್ತಾರೆಂದು ನನಗೆ ಅರ್ಥವಾಗಲಿಲ್ಲ. ಪುನಃ, "ಗೋಖಲೆಯವರ ಪರಿಚಯವಿದೆಯೆ, ಅವರನ್ನು ಕಂಡೆಯ ?" ಎಂದು ಕೇಳಿದರು.

"ನಾನು ಅವರನ್ನು ಇನ್ನೂ ನೋಡಿಲ್ಲ. ಅವರ ಹೆಸರನ್ನು ಕೇಳ ಬಲ್ಲೆ, ಅವರನ್ನೂ ಕಾಣಬೇಕೆಂದಿದ್ದೇನೆ" ಎಂದು ತಿಳಿಸಿದೆ.

ಲೋಕಮಾನ್ಯರು "ಭಾರತದ ರಾಜಕಾರಣ ನಿನಗೆ ಏನೂ ತಿಳಿದಂತೆ ಕಾಣುವುದಿಲ್ಲ" ಎಂದರು.

ನಾನು, "ಇಂಗ್ಲೆಂಡಿನಿಂದ ಬಂದು ಸ್ವಲ್ಪಕಾಲ ಮಾತ್ರ ನಾನು ಭರತಖಂಡದಲ್ಲಿದ್ದೆ. ರಾಜಕೀಯಕ್ಕೆ ನಾನು ಆಗ ಪ್ರವೇಶಿಸಿರಲಿಲ್ಲ. ಅದು ನನ್ನ ಶಕ್ತಿಗೆ ಮೀರಿದ್ದೆಂದು ಭಾವಿಸಿದ್ದೆ" ಎಂದು ತಿಳಿಸಿದೆ.

ಆಗ ಲೋಕಮಾನ್ಯರು "ಹಾಗಾದರೆ ಕೆಲವು ವಿಷಯ ನಿನಗೆ ತಿಳಿಸುತ್ತೇನೆ. ಪುಣೆಯಲ್ಲಿ ಎರಡು ಪಂಗಡಗಳಿವೆ. ಒಂದು ಸಾರ್ವಜನಿಕ ಸಭೆ, ಇನ್ನೊಂದು ಡೆಕ್ಕನ್ ಸಭೆ" ಎಂದು ಹೇಳಿದರು.

"ನನಗೂ ಸ್ವಲ್ಪ ಈ ವಿಷಯ ಗೊತ್ತಿದೆ" ಎಂದು ತಿಳಿಸಿದೆ.

ಲೋಕಮಾನ್ಯರು "ಇಲ್ಲಿ ಒಂದು ಸಭೆ ಸೇರಿಸುವುದು ಸುಲಭ. ಆದರೆ ಎಲ್ಲ ಪಕ್ಷಗಳ ಮುಂದೆಯೂ ನೀನು ವಿಷಯವನ್ನು ಪ್ರತಿಪಾದಿಸ ಬೇಕಾದರೆ ಎಲ್ಲರ ಸಹಾನುಭೂತಿಯನ್ನೂ ಪಡೆಯುವುದು ಒಳ್ಳೆಯದು. ನಿನ್ನ ಸೂಚನೆಯನ್ನೇನೊ ಒಪ್ಪುತ್ತೇನೆ. ಆದರೆ ಸಾರ್ವಜನಿಕ ಸಭಾ ಸದಸ್ಯರು ಅಧ್ಯಕ್ಷರಾದರೆ ಡೆಕ್ಕನ್ ಸಭಾಸದಸ್ಯರಾರೂ ಸಭೆಗೆ ಬರು ವುದಿಲ್ಲ. ಅದರಂತೆಯೇ ಡೆಕ್ಕನ್ ಸಭಾಸದಸ್ಯರು ಅಧ್ಯಕ್ಷರಾದರೆ ಸಾರ್ವ

ಜನಿಕ ಸಭೆಯ ಸದಸ್ಯರಾರೂ ಬರುವುದಿಲ್ಲ. ಆದ್ದರಿಂದ ಯಾವ ಪಕ್ಷಕ್ಕೂ ಸೇರದವರೊಬ್ಬರನ್ನು ಅಧ್ಯಕ್ಷರನ್ನಾಗಿ ನೀನು ಆರಿಸಬೇಕು. ಕೆಲವು ಸಲಹೆಗಳ ಹೊರತಾಗಿ ಬೇರೆ ಯಾವ ಸಹಾಯವನ್ನೂ ನಾನು ಕೊಡಲಾರೆ. ಪ್ರೊಫೆಸರ್ ಭಂಡಾರಕರ್ ನಿನಗೆ ಗೊತ್ತೆ? ಅವರನ್ನು ನೀನು ನೋಡು. ಅವರು ಯಾವ ಪಕ್ಷಕ್ಕೂ ಸೇರದವರೆಂದು ನನ್ನ ಭಾವನೆ. ಅವರು ರಾಜಕೀಯದಲ್ಲಿ ಭಾಗವಹಿಸುವುದಿಲ್ಲ. ಪ್ರಾಯಶಃ ನೀನು ಹೋಗಿ ಕೇಳಿದರೆ ಇಲ್ಲವೆನ್ನಲಾರರು. ಗೋಖಲೆಯವರಲ್ಲೂ ಈ ವಿಷಯ ಪ್ರಸ್ತಾಪಿಸಿ ಅವರ ಅಭಿಪ್ರಾಯವನ್ನು ಕೇಳು. ಪ್ರಾಯಶಃ ಅವರೂ ಅದೇ ಸಲಹೆ ಕೊಡಬಹುದು. ಪ್ರೊಫೆಸರ್ ಭಂಡಾರಕರ್‌ರಂಥ ಮಾನ್ಯರು ಸಭೆಗೆ ಅಧ್ಯಕ್ಷರಾದರೆ, ಸಭೆ ಯಶಸ್ವಿಯಾಗಿ ನಡೆಯಲು ಉಭಯ ಪಕ್ಷದವರೂ ಪ್ರಯತ್ನ ಪಡುತ್ತಾರೆ. ನನ್ನ ಪೂರ್ಣ ಸಹಕಾರದ ಭರವಸೆ ನಾನು ಕೊಡುತ್ತೇನೆ" ಎಂದು ತಿಳಿಸಿದರು.

ನಾನು ಗೋಖಲೆಯವರನ್ನು ಕಂಡೆ. ಅವರನ್ನು ನೋಡಿದೊಡನೆ ಅವರಲ್ಲಿ ಅಚಲವಾದ ಪ್ರೀತಿ ಹುಟ್ಟಿದ ಬಗೆಯನ್ನು ಬೇರೊಂದೆಡೆಯಲ್ಲಿ ವಿವರಿಸಿದ್ದೇನೆ. ಬೇಕಾದವರು 'ಯಂಗ್ ಇಂಡಿಯ' ಅಥವಾ 'ನವಜೀವನ'ದ ಹಾಳೆಗಳನ್ನು ತಿರುವಿಹಾಕಬಹುದು. ಲೋಕಮಾನ್ಯರು ಕೊಟ್ಟ ಸಲಹೆಯನ್ನು ಗೋಖಲೆಯವರು ಮೆಚ್ಚಿದರು. ಅದರಂತೆ ಜ್ಞಾನ ವೃದ್ಧರಾದ ಪ್ರೊಫೆಸರರ ಬಳಿ ಹೋಗಿ ನನ್ನ ಭಕ್ತಿಯ ಕಾಣಿಕೆಯನ್ನು ಸಲ್ಲಿಸಿದೆ. ಅವರು ನೇಟಾಲಿನಲ್ಲಿನ ಭಾರತೀಯರ ಗೋಳಿನ ಕಥೆ ಯನ್ನೆಲ್ಲಾ ಲಾಲಿಸಿ, "ನೋಡು, ಸಾರ್ವಜನಿಕ ಜೀವನದಲ್ಲಿ ನಾನು ಭಾಗವಹಿಸುವುದೇ ಇಲ್ಲ. ಅಲ್ಲದೆ ನನಗೆ ವಯಸ್ಸಾಗುತ್ತಿದೆ. ಆದರೂ ನೀನು ಹೇಳಿರುವ ವಿಷಯ ನನ್ನ ಹೃದಯವನ್ನು ಕಲಕಿದೆ. ಎಲ್ಲ ಪಕ್ಷಗಳ ಸಹಕಾರವನ್ನೂ ಪಡೆಯಬೇಕೆಂಬ ನಿನ್ನ ಉದ್ದೇಶವನ್ನು ನಾನು ಒಪ್ಪುತ್ತೇನೆ. ನೀನಿನ್ನೂ ಹುಡುಗ, ಇಂಡಿಯ ದೇಶದ ರಾಜಕೀಯ ಸ್ಥಿತಿ ನಿನಗೆ ತಿಳಿಯದು. ನಿನ್ನ ಅಪೇಕ್ಷೆಯಂತೆ ನಾನು ಅಧ್ಯಕ್ಷತೆ ವಹಿಸಲು ಒಪ್ಪಿದ್ದೇನೆಂದು ಎರಡು ಕಡೆಯವರಿಗೂ ತಿಳಿಸು. ಸಭೆ ಸೇರುವುದೆಂದು ಅವರಲ್ಲಿ ಯಾರು ಬಂದು ತಿಳಿಸಿದರೂ ನಾನು ಖಂಡಿತ

ಬಂದು ಅಧ್ಯಕ್ಷತೆ ವಹಿಸುತ್ತೇನೆ" ಎಂದು ಹೇಳಿದರು. ಪುಣೆಯಲ್ಲಿ ಭಾರಿ ಸಭೆ ಸೇರಿತು. ಎರಡು ಪಕ್ಷಗಳ ಮುಖಂಡರೂ ಬಂದು ನನ್ನ ಧ್ಯೇಯಕ್ಕೆ ಬೆಂಬಲ ಕೊಟ್ಟು ಮಾತನಾಡಿದರು.

ಅಲ್ಲಿಂದ ಮದ್ರಾಸಿಗೆ ಹೋದೆ. ಆಗ ನ್ಯಾಯವಾದಿಗಳಾಗಿದ್ದ ಸರ್ ಸುಬ್ರಹ್ಮಣ್ಯ ಅಯ್ಯರ್, ಪಿ. ಆನಂದಾಚಾರ್ಲು, ಆಗ 'ಹಿಂದೂ' ಸಂಪಾದಕರಾಗಿದ್ದ ಜಿ. ಸುಬ್ರಹ್ಮಣ್ಯಂ, 'ಮದ್ರಾಸ್ ಸ್ಟಾಂಡರ್ಡ್' ಪತ್ರಿಕೆಯ ಸಂಪಾದಕರಾದ ಪರಮೇಶ್ವರಂ ಪಿಳ್ಳೈ, ಪ್ರಸಿದ್ಧ ನ್ಯಾಯವಾದಿಗಳಾದ ಭಾಷ್ಯಂ ಅಯ್ಯಂಗಾರ್, ನಾರ್ಟನ್ ಮುಂತಾದವರನ್ನು ನೋಡಿದೆ. ಒಂದು ದೊಡ್ಡ ಸಭೆಯೂ ಸೇರಿತು. ಅಲ್ಲಿಂದ ಕಲ್ಕತ್ತಾಕ್ಕೆ ಹೋದೆ. ಅಲ್ಲಿ ಸುರೇಂದ್ರನಾಥ ಬಾನರ್ಜಿ, ಮಹಾರಾಜ ಜೋತೀಂದ್ರ ಮೋಹನ ಠಾಕೂರ್, 'ಇಂಗ್ಲಿಷ್‌ಮನ್' ಪತ್ರಿಕೆಯ ಸಂಪಾದಕರಾದ ಸಾಂಡರ್ಸ್ ಮುಂತಾದವರನ್ನು ನೋಡಿದೆ. ಕಲ್ಕತ್ತದಲ್ಲಿ ಒಂದು ಸಭೆಯನ್ನು ಸೇರಿಸಬೇಕೆಂದಿರುವಾಗಲೆ, ಕೂಡಲೆ ಹೊರಟುಬರಬೇಕೆಂದು ನೇಟಾಲಿನಿಂದ ಕೇಬಲ್ ಬಂದಿತು. ಇದು ೧೮೯೬ನೆಯ ನವೆಂಬರ್ ತಿಂಗಳಲ್ಲಿ. ಭಾರತಿಯರಿಗೆ ವಿರೋಧವಾಗಿ ಏನೋ ಒಂದು ಚಳವಳಿ ಪ್ರಾರಂಭವಾಗಿರಬೇಕೆಂದು ಊಹಿಸಿದೆ. ಆದ್ದರಿಂದ ಕಲ್ಕತ್ತದಲ್ಲಿ ನನ್ನ ಕೆಲಸವನ್ನು ಅಷ್ಟಕ್ಕೆ ನಿಲ್ಲಿಸಿ ಬೊಂಬಾಯಿಗೆ ಬಂದು ಮೊದಲು ಸಿಕ್ಕಿದ ಹಡಗಿನಲ್ಲಿ ನನ್ನ ಮನೆಯವರೊಂದಿಗೆ ಹೊರಟೆ. ದಾದಾ ಅಬ್ದುಲ್ಲಾ ಅಂಗಡಿಯವರು 'ಎಸ್.ಎಸ್. ಕೂರ್ಲೆಂಡ್' ಎಂಬ ಹಡಗನ್ನು ಕೊಂಡು ಪೋರ್ಬಂದರಿಗೂ ನೇಟಾಲಿಗೂ ಮಧ್ಯೆ ನಡಸುತ್ತಿದ್ದರು. ಸಾಹಸಿಗಳಾದ ಆ ವರ್ತಕರು ಇದೊಂದು ಹೊಸ ಉದ್ಯಮವನ್ನು ಪ್ರಾರಂಭಿಸಿದ್ದರು. ಪರ್ಷಿಯನ್ ಸ್ಟೀಮ್ ನ್ಯಾವಿಗೇಷನ್ ಕಂಪೆನಿಯ 'ನಾದೇರಿ' ಎಂಬ ಹಡಗು ಸಹ ಬೊಂಬಾಯಿಂದ ನೇಟಾಲಿಗೆ ಹೊರಟಿತ್ತು. ಈ ಎರಡು ಹಡಗುಗಳಲ್ಲಿದ್ದ ಒಟ್ಟು ಪ್ರಯಾಣಿಕರ ಸಂಖ್ಯೆ ೮೦೦.

ಹಿಂದೂಸ್ಥಾನದ ಮುಖ್ಯ ವೃತ್ತಪತ್ರಿಕೆಗಳೆಲ್ಲವೂ ಭಾರತದಲ್ಲಿ ನಾನು ನಡಸಿದ ಪ್ರಚಾರಕ್ಕೆ ಪ್ರಾಮುಖ್ಯತೆ ಕೊಟ್ಟುವು. ಆ ವಿಷಯವಾಗಿ ರಾಯಿಟರ್ ಸುದ್ದಿಗಾರನು ಇಂಗ್ಲೆಂಡಿಗೆ ಕೇಬಲ್ ವರ್ತಮಾನ

ಕಳುಹಿಸಿದನು. ಇದು ನೇಟಾಲ್ ಸೇರಿದ ಒಡನೆ ತಿಳಿಯಿತು. ಇಂಗ್ಲೆಂಡಿನಲ್ಲಿ ರಾಯಿಟರ್ ಸುದ್ದಿಗಾರನು, ಹಿಂದೂಸ್ಥಾನದಲ್ಲಿ ನಾನು ಮಾಡಿದ ಭಾಷಣಗಳ ವರದಿಯ ಸಾರಾಂಶಗಳನ್ನು ಉತ್ಪ್ರೇಕ್ಷೆಮಾಡಿ ನೇಟಾಲಿಗೆ ಕಳುಹಿಸಿದ್ದನು. ಈ ರೀತಿ ಆಗುವುದು ಏನೂ ಹೊಸದಲ್ಲ. ಮನಃಪೂರ್ವಕವಾಗಿ ಈ ರೀತಿ ಯಾರೂ ಉತ್ಪ್ರೇಕ್ಷೆ ಮಾಡುವುದಿಲ್ಲ. ತಮ್ಮದೇ ದೃಷ್ಟಿಯಿಂದ ನೋಡುವ ಪಕ್ಷಪಾತಿಗಳಾದ ಸುದ್ದಿಗಾರರು ಅವಸರದಲ್ಲಿ ಅಲ್ಪ ಸ್ವಲ್ಪ ಓದಿ, ಅನೇಕ ವೇಳೆ ಊಹೆಯಿಂದಲೇ ವರದಿಗಳನ್ನು ಬರೆಯುತ್ತಾರೆ. ಈ ವರದಿಗಳನ್ನು ಮುದ್ರಣ ಮಾಡುವಾಗ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆಯಾಗಿ ಅರ್ಥಮಾಡುತ್ತಾರೆ. ಈ ರೀತಿಯಾಗಿ ಯಾರೂ ಮನಃಪೂರ್ವಕವಾಗಿ ಮಾಡದೆ ಇದ್ದರೂ ವಿಷಯವೇ ಬದಲಾವಣೆ ಹೊಂದುತ್ತದೆ. ಸಾರ್ವಜನಿಕ ಕ್ಷೇತ್ರಗಳಲ್ಲೆಲ್ಲ ಈ ಅಪಾಯ ಇದ್ದೇ ಇದೆ; ಅದರ ಮಿತಿಯೂ ಅಷ್ಟೆ. ಹಿಂದೂಸ್ಥಾನದಲ್ಲಿದ್ದ ವೇಳೆ ನಾನು ನೇಟಾಲ್ ಯೂರೋಪಿಯನರನ್ನು ಟೀಕಿಸಿದ್ದೆ. ವಾಯಿದೆ ಕೆಲಸಗಾರರ ಮೇಲೆ ಹೊರಿಸಿದ್ದ ಮೂರು ಪೌಂಡುಗಳ ತಲೆಕಂದಾಯದ ವಿಷಯವಾಗಿ ಕಟುವಾಗಿ ಟೀಕೆಮಾಡಿದ್ದೆ. ವಾಯಿದೆ ಕೆಲಸಗಾರನಾದ ಸುಬ್ರಹ್ಮಣ್ಯಂ ಎಂಬಾತನ ಯಜಮಾನನು ಸುಬ್ರಹ್ಮಣ್ಯನನ್ನು ಹೊಡೆದು ಗಾಯಮಾಡಿದ್ದುದನ್ನು ನಾನೇ ನೋಡಿದ್ದೆ. ಆತನ ವ್ಯಾಜ್ಯವನ್ನು ನಾನೇ ನಡಸುತ್ತಲಿದ್ದೆ. ಆದ್ದರಿಂದ ಆತನು ಪಟ್ಟ ಕಷ್ಟವನ್ನು ಕಂಡಂತೆ ವರ್ಣಿಸಿದೆ. ನೇಟಾಲಿನ ಯೂರೋಪಿಯನರು ನನ್ನ ಭಾಷಣಗಳ ತಪ್ಪು ವರದಿಗಳನ್ನು ಓದಿ ನನ್ನ ಮೇಲೆ ಹಲ್ಲುಕಡಿಯುತ್ತಿದ್ದರು. ಇದರಲ್ಲಿ ಆಶ್ಚರ್ಯವೇನೆಂದರೆ ನೇಟಾಲಿನಲ್ಲಿ ನಾನು ಬರೆಯುತ್ತ, ಮಾತನಾಡುತ್ತ ಇದ್ದುದು ಹಿಂದೂಸ್ಥಾನದಲ್ಲಿ ಬರೆದು ಮಾತನಾಡಿದುದಕ್ಕಿಂತ ಹೆಚ್ಚು ವಿಶದವಾಗಿಯೂ ಕಟುವಾಗಿಯೂ ಇರುತ್ತಿತ್ತು. ಹಿಂದೂಸ್ಥಾನದಲ್ಲಿ ನಾನು ಮಾಡಿದ ಭಾಷಣಗಳಲ್ಲಿ ಸ್ವಲ್ಪವೂ ಉತ್ಪ್ರೇಕ್ಷೆ ಇರಲಿಲ್ಲ. ಸಾಮಾನ್ಯವಾಗಿ ಹೊಸಬನಿಗೆ ಒಂದು ವಿಷಯ ತಿಳಿಸಲು ಹೋದರೆ ನಾವು ಹೇಳಬೇಕೆಂದಿರುವುದಕ್ಕಿಂತ ಹೆಚ್ಚಿನ ಅರ್ಥಮಾಡುವುದು ಸ್ವಭಾವವಾದ್ದರಿಂದ ನಾನು ದಕ್ಷಿಣ ಆಫ್ರಿಕದ ವಿಷಯವಾಗಿ ಬಿಗಿ ಹಿಡಿದೇ

ಮಾತನಾಡಿದ್ದೆ. ಆದರೆ ನೇಟಾಲಿನಲ್ಲಿ ನಾನು ಬರೆದುದನ್ನು ಓದು ತ್ತಿದ್ದವರೇ ಅಪರೂಪ; ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಿದ್ದವರು ಇನ್ನೂ ವಿರಳ. ಆದರೆ ಹಿಂದೂಸ್ಥಾನದಲ್ಲಿನ ನನ್ನ ಭಾಷಣ ಮತ್ತು ಲೇಖನಗಳ ವಿಷಯದಲ್ಲಿ ಭಾವನೆಯೇ ಬೇರೆ ಆಯಿತು. ರಾಯಿಟರ್ ವರದಿಗಳನ್ನು ಸಾವಿರಾರು ಜನರು ಓದುತ್ತಿದ್ದರು. ಅದೂ ಅಲ್ಲದೆ ಕೇಬಲ್‌ಗ್ರಾಮ್ ಮೂಲಕ ವರದಿಮಾಡಲು ಯೋಗ್ಯವೆನಿಸಿದ ವಿಷಯಕ್ಕೆ ಇಲ್ಲದ ಪ್ರಾಮುಖ್ಯತೆ ಬಂದುಬಿಡುತ್ತದೆ. ನೇಟಾಲಿನ ಯೂರೋಪಿಯನರು, ನಾನು ಹಿಂದೂಸ್ಥಾನದಲ್ಲಿ ನಡಸಿದ ಪ್ರಚಾರಕ್ಕೆ ಒಂದು ವಿಶೇಷ ಮಹತ್ವವಿದೆಯೆಂದು ಭಾವಿಸಿದರು. ಪ್ರಾಯಶಃ ಇನ್ನು ಮುಂದೆ ಹಿಂದೂಸ್ಥಾನದಿಂದ ತಮಗೆ ವಾಯಿದೆ ಕೂಲಿಗಳೇ ಬರುವುದಿಲ್ಲವೆಂದೂ, ನೂರಾರು ಯೂರೋಪಿಯನ್ ಪ್ಲಾಂಟರುಗಳು ಕಷ್ಟಕ್ಕೀಡಾಗುವರೆಂದು ಭಾವಿಸಿದರು. ಅಲ್ಲದೆ ಭಾರತದ ಎದುರಿನಲ್ಲಿ ತಮ್ಮ ಮುಖಕ್ಕೆ ಮಸಿ ಬಳಿದಂತಾಯಿತೆಂದೂ ತಿಳಿದರು.

ನೇಟಾಲಿನ ಯೂರೋಪಿಯನರ ಮನಸ್ಸು ಈ ರೀತಿ ಕದಡಿದಾಗ ಎಸ್. ಎಸ್. 'ಕೂರ್ಲೆಂಡ್'ನಲ್ಲಿ ೩೦೦–೪೦೦ ಭಾರತೀಯರೊಂದಿಗೆ ಸಂಸಾರ ಸಮೇತ ನಾನು ಬರುತ್ತಿದ್ದೇನೆಂದೂ, ಎಸ್. ಎಸ್. 'ನಾದೇರಿ' ಎಂಬ ಹಡಗಿನಲ್ಲಿಯೂ ಸುಮಾರು ಅಷ್ಟೇ ಜನ ಭಾರತೀಯರು ಬರುತ್ತಿದ್ದಾರೆಂದು ಅವರಿಗೆ ವರ್ತಮಾನ ತಿಳಿಯಿತು. ಈ ವರ್ತಮಾನ ಕೇಳಿ ಅವರ ತಾಳ್ಮೆ ಎಲ್ಲೆಮೀರಿತು, ಕೋಪ ಉದ್ರೇಕಗೊಂಡಿತು. ನೇಟಾಲ್ ಯೂರೋಪಿಯನರು ದೊಡ್ಡ ಸಭೆಗಳನ್ನು ಸೇರಿಸಿದರು. ಅವರ ಮುಖಂಡರೆಲ್ಲರೂ ಸಭೆಗೆ ಬಂದಿದ್ದರು. ಭಾರತೀಯರ ಮೇಲೆ, ಮುಖ್ಯವಾಗಿ ನನ್ನಮೇಲೆ, ಕಟುವಾದ ಟೀಕೆಗಳಾದುವು. 'ಕೂರ್ಲೆಂಡ್', 'ನಾದೇರಿ' ಹಡಗುಗಳಲ್ಲಿ ನೇಟಾಲನ್ನು ಮುತ್ತಿಗೆ ಹಾಕಲು ನಾನು ಬರುತ್ತಿದ್ದೇನೆಂದರು. ನೇಟಾಲಿಗೆ ೮೦೦ ಜನ ಪ್ರಯಾಣಿಕರನ್ನು ನಾನು ಕರೆದುಕೊಂಡು ಬಂದಿದ್ದೇನೆಂತಲೂ, ನೇಟಾಲನ್ನು ಸ್ವತಂತ್ರಭಾರತೀಯರಿಂದ ತುಂಬಲು ಇದೇ ಮೊದಲ ಹೆಜ್ಜೆ ಎಂದೂ ಆರೋಪಿಸಿದರು. ನಾನೂ ಸೇರಿ ಎರಡು ಹಡಗುಗಳ ಪ್ರಯಾಣಿಕರನ್ನೂ ನೇಟಾಲಿನಲ್ಲಿ

ಇಳಿಯಲು ಅವಕಾಶ ಕೊಡಕೂಡದೆಂದು ಸರ್ವಾನುಮತದಿಂದ ನಿರ್ಣಯಿಸಿದರು. ಪ್ರಯಾಣಿಕರು ಇಳಿಯದಂತೆ ನೇಟಾಲ್ ಸರಕಾರ ತಡೆಯಲು ಇಷ್ಟಪಡದೆ ಹೋದರೆ, ಅಥವಾ ತಡೆಯಲಾಗದೆ ಇದ್ದರೆ ತಾವೇ ಸ್ವತಂತ್ರಿಸಿ, ಬಲಪ್ರಯೋಗದಿಂದ ಭಾರತೀಯರು ಇಳಿಯದಂತೆ ನಿಲ್ಲಿಸಲು ಆ ಸಭೆ ಒಂದು ಸಮಿತಿಯನ್ನು ಸಹ ಏರ್ಪಡಿಸಿತು. ಅದೇ ದಿನವೇ ಎರಡು ಹಡಗುಗಳೂ ಡರ್ಬಾನ್ ಬಂದರನ್ನು ಮುಟ್ಟಿದವು.

ಹಿಂದೂಸ್ಥಾನಕ್ಕೆ ಪ್ಲೇಗು ಮೊದಲು ಬಂದದ್ದು ೧೮೯೬ ರಲ್ಲಿ ಎಂಬುದು ಜ್ಞಾಪಕವಿರಬಹುದು. ಇಮಿಗ್ರೇಷನ್ ರೆಸ್ಟ್ರಿಕ್ಷನ್ ಆಕ್ಟ್ ಎಂಬ ಕಾನೂನು ಇನ್ನೂ ಜಾರಿಗೆ ಬಂದಿರಲಿಲ್ಲವಾದ್ದರಿಂದ, ನಮ್ಮನ್ನು ಹಡಗಿಳಿಯದಂತೆ ತಡೆಯಲು ನೇಟಾಲ್ ಸರಕಾರಕ್ಕೆ ಕಾನೂನಿನ ಬಾಧಕವಿತ್ತು. ಹಾಗಿಲ್ಲದಿದ್ದ ಪಕ್ಷದಲ್ಲಿ ಸರಕಾರದ ಸಹಾನುಭೂತಿ ಎಲ್ಲ ಯೂರೋಪಿಯನ್ ಸಮಿತಿಯ ಪರವೇ ಇತ್ತು. ಸರಕಾರದ ಅಧಿಕಾರಿಯಾಗಿದ್ದ ದಿವಂಗತ ಎಸ್ಕಾಮರು ಆ ಸಮಿತಿಯ ಕಾರ್ಯಕಲಾಪಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಅವರೇ ಯೂರೋಪಿಯನರನ್ನು ಎತ್ತಿ ಕಟ್ಟಿದ್ದರು. ಹಡಗಿನಲ್ಲಿ ಸಾಂಕ್ರಾಮಿಕ ಜಾಡ್ಯವಿದ್ದರೆ, ಅಥವಾ ಸಾಂಕ್ರಾಮಿಕಜಾಡ್ಯವಿರುವ ಬಂದರಿಂದ ಹಡಗು ಬಂದಿದ್ದರೆ ಕೆಲವುಕಾಲ ಪರೀಕ್ಷಾಕೇಂದ್ರದಲ್ಲಿರಬೇಕೆಂದು ಎಲ್ಲ ಬಂದರುಗಳಲ್ಲೂ ನಿಯಮವಿದೆ. ಆರೋಗ್ಯರಕ್ಷಣೆಗಾಗಿ ಬಂದರಿನ ಆರೋಗ್ಯಶಾಖಾಧಿಕಾರಿಯ ಅಪ್ಪಣೆಯಂತೆ ಈ ನಿರ್ಬಂಧವನ್ನು ಜಾರಿಮಾಡಬಹುದು. ನೇಟಾಲ್ ಸರಕಾರದವರು ರಾಜಕೀಯ ಉದ್ದೇಶಗಳಿಗಾಗಿ ಈ ಅಧಿಕಾರವನ್ನು ದುರುಪಯೋಗಪಡಿಸಿದರು. ಹಡಗಿನಲ್ಲಿ ಯಾವ ಸಾಂಕ್ರಾಮಿಕ ರೋಗವೂ ಇಲ್ಲದೆ ಹೋದರೂ, ಎರಡು ಹಡಗುಗಳನ್ನೂ ವಾಯಿದೆ ಮೀರಿ ಇಪ್ಪತ್ತುಮೂರು ದಿನಗಳಕಾಲ ತಡೆದುಹಾಕಿದರು. ಈ ಮಧ್ಯೆ ಯೂರೋಪಿಯನರ ಸಮಿತಿ ತನ್ನ ಅಪಪ್ರಚಾರ ನಡಸುತ್ತಲೇ ಇತ್ತು. 'ಕೂರ್ಲೆಂಡ್' ಮಾಲಕರಾದ ದಾದಾ ಅಬ್ದುಲ್ಲಾರವರಿಗೂ, 'ನಾದೇರಿ'ಯ ಏಜಂಟರಿಗೂ ಇಲ್ಲದ ತೊಂದರೆಯನ್ನು ಕೊಟ್ಟರು. ಪ್ರಯಾಣಿಕರನ್ನು ಹಿಂದಕ್ಕೆ

ಕರೆದೊಯ್ಯಲು ಲಂಚ ಕೊಡಲು ಬಂದರು. ಹಿಂದಕ್ಕೆ ಕರೆದುಕೊಂಡು ಹೋಗದಿದ್ದರೆ ಅವರ ವ್ಯಾಪಾರವನ್ನೇ ಹಾಳುಮಾಡುವುದಾಗಿ ಹೆದರಿಸಿದರು. ಆದರೆ ಅಂಗಡಿಯ ಪಾಲುದಾರರು ಹೇಡಿಗಳಾಗಿರಲಿಲ್ಲ. ತಾವು ಹಾಳಾದರೂ ಅಡ್ಡಿಯಿಲ್ಲವೆಂದು ಹಟತೊಟ್ಟರು. ನಿಸ್ಸಹಾಯಕರೂ ನಿರಪರಾಧಿಗಳೂ ಆದ ಪ್ರಯಾಣಿಕರನ್ನು ಹಿಂದಕ್ಕೆ ಕಳಿಸುವ ಅಪರಾಧವನ್ನು ತಾವೆಂದಿಗೂ ಮಾಡುವುದಿಲ್ಲವೆಂದೂ ಕೊನೆಯವರೆಗೂ ಕಾದಾಡುವುದೇ ನಿಜವೆಂದೂ ತೀರ್ಮಾನಿಸಿದರು. ಸ್ವದೇಶಾಭಿಮಾನ ಅವರಿಗೇನೂ ಹೊಸದಾಗಿರಲಿಲ್ಲ. ಅಂಗಡಿಯ ನ್ಯಾಯಸಲಹೆಗಾರರಾದ ಎಫ್. ಎ. ಲಾಫ್ಟನ್‌ರೂ ಒಳ್ಳೆಯ ಧೈರ್ಯಶಾಲಿಗಳಾಗಿದ್ದರು.

ಅದೃಷ್ಟಕ್ಕೆ ಸರಿಯಾಗಿ ಸೂರತ್ ನಗರದ ಕಾಯಸ್ಥ ಸದ್ಗೃಹಸ್ಥರೂ ದಿವಂಗತ ನ್ಯಾಯಮೂರ್ತಿ ನಾನಾಭಾಯಿ ಹರಿದಾಸರ ಅಣ್ಣಂದಿರ ಮಕ್ಕಳೂ ಆದ ಮನ್ಸುಖಲಾಲ್ ಹೀರಾಲಾಲ್ ನಾಜರ್ ಅವರು ಅದೇ ಸಮಯಕ್ಕೆ ದಕ್ಷಿಣ ಆಫ್ರಿಕಕ್ಕೆ ಬಂದರು. ನನಗೆ ಅವರ ಪರಿಚಯ ಇರಲಿಲ್ಲ, ಮತ್ತು ಅವರು ಹೊರಡುವುದೂ ಗೊತ್ತಿರಲಿಲ್ಲ. 'ಕೂರ್ಲೆಂಡ್' ಮತ್ತು 'ನಾದೇರಿ'ಯ ಪ್ರಯಾಣಿಕರನ್ನು ಕರೆತರಲು ನನ್ನ ಪ್ರಯತ್ನ ಯಾವುದೂ ಇರಲಿಲ್ಲವೆಂದು ನಾನು ಹೇಳಬೇಕಾಗಿಲ್ಲ. ಅವರಲ್ಲಿ ಅನೇಕರು ದಕ್ಷಿಣ ಆಫ್ರಿಕದಲ್ಲಿ ಮೊದಲು ಇದ್ದವರು. ಕೆಲವರು ಟ್ರಾನ್ಸ್ವಾಲಿಗೆ ಹೊರಟಿದ್ದರು. ಯೂರೋಪಿಯನರ ಸಮಿತಿ ಪ್ರಯಾಣಿಕರಲ್ಲಿ ಬೆದರಿಕೆಯ ಪ್ರಕಟನೆಗಳನ್ನು ಸಹ ಹಂಚಿತು. ಹಡಗುಗಳ ಕ್ಯಾಪ್ಟನ್ನರು ಪ್ರಯಾಣಿಕರಿಗೆ ಓದಿಹೇಳಿದರು. ನೇಟಾಲಿನ ಯೂರೋಪಿಯನರು ಬಹಳ ಕೋಪಗೊಂಡಿರುವುದಾಗಿಯೂ, ಈ ಎಚ್ಚರಿಕೆ ಕೊಟ್ಟ ಮೇಲೂ ಭಾರತೀಯ ಪ್ರಯಾಣಿಕರು ಬಂದರಿನಲ್ಲಿ ಇಳಿದರೆ ಸಮಿತಿಯ ಸದಸ್ಯರು ಬಂದರಿನಲ್ಲಿದ್ದು, ಪ್ರತಿಯೊಬ್ಬ ಭಾರತೀಯನನ್ನೂ ಸಮುದ್ರದೊಳಕ್ಕೆ ತಳ್ಳುವುದಾಗಿಯೂ ಆ ಹಸ್ತಪತ್ರಿಕೆಗಳಲ್ಲಿ ಸ್ಪಷ್ಟವಾಗಿ ತಿಳಿಸಿದ್ದರು. 'ಕೂರ್ಲೆಂಡ್' ಹಡಗಿನ ಪ್ರಯಾಣಿಕರಿಗೆ ನಾನು ಈ ಹಸ್ತಪತ್ರಿಕೆಯ ಅರ್ಥವನ್ನು ತಿಳಿಸಿದೆ. 'ನಾದೇರಿ' ಹಡಗಿನ ಪ್ರಯಾಣಿಕರಿಗೂ ಅದರಂತೆಯೇ ಇಂಗ್ಲಿಷ್ ಬಲ್ಲ ಪ್ರಯಾಣಿಕರು ಅರ್ಥ ಹೇಳಿದರು.

ಎರಡು ಹಡಗುಗಳ ಪ್ರಯಾಣಿಕರೂ ಹಿಂದಕ್ಕೆ ಹೋಗುವುದಿಲ್ಲವಾಗಿ ತಿಳಿಸಿದರು. ಕೆಲವರು ಟ್ರಾನ್ಸ್‌ವಾಲಿಗೆ ಹೋಗುವುದಾಗಿಯೂ ಇನ್ನು ಕೆಲವರು ನೇಟಾಲಿನ ಮುಂಚಿನ ನಿವಾಸಿಗಳೆಂತಲೂ, ಏನೇ ಆಗಲಿ, ಪ್ರತಿಯೊಬ್ಬ ಪ್ರಯಾಣಿಕನಿಗೂ ನೇಟಾಲಿನಲ್ಲಿ ಹಡಗು ಇಳಿಯಲು ಹಕ್ಕು ಇರುವುದಾಗಿಯೂ ಯೂರೋಪಿಯನ್ ಸಮಿತಿಯ ಹೆದರಿಕೆ ಇದ್ದರೂ ತಮಗೆ ಹಕ್ಕು ಇದೆಯೋ ಇಲ್ಲವೋ ಪರೀಕ್ಷೆ ಮಾಡಲು ಪ್ರತಿಯೊಬ್ಬರೂ ಹಡಗು ಇಳಿಯಬೇಕೆಂದು ಪಣ ತೊಟ್ಟಿರುವುದಾಗಿಯೂ ತಿಳಿಸಿದರು.

ನೇಟಾಲ್ ಸರಕಾರಕ್ಕೆ ದಿಕ್ಕೇ ಕಾಣದಂತಾಯಿತು. ಈ ರೀತಿ ಅನ್ಯಾಯವಾದ ನಿರ್ಬಂಧವನ್ನು ಎಷ್ಟು ದಿನ ಹಾಕುವುದು ? ಇಪ್ಪತ್ತು ಮೂರು ದಿನಗಳು ಆಗಲೇ ಕಳೆದು ಹೋಗಿದ್ದುವು. ದಾದಾ ಅಬ್ದುಲ್ಲಾ ಆಗಲಿ ಪ್ರಯಾಣಿಕರಾಗಲಿ ಯಾರೂ ಜಗ್ಗಲಿಲ್ಲ. ಇಪ್ಪತ್ತುಮೂರು ದಿನಗಳ ಅನಂತರ ನಿರ್ಬಂಧವನ್ನು ತೆಗೆದು ಹಾಕಲಾಯಿತು. ಹಡಗುಗಳೆರಡೂ ಬಂದರೊಳಕ್ಕೆ ಬಂದುವು. ಈ ಮಧ್ಯೆ ಎಸ್ಕಾಮ್‌ರು ಉದ್ರಿಕ್ತರಾದ ಯೂರೋಪಿಯನ್ ಸಮಿತಿಯ ಸದಸ್ಯರನ್ನು ಸಮಾಧಾನಗೊಳಿಸಿದ್ದರು. ಒಂದು ಸಭೆಯಲ್ಲಿ "ಡರ್ಬಾನಿನ ಯೂರೋಪಿಯನರಾದ ನೀವು ಅಭಿನಂದನೀಯವಾದ ಒಗ್ಗಟ್ಟನ್ನೂ, ಧೈರ್ಯವನ್ನೂ ತೋರಿಸಿದ್ದೀರಿ. ನಿಮ್ಮ ಕೈಲಾದ ಪ್ರಯತ್ನವನ್ನೆಲ್ಲಾ ನೀವು ಮಾಡಿರುತ್ತೀರಿ. ಸರಕಾರದವರೂ ನಿಮಗೆ ಸಹಾಯ ಮಾಡಿದ್ದಾರೆ. ಭಾರತೀಯರನ್ನು ಇಪ್ಪತ್ತುಮೂರು ದಿನಗಳ ಕಾಲ ನಿರ್ಬಂಧದಲ್ಲಿಟ್ಟೆವು. ನೀವು ನಿಮ್ಮ ಮನೋಭಿಪ್ರಾಯಕ್ಕೆ ಮತ್ತು ಸಾರ್ವಜನಿಕನಿಷ್ಠೆಗೆ ತಕ್ಕಷ್ಟು ನಿದರ್ಶನ ಕೊಟ್ಟಿರುತ್ತೀರಿ. ಸಾಮ್ರಾಜ್ಯ ಸರಕಾರದ ಮೇಲೂ ಇದು ಶ್ರೇಷ್ಠ ಪರಿಣಾಮವನ್ನು ಉಂಟುಮಾಡುತ್ತದೆ. ನಿಮ್ಮ ಕಾರ್ಯ ನೇಟಾಲ್ ಸರಕಾರದ ಮಾರ್ಗವನ್ನು ಸುಲಭ ಮಾಡಿದೆ. ನೀವು ಬಲಾತ್ಕಾರದಿಂದ ಒಬ್ಬನೇ ಒಬ್ಬ ಭಾರತೀಯನನ್ನು ಇಳಿಯಲು ಈಗ ಅಡ್ಡಿ ಮಾಡಿದರೂ ನಿಮ್ಮ ಕೆಲಸ ಕೆಡುವುದಲ್ಲದೆ, ಸರಕಾರವನ್ನು ನೀವು ಬಹಳ ಬಿಕ್ಕಟ್ಟಿಗೆ ಗುರಿಪಡಿಸುತ್ತೀರಿ. ಆಗಲೂ ಭಾರತೀಯರು ಇಳಿಯದಂತೆ ತಡೆಯುವುದು ನಿಮ್ಮಿಂದ ಸಾಧ್ಯವಾಗುವುದಿಲ್ಲ. ಪ್ರಯಾಣಿಕರನ್ನು ದೂರಲು ಕಾರಣ

ಇಲ್ಲ. ಅದರಲ್ಲಿ ಹೆಂಗಸರೂ ಮಕ್ಕಳೂ ಇದ್ದಾರೆ. ಅವರು ಬೊಂಬಾಯಿಯಲ್ಲಿ ಹಡಗು ಹತ್ತಿದಾಗ ನಿಮ್ಮ ಮನೋಭಾವನೆ ಅವರಿಗೆ ತಿಳಿದಿರಲಿಲ್ಲ. ಆದ್ದರಿಂದ ನೀವೆಲ್ಲರೂ ಚದರಬೇಕೆಂದೂ, ಇವರಿಗೆ ಯಾವ ಆತಂಕವನ್ನೂ ಮಾಡಬಾರದೆಂದೂ ನಾನು ಹೇಳಬಯಸುತ್ತೇನೆ. ಮುಂದೆ ಭಾರತೀಯರು ಈ ದೇಶಕ್ಕೆ ವಲಸೆ ಬರುವುದನ್ನು ತಡೆಗಟ್ಟಲು ನೇಟಾಲ್ ಸರಕಾರ ಶಾಸನಸಭೆಯಿಂದ ಬೇಕಾದ ಅಧಿಕಾರವನ್ನು ಪಡೆಯುತ್ತದೆ" ಎಂದು ಹೇಳಿದರು. ಇದು ಎಸ್ಕಾಮ್‌ರ ಭಾಷಣದ ಸಾರಾಂಶ ಮಾತ್ರ. ಅವರ ಶ್ರೋತೃವೃಂದಕ್ಕೆ ಬಹಳ ನಿರಾಶೆಯಾಯಿತು. ಆದರೆ ನೇಟಾಲ್ ಯೂರೋಪಿಯನರು ಅವರ ಮಾತನ್ನು ಮೀರುತ್ತಿರಲಿಲ್ಲ. ಅವರ ಬುದ್ಧಿವಾದದಂತೆ ಎಲ್ಲರೂ ಚದರಿದರು; ಎರಡು ಹಡಗುಗಳೂ ಬಂದರಿನ ಒಳಗೆ ಬಂದವು.

ನಾನು ಎಲ್ಲರೊಡನೆ ಹಡಗನ್ನು ಇಳಿಯಬಾರದಾಗಿಯೂ, ಸಂಜೆಯಾದ ಮೇಲೆ ಮನೆಗೆ ಕರೆದೊಯ್ಯಲು ಪೋಲೀಸ್ ಸೂಪರಿಂಟೆಂಡೆಂಟರನ್ನು ಕಳುಹಿಸುವುದಾಗಿಯೂ, ನನ್ನ ಮನೆಯವರು ಯಾವಾಗ ಬೇಕಾದರೂ ಹಡಗಿಳಿಯಬಹುದಾಗಿಯೂ ಎಸ್ಕಾಮ್‌ರು ನನಗೆ ವರ್ತಮಾನ ಕಳುಹಿಸಿದರು. ಇದು ಯಾವ ಕಾನೂನು ಪ್ರಕಾರವೂ ಮಾಡಿದ ಆಜ್ಞೆಯಲ್ಲ. ನನಗೆ ಕಾದಿದ್ದ ವಿಪತ್ತಿಗೆ ಮುಂಜಾಗ್ರತೆ ಕೊಟ್ಟು, ನನ್ನನ್ನು ಇಳಿಯಗೊಡಬಾರದೆಂದು ಹಡಗಿನ ಕ್ಯಾಪ್ಟನ್‌ಗೆ ಕಳುಹಿಸಿದ್ದ ಸಲಹೆ ಮಾತ್ರ. ಇಳಿಯದಂತೆ ತಡೆಯಲು ಕ್ಯಾಪ್ಟನ್‌ಗೆ ಯಾವ ಅಧಿಕಾರಬಲವೂ ಇರಲಿಲ್ಲ. ಸಲಹೆಯಂತೆ ನಡೆಯಬೇಕೆಂದು ನಾನು ತೀರ್ಮಾನಿಸಿದೆ. ನನ್ನ ಮನೆಯವರನ್ನು ಮನೆಗೆ ಕಳುಹಿಸುವ ಬದಲು ನನ್ನ ಹಳೆಯ ಪಾರ್ಸಿ ಸ್ನೇಹಿತರೂ ಕಕ್ಷಿಗಾರರೂ ಆಗಿದ್ದ ರುಸ್ತುಂಜಿ ಅವರ ಮನೆಗೆ ಕಳುಹಿಸಿ ಅಲ್ಲಿ ಅವರನ್ನು ಆಮೇಲೆ ನೋಡುವುದಾಗಿ ಹೇಳಿದೆ. ಪ್ರಯಾಣಿಕರೆಲ್ಲರೂ ಇಳಿದ ಅನಂತರ ದಾದಾಅಬ್ದುಲ್ಲಾ ಸಲಹೆಗಾರರಾದ ಲಾಫ್ಟನ್‌ರೂ ನನ್ನ ಆಪ್ತಸ್ನೇಹಿತರೊಬ್ಬರೂ ಬಂದು ನನ್ನನ್ನು ನೋಡಿದರು. ಏಕೆ ಹಡಗು ಇಳಿಯಲಿಲ್ಲವೆಂದು ನನ್ನನ್ನು ಪ್ರಶ್ನಿಸಿದರು. ಎಸ್ಕಾಮ್‌ರ ಪತ್ರದ ವಿಷಯ ಅವರಿಗೆ ತಿಳಿಸಿದೆ. ನಾನು ಸಂಜೆಯವರೆಗೆ ಕಾದಿದ್ದು

ಕಳ್ಳನಂತೆ ರಾತ್ರಿವೇಳೆ ಪಟ್ಟಣವನ್ನು ಪ್ರವೇಶಿಸುವುದು ತಮಗೆ ಇಷ್ಟವಿಲ್ಲ ವಾಗಿಯೂ ತಮ್ಮ ಜೊತೆಯಲ್ಲಿಯೇ ಆಗಲೇ ಹೊರಡಬೇಕಾಗಿಯೂ ಪ್ರಮಾದ ಏನೂ ಇಲ್ಲವೆಂಬಂತೆ ಪಟ್ಟಣದೊಳಕ್ಕೆ ನಡೆದು ಹೋಗ ಬೇಕಾಗಿಯೂ ತಿಳಿಸಿದರು.

"ನನಗೆ ಹೆದರಿಕೆ ಏನೂ ಇಲ್ಲ. ಆದರೆ ಎಸ್ಕಾಮ್‌ರ ಸಲಹೆಯನ್ನು ನಾನು ಅಂಗೀಕರಿಸಬೇಕೆ ಬೇಡವೆ ಎಂಬುದೇ ಮುಖ್ಯ ಪ್ರಶ್ನೆ. ಅದೂ ಅಲ್ಲದೆ ಈ ವಿಷಯದಲ್ಲಿ ಹಡಗಿನ ಕ್ಯಾಪ್ಟನ್‌ನ ಜವಾಬ್ದಾರಿ ಏನೆಂಬುದನ್ನು ಯೋಚಿಸಬೇಕು" ಎಂದು ತಿಳಿಸಿದೆ.

ಲಾಫ್ಟನ್‌ರು ನಕ್ಕು "ಎಸ್ಕಾಮ್‌ರ ಮಾತನ್ನು ನೀವು ಕೇಳಲು ಅವರು ನಿಮಗೆ ಏನು ಮಾಡಿದ್ದಾರೆ ? ಪೂರ್ವೋತ್ತರ ಆಶೆಯಿಲ್ಲದೆ ನಿಮ್ಮ ಮೇಲಿನ ಅಭಿಮಾನದಿಂದ ಈ ರೀತಿ ಮಾಡಿದ್ದಾರೆಂದು ನಂಬಲು ನಿಮ ಗಿರುವ ಕಾರಣವಾದರೂ ಏನು ? ಪಟ್ಟಣದಲ್ಲಿ ಏನು ನಡೆದಿದೆ ಎಂಬುದೂ ಅದರಲ್ಲಿ ಎಸ್ಕಾಮ್‌ರು ಯಾವ ಭಾಗ ವಹಿಸಿದ್ದಾರೆಂಬುದೂ ನಿಮಗಿಂತ ಹೆಚ್ಚು ನನಗೆ ಗೊತ್ತು" ಎಂದು ಹೇಳಿದರು.

ಅವರ ಮಾತಿನ ಮಧ್ಯೆ ನಾನು ತಲೆಯಲ್ಲಾಡಿಸಿದೆ.

ಲಾಫ್ಟನ್‌ರು "ಎಸ್ಕಾಮ್‌ರು ಸದುದ್ದೇಶದಿಂದಲೇ ಪ್ರೇರಿತರಾಗಿ ದ್ದಾರೆಂದು ಭಾವಿಸೋಣ. ಆದರೆ ಅವರ ಮಾತನ್ನು ನೀವು ಕೇಳಿದರೆ ನಿಮ್ಮ ಮರ್ಯಾದೆ ಮೂರು ಕಾಸಾಗುತ್ತದೆ. ನೀವು ಸಿದ್ಧವಿದ್ದರೆ ಈಗಲೇ ನನ್ನೊಂದಿಗೆ ಹೊರಡಬೇಕೆಂದು ನನ್ನ ಅಭಿಮತ. ಕ್ಯಾಪ್ಟನ್ ನಮ್ಮವನು, ಆತನ ಜವಾಬ್ದಾರಿಯೇ ನಮ್ಮ ಜವಾಬ್ದಾರಿ. ದಾದಾ ಅಬ್ದುಲ್ಲಾರವರಿಗೆ ಮಾತ್ರ ಆತನು ಉತ್ತರ ಹೇಳಬೇಕು. ಈ ಹೋರಾಟದಲ್ಲಿ ಅವರು ಅಸಾಧಾರಣ ಧೈರ್ಯವನ್ನು ತೋರಿಸಿರುವುದರಿಂದ ಅವರ ಅಭಿಪ್ರಾಯ ಏನೆಂಬುದು ನನಗೆ ತಿಳಿದಿದೆ" ಎಂದರು.

"ಹಾಗಾದರೆ ಹೊರಡೋಣ. ನಾನು ಸಿದ್ಧತೆ ಏನನ್ನೂ ಮಾಡ ಬೇಕಾಗಿಲ್ಲ. ರುಮಾಲು ಮಾತ್ರ ಹಾಕಿಕೊಂಡರಾಯಿತು. ಕ್ಯಾಪ್ಟನ್‌ಗೆ ತಿಳಿಸಿ ಹೊರಡೋಣ" ಎಂದು ಹೇಳಿದೆ. ಕ್ಯಾಪ್ಟನ್ ಅಪ್ಪಣೆ ಪಡೆದೆವು.

ಲಾಫ್ಟನ್‌ರು ಡರ್ಬಾನಿನಲ್ಲಿ ವೃದ್ಧರೂ ಸುಪ್ರಸಿದ್ಧರೂ ಆದ ನ್ಯಾಯವಾದಿಗಳು. ಹಿಂದೂಸ್ಥಾನಕ್ಕೆ ಹಿಂದಿರುಗುವ ಮುಂಚೆ ಅವರೊಂದಿಗೆ ಸಮೀಪ ಬಾಂಧವ್ಯವನ್ನು ಇಟ್ಟುಕೊಂಡಿದ್ದೆ. ಕಷ್ಟತರವಾದ ಮೊಕದ್ದಮೆಗಳಲ್ಲಿ ಅವರ ಸಲಹೆ ಪಡೆದು ಅನೇಕ ವೇಳೆ ಹಿರಿಯ ನ್ಯಾಯವಾದಿಗಳನ್ನಾಗಿ ನೇಮಿಸಿಕೊಳ್ಳುತ್ತಲಿದ್ದೆ.

ನಮ್ಮ ದಾರಿ ಡರ್ಬಾನಿನ ಮುಖ್ಯಬೀದಿಯ ಮುಖಾಂತರವಿತ್ತು. ನಾವು ಹೊರಟಾಗ ಸಂಜೆ ೪–೩೦ ಗಂಟೆಯಾಗಿತ್ತು. ಆಕಾಶದಲ್ಲಿ ಸ್ವಲ್ಪ ಮೋಡ ಕವಿದು ಸೂರ್ಯರಶ್ಮಿ ಕಾಣುತ್ತಿರಲಿಲ್ಲ. ಕಾಲುನಡಿಗೆಯಿಂದ ಸೇಟ್ ರುಸ್ತುಂಜಿಯವರ ಮನೆಗೆ ಹೋಗಲು ಒಂದು ಗಂಟೆಯಾದರೂ ಬೇಕಿತ್ತು. ನಾವು ಹಡಗು ಇಳಿದಾಗ ನಿಲ್ದಾಣದಲ್ಲಿ ಸಾಮಾನ್ಯವಾಗಿ ಇರುತ್ತಿದ್ದ ಜನಸಂದಣಿಗಿಂತ ಹೆಚ್ಚು ಜನರು ಇರಲಿಲ್ಲ. ನಾವು ಇಳಿದ ಕೂಡಲೆ ಕೆಲವು ಹುಡುಗರು ನಮ್ಮನ್ನು ನೋಡಿದರು. ನನ್ನದೇ ಒಂದು ನಮೂನೆಯ ರುಮಾಲನ್ನು ಧರಿಸುವವನು ಭಾರತೀಯರಲ್ಲಿ ನಾನೊಬ್ಬನೇ ಆಗಿದ್ದ ಕಾರಣ, ನನ್ನ ಗುರುತು ಹಿಡಿದು, “ಗಾಂಧಿ, ಗಾಂಧಿ, ಹೊಡೆಯಿರಿ, ಮುತ್ತಿರಿ” ಎಂದು ಕೂಗಲು ಪ್ರಾರಂಭಿಸಿ, ನಮ್ಮ ಹತ್ತಿರ ಬಂದರು. ಯೂರೋಪಿಯನರಲ್ಲಿ ಕೆಲವರು ದೊಡ್ಡವರೂ ಸೇರಿದರು. ಕೆಲವರು ಕಲ್ಲು ಬೀರಲು ಪ್ರಾರಂಭಿಸಿದರು. ಕ್ರಮೇಣ ದಂಗೆಕಾರರ ಗುಂಪು ದೊಡ್ಡದಾಯಿತು. ನಾವು ನಡೆದುಹೋದರೆ ಅಪಾಯವೆಂದು ಲಾಫ್ಟನ್‌ರು ಯೋಚಿಸಿದರು. ಆದ್ದರಿಂದ ಒಂದು ರಿಕ್ಷಾ ಕರೆದರು. ಮನುಷ್ಯರು ಎಳೆಯುವ ವಾಹನದಲ್ಲಿ ಕೂಡಲು ನನಗೆ ಬಹಳ ಬೇಸರವಾಗುತ್ತಿದ್ದುದರಿಂದ ನಾನು ಯಾವಾಗಲೂ ರಿಕ್ಷಾದಲ್ಲಿ ಕುಳಿತಿರಲಿಲ್ಲ. ಆದರೆ ಈಗ ಅದು ಅನಿವಾರ್ಯವೆಂದು ತೋರಿತು. ದೈವಬಲವಿದ್ದವನಿಗೆ ತಾನು ತಪ್ಪು ಮಾಡಲು ಮನಸೋತರೂ ದಾರಿ ತಪ್ಪಲು ಸಾಧ್ಯವಾಗುವುದಿಲ್ಲ ಎಂದು ನನಗೆ ಐದು ಬಾರಿಯೊ ಏಳು ಬಾರಿಯೊ ಅನುಭವಕ್ಕೆ ಬಂದಿದೆ. ನಾನು ದುರ್ಮಾರ್ಗಕ್ಕೆ ಬೀಳದಿದ್ದರೆ ಅದರಲ್ಲಿ ನನ್ನ ಪ್ರಯತ್ನ ಏನೂ ಇಲ್ಲ. ಈ ರಿಕ್ಷಾ ಎಳೆಯುವವರು ಜುಲುಗಳು. ನನಗೆ ರಿಕ್ಷಾದಲ್ಲಿ ಕೂಡಲು ಅವಕಾಶ ಕೊಟ್ಟರೆ ರಿಕ್ಷಾ ಚೂರುಚೂರು ಮಾಡುವುದಾಗಿ

ದೊಡ್ಡವರೂ ಹುಡುಗರೂ ಯೂರೋಪಿಯನರು ರಿಕ್ಷಾ ಎಳೆಯುವವನನ್ನು ಹೆದರಿಸಿದರು. ರಿಕ್ಷಾ ಹುಡುಗನು 'ಖಾ' (ಆಗುವುದಿಲ್ಲ) ಎಂದು ಹೇಳಿ ಹೊರಟುಹೋದನು. ಈ ರೀತಿ ರಿಕ್ಷಾದಲ್ಲಿ ಕೂಡುವ ಅಪಮಾನ ನನಗೆ ತಪ್ಪಿತು.

ನಮ್ಮ ಗುರಿ ಮುಟ್ಟಲು ನಡೆದು ಹೋಗುವುದರ ಹೊರತು ಬೇರೆ ಮಾರ್ಗವಿರಲಿಲ್ಲ. ಒಂದು ದೊಡ್ಡ ಗುಂಪು ನಮ್ಮನ್ನು ಹಿಂಬಾಲಿಸಿತು. ಹೆಜ್ಜೆಹೆಜ್ಜೆಗೂ ಅದು ದೊಡ್ಡದಾಗುತ್ತ ಬಂದಿತು. ವೆಸ್ಟ್ ಸ್ಟ್ರೀಟ್‌ಗೆ ಹೋದಾಗ ಗುಂಪು ಬಹಳ ದೊಡ್ಡದಾಯಿತು. ದೃಢಕಾಯನಾದವನೊಬ್ಬನು ಲಾಫ್ಟನ್‌ರ ರಟ್ಟೆಹಿಡಿದೆಳೆದು ನನ್ನಿಂದ ದೂರಮಾಡಿನು. ಆದ್ದರಿಂದ ಅವರು ನನ್ನ ಸಹಾಯಕ್ಕೆ ಬರುವಂತೆ ಇರಲಿಲ್ಲ. ಜನರ ಗುಂಪು ನನ್ನನ್ನು ಬೈದು ಕಲ್ಲುಗಳ ಸುರಿಮಳೆ ಸುರಿಸಿದರು; ಕೈಗೆ ಸಿಕ್ಕಿದ್ದನ್ನು ನನ್ನ ಮೇಲೆ ಎಸೆದರು. ನನ್ನ ರುಮಾಲನ್ನು ಕಿತ್ತೊಗೆದರು. ಇಷ್ಟರಲ್ಲಿ ಒಬ್ಬ ಧಾಂಡಿಗನು ನನ್ನ ಹತ್ತಿರ ಬಂದು, ಕಪಾಳಕ್ಕೆ ಹೊಡೆದು ನನ್ನನ್ನು ಕಾಲಿನಿಂದ ಒದೆದನು. ಜ್ಞಾನತಪ್ಪಿ ನಾನು ಬೀಳಬೇಕಾಗಿತ್ತು; ಅಷ್ಟರಲ್ಲಿ ಹತ್ತಿರದ ಮನೆಯ ಬೇಲಿಯ ಸರಳನ್ನು ಹಿಡಿದುಕೊಂಡೆ. ಸ್ವಲ್ಪ ಸುಧಾರಿಸಿಕೊಂಡು ಜ್ಞಾನ ಬಂದಮೇಲೆ ಪುನಃ ನನ್ನ ದಾರಿಯನ್ನು ಹಿಡಿದೆ. ಜೀವಸಹಿತ ಮನೆ ಸೇರುವ ಆಸೆಯನ್ನು ನಾನು ಬಿಟ್ಟಿದ್ದೆ. ಆದರೂ ನನ್ನ ಮೇಲೆ ಕೈಮಾಡಿದವರ ಮೇಲೆ ನನ್ನ ಮನಸ್ಸಿನಲ್ಲಿ ಯಾವ ದ್ವೇಷಭಾವನೆಯೂ ಹುಟ್ಟಲಿಲ್ಲವೆಂದು ನನಗೆ ಜ್ಞಾಪಕ.

ಈ ರೀತಿ ನಾನು ಹೋಗುತ್ತಿರುವಾಗ ಎದುರುಗಡೆಯಿಂದ ಡರ್ಬಾನ್ ಪೊಲೀಸ್ ಸೂಪರಿಂಟೆಂಡೆಂಟರ ಪತ್ನಿ ಬರುತ್ತಿದ್ದಳು. ನಮಗೆ ಪರಸ್ಪರ ಪರಿಚಯವಿದ್ದಿತು. ಆಕೆ ಒಳ್ಳೆಯ ಧೈರ್ಯಶಾಲಿ. ಮೋಡ ಮುಸುಕಿ ಕತ್ತಲಾಗುತ್ತ ಬಂದಿದ್ದರೂ ನನ್ನ ರಕ್ಷಣೆಗಾಗಿ ತನ್ನ ಕೊಡೆಯನ್ನು ಬಿಚ್ಚಿಹಿಡಿದು ನನ್ನ ಜೊತೆಗೆ ನಡೆದು ಬಂದಳು. ಯೂರೋಪಿಯನರು ಹೆಂಗಸಿಗೆ ಅಪಮಾನ ಮಾಡುವಂತೆ ಇರಲಿಲ್ಲ. ಅದರಲ್ಲೂ ವೃದ್ಧರೂ ಜನಾನುರಾಗಿಗಳೂ ಆದ ಪೊಲೀಸ್ ಸೂಪರಿಂಟೆಂಡೆಂಟರ ಪತ್ನಿಯನ್ನು! ಆಕೆಯನ್ನು ಗಾಯಗೊಳಿಸುವಂತೆಯೂ ಇರಲಿಲ್ಲ. ನನಗೆ ಗುರಿಯಿಡು

ವಾಗ ಆಕೆಗೆ ತಗಲದಂತೆ ಏಟು ಕೊಡಬೇಕಾಗಿತ್ತು. ಆಕೆ ನನ್ನ ಸಂಗಡ ಬಂದಮೇಲೆ ಬಿದ್ದ ಏಟುಗಳಿಂದ ಹೆಚ್ಚು ಗಾಯವಾಗಲಿಲ್ಲ. ಇಷ್ಟು ಹೊತ್ತಿಗೆ ಈ ವರ್ತಮಾನ ಪೊಲೀಸ್ ಸೂಪರಿಂಟೆಂಡೆಂಟರಿಗೆ ತಿಳಿದು ನನ್ನ ರಕ್ಷಣೆಗೆ ಪೊಲೀಸ್ ಪಡೆಯನ್ನು ಕಳುಹಿಸಿದರು. ಪೊಲೀಸಿನವರು ನನ್ನ ಸುತ್ತಲೂ ಕಾವಲು ನಿಂತರು. ದಾರಿಯಲ್ಲೇ ಪೊಲೀಸ್ ಸ್ಟೇಷನ್ ಸಿಕ್ಕಿತು. ಅಲ್ಲಿಗೆ ಹೋಗುತ್ತಲೆ ಪೊಲೀಸ್ ಸೂಪರಿಂಟೆಂಡೆಂಟರು ನಮಗಾಗಿ ಕಾದಿದ್ದರು. ಪೊಲೀಸ್ ಸ್ಟೇಷನ್‌ನಲ್ಲಿ ನನಗೆ ಆಶ್ರಯ ಕೊಡುವುದಾಗಿ ತಿಳಿಸಿದರು. ಅವರ ಸಹಾಯಕ್ಕಾಗಿ ವಂದಿಸಿ "ನಾನು ಮನೆಯನ್ನು ಸೇರಲೇ ಬೇಕು. ಡರ್ಬಾನಿನ ನಾಗರಿಕರ ನ್ಯಾಯಪರತೆಯಲ್ಲೂ ನನ್ನ ಕಾರ್ಯದ ನ್ಯಾಯಪರತೆಯಲ್ಲೂ ನನಗೆ ನಂಬಿಕೆ ಇದೆ. ನೀವು ಕಳುಹಿಸಿದ ಪೊಲೀಸ್ ಪಡೆಯ ಸಹಾಯಕ್ಕಾಗಿ ವಂದಿಸುತ್ತೇನೆ. ಶ್ರೀಮತಿ ಅಲೆಗ್ಸಾಂಡರರೂ ನನ್ನ ರಕ್ಷಣೆಗೆ ಸಹಾಯಕರಾದರು" ಎಂದು ತಿಳಿಸಿದೆ.

ಮಧ್ಯೆ ಏನೂ ತೊಂದರೆ ಇಲ್ಲದೆ ರುಸ್ತುಂಜಿ ಮನೆ ಸೇರಿದೆ. ಅಷ್ಟು ಹೊತ್ತಿಗೆ ಸಂಜೆಯಾಗಿತ್ತು. 'ಕೂರ್ಲೆಂಡ್' ಹಡಗಿನ ವೈದ್ಯಾಧಿಕಾರಿಯಾದ ಡಾಕ್ಟರ್ ಡ್ಯಾಡಿ ಬಾರ್ಜರ್ ನನಗೆ ಚಿಕಿತ್ಸೆ ಮಾಡಿದರು. ನನ್ನ ಗಾಯಗಳನ್ನು ಪರೀಕ್ಷಿಸಿದರು. ಹೆಚ್ಚು ಗಾಯವಾಗಿರಲಿಲ್ಲ. ಒಂದು ಮೂಕಪೆಟ್ಟು ಮಾತ್ರ ಬಹಳ ಬಾಧಿಸುತ್ತ ಇತ್ತು. ಆದರೆ ನನಗೆ ಇನ್ನೂ ಶಾಂತಿ ದೊರೆಯುವಂತೆ ಇರಲಿಲ್ಲ. ಸೇಟ್ ರುಸ್ತುಂಜಿಯವರ ಮನೆಯ ಮುಂದೆ ಸಾವಿರಾರು। ಯೂರೋಪಿಯನರು ಸೇರಿದರು. ಕತ್ತಲಾದ ಮೇಲೆ ಅವರೊಂದಿಗೆ ಪುಂಡರೂ ಸೇರಿದರು. ನನ್ನನ್ನು ಅವರಿಗೆ ಒಪ್ಪಿಸದೆ ಹೋದರೆ ಅವರ ಮನೆಗೆ ಬೆಂಕಿಹಚ್ಚಿ ನನ್ನೊಂದಿಗೆ ಅವರನ್ನೂ ಸುಟ್ಟು ಬಿಡುವುದಾಗಿ ರುಸ್ತುಂಜಿಯವರಿಗೆ ಆ ಗುಂಪು ಹೇಳಿ ಕಳುಹಿಸಿತು. ಸೇಟ್ ರುಸ್ತುಂಜಿಯವರು ಈ ಬೆದರಿಕೆಗೆ ಎದೆಗೆಡುವಂಥ ಜಳ್ಳು ಭಾರತೀಯನಾಗಿರಲಿಲ್ಲ. ಸೂಪರಿಂಟೆಂಡೆಂಟ್ ಅಲೆಕ್ಸಾಂಡರಿಗೆ ಈ ವರ್ತಮಾನ ತಿಳಿದೊಡನೆ ಕೆಲವು ಗುಪ್ತ ಪೊಲೀಸಿನವರೊಂದಿಗೆ ಬಂದು ಅವರೂ ಜನರ ಗುಂಪನ್ನು ಸೇರಿದರು. ಒಂದು ಬೆಂಚು ತರಿಸಿ ಅದರ ಮೇಲೆ

ನಿಂತರು. ಗುಂಪಿಗೆ ಮಾತನಾಡುವ ನೆಪದಲ್ಲಿ ರುಸ್ತುಂಜಿಯವರ ಮನೆಯ ಒಳಕ್ಕೆ ಯಾರೂ ಬರದಂತೆಯೂ, ಹೊರಗೆ ಯಾರೂ ಹೋಗದಂತೆಯೂ, ಹೆಬ್ಬಾಗಿಲಿನಲ್ಲಿ ಕಾವಲು ನಿಂತು, ಬಾಗಿಲನ್ನು ತಮ್ಮ ಹತೋಟಿಗೆ ತೆಗೆದು ಕೊಂಡರು. ಅಲ್ಲಿಗೆ ಬಂದ ಒಡನೆ ಅವರ ಕೆಳಗಿನ ನೌಕರರೊಬ್ಬರಿಗೆ ಭಾರತೀಯನಂತೆ ಮುಖಕ್ಕೆ ಬಣ್ಣ ಹಚ್ಚಿಕೊಂಡು, ಭಾರತೀಯ ಉಡುಪನ್ನು ಧರಿಸಿ, ಭಾರತೀಯ ವ್ಯಾಪಾರಿಯಂತೆ ವೇಷ ಹಾಕಿಕೊಂಡು, ಒಳಗೆ ಹೋಗಿ ನನ್ನನ್ನು ನೋಡಿ, ಈ ರೀತಿ ವರ್ತಮಾನ ಕೊಡಬೇಕಾಗಿ ತಿಳಿಸಿದ್ದರು. "ನಿನ್ನ ಸ್ನೇಹಿತ, ಆತನ ಅತಿಥಿಗಳು, ಆಸ್ತಿ ಮತ್ತು ನಿನ್ನ ಮನೆಯವರನ್ನು ಉಳಿಸಿಕೊಳ್ಳಲು ನಿನಗೆ ಇಷ್ಟವಿರುವುದಾದರೆ ಒಬ್ಬ ಭಾರತೀಯ ಪೊಲೀಸಿನವನಂತೆ ವೇಷ ಬದಲಾಯಿಸಿ, ರುಸ್ತುಂಜಿಯವರ ಗಡಂಗಿನ ಮೂಲಕ ಹೊರಗೆ ಬಾ, ನನ್ನ ನೌಕರನೊಂದಿಗೆ ಗುಂಪಿನ ಮಧ್ಯೆ ಹಾದು ಪೊಲೀಸ್ ಸ್ಟೇಷನ್ ಹೋಗಿ ಸೇರು. ಬೀದಿಯ ಹೊರ ಗಡೆ ಮೂಲೆಯಲ್ಲಿ ನಿನಗಾಗಿ ಒಂದು ಗಾಡಿ ಕಾದಿದೆ. ನಿನ್ನನ್ನೂ ಇತರ ರನ್ನೂ ಕಾಪಾಡಲು ನನಗಿರುವುದು ಇದೊಂದೇ ಮಾರ್ಗ. ಜನರ ಗುಂಪು ಉದ್ರೇಕಗೊಂಡಿರುವುದರಿಂದ ಹತೋಟಿಗೆ ತರಲು ನನ್ನಿಂದ ಸಾಧ್ಯವಿಲ್ಲ. ನನ್ನ ಸಲಹೆಗಳನ್ನು ಕೂಡಲೆ ನೀನು ಕೇಳದೆ ಹೋದರೆ ಈ ಗುಂಪು ರುಸ್ತುಂಜಿಯವರ ಮನೆಯನ್ನು ನೆಲಸಮ ಮಾಡುವುದು ಖಂಡಿತ. ಎಷ್ಟು ಜನರು ಪ್ರಾಣಕೊಡಬೇಕಾಗುತ್ತದೆ, ಎಷ್ಟು ಆಸ್ತಿ ಹಾಳಾಗುತ್ತದೆ ಎಂಬು ದನ್ನು ಊಹಿಸಲು ನನ್ನಿಂದ ಅಸಾಧ್ಯ."

ಪರಿಸ್ಥಿತಿ ಕೂಡಲೆ ನನಗೆ ಗೊತ್ತಾಯಿತು. ಒಬ್ಬ ಕಾನ್‌ಸ್ಟೆಬಲ್ ನಂತೆ ವೇಷ ಬದಲಾಯಿಸಿಕೊಂಡು ಕೂಡಲೆ ರುಸ್ತುಂಜಿಯವರ ಮನೆ ಯನ್ನು ಬಿಟ್ಟೆ. ಪೊಲೀಸ್ ಅಧಿಕಾರಿಯೂ ನಾನೂ ಸುರಕ್ಷಿತವಾಗಿ ಪೊಲೀಸ್ ಸ್ಟೇಷನ್ ಸೇರಿದೆವು. ಈ ಮಧ್ಯೆ ಅಲೆಕ್ಸಾಂಡರರು ಜನ ಪ್ರಿಯವಾದ ಹಾಡುಗಳನ್ನು ಹಾಡುತ್ತ, ಹರಟೆ ಕೊಚ್ಚುತ್ತ, ಜನರ ಗುಂಪನ್ನು ಹತೋಟಿಯಲ್ಲಿಟ್ಟಿದ್ದರು. ನಾನು ಪೊಲೀಸ್ ಸ್ಟೇಷನ್ ಸೇರಿದ್ದೇನೆಂದು ತಿಳಿದ ಒಡನೆ ಗಂಭೀರವಾಗಿ ಗುಂಪನ್ನು ಕೇಳಿದರು.

"ನಿಮಗೆ ಏನು ಬೇಕು?"

"ನಮಗೆ ಗಾಂಧಿ ಬೇಕು."

"ಆತನನ್ನು ಏನು ಮಾಡುತ್ತೀರಿ?"

"ಆತನನ್ನು ಸುಟ್ಟುಬಿಡುತ್ತೇವೆ."

"ಆತನು ನಿಮಗೆ ಏನು ಕೆಡುಕು ಮಾಡಿದ್ದಾನೆ?"

"ಹಿಂದೂಸ್ಥಾನದಲ್ಲಿ ನಮ್ಮನ್ನು ದೂಷಿಸಿದ್ದಾನೆ. ನೇಟಾಲಿನಲ್ಲಿ ಭಾರತೀಯರನ್ನು ತುಂಬಬೇಕೆಂದಿದ್ದಾನೆ."

"ಆತನು ಬಾರದಿದ್ದರೆ ಏನು ಮಾಡುತ್ತೀರಿ?"

"ಈ ಮನೆಯನ್ನೇ ಸುಟ್ಟುಬಿಡುತ್ತೇವೆ."

"ಆತನ ಹೆಂಡತಿ ಮಕ್ಕಳು ಇಲ್ಲಿ ಇದ್ದಾರೆ. ಅಲ್ಲದೆ ಬೇರೆ ಜನರೂ ಸ್ತ್ರೀಯರೂ ಇದ್ದಾರೆ. ಹೆಂಗಸರನ್ನೂ ಮಕ್ಕಳನ್ನೂ ಸುಡಲು ನಿಮಗೆ ನಾಚಿಕೆಯಾಗುವುದಿಲ್ಲವೆ?"

"ಅದರ ಹೊಣೆ ಎಲ್ಲವೂ ನಿಮ್ಮದು. ನಮ್ಮನ್ನು ನಿಸ್ಸಹಾಯಕರಾಗುವಂತೆ ಮಾಡಿದರೆ ನಾವೇನು ಮಾಡೋಣ? ಬೇರೆ ಯಾರನ್ನೂ ನೋಯಿಸಲು ನಮಗೆ ಇಷ್ಟವಿಲ್ಲ. ಗಾಂಧಿಯೊಬ್ಬನನ್ನು ನಮಗೆ ನೀವು ಕೊಟ್ಟುಬಿಟ್ಟರೆ ಸಾಕು. ಆ ಘಾತುಕನನ್ನು ನೀವು ನಮಗೆ ಒಪ್ಪಿಸದೆ, ಆತನನ್ನು ನಾವು ಸೆರೆ ಹಿಡಿಯುವುದರಲ್ಲಿ ಇತರರಿಗೆ ಗಾಯವಾದರೆ ನೀವು ನಮ್ಮನ್ನು ದೂರುವುದು ಯಾವ ನ್ಯಾಯ?"

ಸೂಪರಿಂಟೆಂಡೆಂಟರು ಹುಸಿನಗೆಯನ್ನು ನಕ್ಕು, ನಾನು ರುಸ್ತುಂಜಿಯವರ ಮನೆಯನ್ನು ಬಿಟ್ಟು ಹೊರಟುಹೋಗಿರುವೆನೆಂದೂ ಅವರ ಮಧ್ಯವೇ ಹಾಯ್ದುಹೋದೆನೆಂದೂ ಬೇರೆ ಸ್ಥಳವನ್ನು ಸೇರಿದ್ದೇನೆಂದೂ ಆ ಗುಂಪಿಗೆ ತಿಳಿಸಿದರು. ಆ ಗುಂಪು ಗಟ್ಟಿಯಾಗಿ ಅಪಹಾಸ್ಯ ಮಾಡಿ ನಕ್ಕು, "ಅದು ಸುಳ್ಳು, ಅದು ಸುಳ್ಳು" ಎಂದು ಕೂಗಿತು.

ಆಗ ಸೂಪರಿಂಟೆಂಡೆಂಟರು "ನಿಮ್ಮ ವೃದ್ಧ ಸೂಪರಿಂಟೆಂಡೆಂಟರನ್ನು ನಂಬದೆಹೋದರೆ, ನಿಮ್ಮ ಪೈಕಿ ಮೂರು ನಾಲ್ಕು ಜನರ ಒಂದು ಸಣ್ಣ ಸಮಿತಿಯನ್ನು ನೇಮಿಸಿ, ಬಾಕಿಯವರಾರೂ ಮನೆಯ ಒಳಗೆ ಪ್ರವೇಶಿಸುವುದಿಲ್ಲವೆಂದೂ ಸಮಿತಿಯವರು ಗಾಂಧಿಯನ್ನು ಹುಡುಕಲು ಸಾಧ್ಯವಾಗದಿದ್ದರೆ ನೀವುಗಳೆಲ್ಲ ಶಾಂತರೀತಿಯಲ್ಲಿ ಮನೆಗೆ ಹಿಂದಿರುಗುತ್ತೇವೆ ಎಂದೂ

ಭರವಸೆ ಕೊಡಿ. ನೀವುಗಳೆಲ್ಲರೂ ಈ ದಿನ ಕೋಪ ತಾಳಿ ಪೊಲೀಸಿನವರ ಮಾತನ್ನು ಕೇಳಿರುವುದಿಲ್ಲ. ಈ ಅಪಮಾನ ಪೊಲೀಸಿನವರದಲ್ಲ; ನಿಮ್ಮದು. ಆದ್ದರಿಂದ ಪೊಲೀಸಿನವರು ನಿಮ್ಮ ಮೇಲೆ ಒಂದು ಉಪಾಯ ವನ್ನು ಹೂಡಬೇಕಾಯಿತು. ನಿಮ್ಮ ಮಧ್ಯ ಇದ್ದ ಬೇಟೆಯನ್ನು ಸ್ಥಳಾಂತರ ಮಾಡಿದರು; ಈಗ ನಿಮಗೆ ಬೇಟೆ ಇಲ್ಲವಾಯಿತು. ಇದಕ್ಕಾಗಿ ನೀವು ನಿಜವಾಗಿಯೂ ಪೊಲೀಸಿನವರನ್ನು ದೂರಲಾರಿರಿ. ನೀವೇ ನೇಮಿಸಿದ ಪೊಲೀಸಿನವರು ಅವರ ಕರ್ತವ್ಯವನ್ನು ಪಾಲಿಸಿದ್ದಾರೆ" ಎಂದು ಹೇಳಿದರು.

ಸೂಪರಿಂಟೆಂಡೆಂಟರ ದೃಢಮನಸ್ಸು ಮತ್ತು ನಯವಾದ ಮಾತು ಗಳಿಂದ ಅವರು ಕೇಳಿದಂತೆ ಆ ಗುಂಪು ಭರವಸೆ ಕೊಟ್ಟಿತು. ಒಂದು ಸಮಿತಿಯನ್ನು ನೇಮಿಸಿದರು. ರುಸ್ತುಂಜಿಯವರ ಮನೆಯನ್ನು ಆದ್ಯಂತ ಹುಡುಕಿದರು. ಸೂಪರಿಂಟೆಂಡೆಂಟರು ಹೇಳಿದ್ದು ನಿಜವೆಂದೂ ತಮ್ಮನ್ನು ಅವರು ಸೋಲಿಸಿರುತ್ತಾರೆಂದೂ ತಿಳಿಸಿದರು. ಗುಂಪಿಗೆ ಬಹಳ ಅಸಮಾ ಧಾನವಾಯಿತು. ಆದರೆ ಕೊಟ್ಟ ಮಾತಿನಂತೆ ಯಾವ ಕೇಡನ್ನೂ ಮಾಡದೆ ಚದರಿತು. ಇದು ನಡೆದುದು ೧೮೯೭ ನೆಯ ಜನವರಿ ೧೩ ನೆಯ ತಾರೀಖಿನ ದಿನ.

ಅದೇ ಬೆಳಗ್ಗೆ, ಹಡಗುಗಳ ಮೇಲಿನ ನಿರ್ಬಂಧವನ್ನು ತೆಗೆದ ಒಡನೆ ಡರ್ಬಾನಿನ ವೃತ್ತಪತ್ರಿಕೆಯ ಬಾತ್ಮೀದಾರನೊಬ್ಬನು ನನ್ನನ್ನು ಹಡಗಿನ ಮೇಲೆಯೇ ನೋಡಿದ್ದನು. ಆತನು ನನ್ನಿಂದ ಎಲ್ಲವನ್ನೂ ವಿಚಾರಿಸಿ ತಿಳಿದುಕೊಂಡಿದ್ದನು. ನನ್ನ ಮೇಲಿನ ಆಪಾದನೆಗಳಿಗೆ ಸಮಾಧಾನವಾಗು ವಂತೆ ಆತನಿಗೆ ಉತ್ತರ ಹೇಳುವುದು ಸುಲಭವಾಗಿತ್ತು. ನಾನು ಸ್ವಲ್ಪವೂ ಉತ್ಪ್ರೇಕ್ಷೆ ಮಾಡಿಲ್ಲವೆಂದು ಆತನಿಗೇ ವಿವರಿಸಿ ತೋರಿಸಿದೆ. ನನ್ನ ಕರ್ತವ್ಯವನ್ನು ಮಾತ್ರ ನಾನು ಮಾಡಿ ಇದ್ದೆ. ಅಷ್ಟೂ ಮಾಡದೇ ಹೋಗಿದ್ದರೆ ಮಾನವ ಕುಲಕ್ಕೆ ನಾನು ಕಳಂಕಪ್ರಾಯನಾಗುತ್ತಿದ್ದೆ. ಮಾರನೆಯ ದಿನ ಇವೆಲ್ಲವೂ ವೃತ್ತಪತ್ರಿಕೆಯಲ್ಲಿ ಬಂದಿತು. ಯೂರೋ ಪಿಯನರಲ್ಲಿ ತಿಳಿದವರು ತಪ್ಪನ್ನು ಒಪ್ಪಿಕೊಂಡರು. ವೃತ್ತಪತ್ರಿಕೆಗಳು ನೇಟಾಲ್ ಯೂರೋಪಿಯನರ ವಾದಕ್ಕೆ ಸಹಾನುಭೂತಿಯನ್ನು ತೋರಿ

ಸಿದರೂ ನನ್ನ ಕಾರ್ಯವನ್ನು ಶ್ಲಾಘಿಸಿದರು. ಇದು ನನ್ನ ಮತ್ತು ಭಾರತೀಯರ ಗೌರವವನ್ನು ಹೆಚ್ಚಿಸಿತು; ಭಾರತೀಯರು ಬಡವರಾಗಿದ್ದರೂ ಹೇಡಿಗಳಲ್ಲವೆಂದೂ ಭಾರತೀಯ ವರ್ತಕರು ಯಾವ ನಷ್ಟವನ್ನೂ ಲೆಕ್ಕಿಸದೆ ತಮ್ಮ ಆತ್ಮಗೌರವಕ್ಕೂ ತಮ್ಮ ದೇಶವಾತ್ಸಲ್ಯಕ್ಕೂ ಕಾದಾಡಬಲ್ಲರೆಂದೂ ತೋರಿಸಿಕೊಟ್ಟಿತು.

ಈ ರೀತಿ ಭಾರತೀಯರು ಬಹುಮುಖವಾಗಿ ಕಷ್ಟಪಟ್ಟರೂ, ದಾದಾ ಅಬ್ದುಲ್ಲಾರವರಿಗೆ ನಷ್ಟವಾದರೂ ಅಂತ್ಯಪರಿಣಾಮ ಫಲಕಾರಿಯಾಗಿತ್ತೆಂದು ನನ್ನ ನಂಬಿಕೆ. ತಮ್ಮ ಸ್ವಶಕ್ತಿಯನ್ನು ಅಳೆಯಲು ಒಂದು ಅವಕಾಶ ದೊರೆಯಿತು; ಅದರ ಪರಿಣಾಮವಾಗಿ ಆತ್ಮವಿಶ್ವಾಸ ಹೆಚ್ಚಾಯಿತು. ಅಂದಿನ ಅನುಭವ ಬಹು ಬೆಲೆಯುಳ್ಳದ್ದು. ಆ ದಿನವನ್ನು ಈಗಲೂ ನೆನೆಸಿಕೊಂಡರೆ ಸತ್ಯಾಗ್ರಹ ಸಾಧನೆಗೆ ದೇವರು ನನ್ನನ್ನು ತಯಾರಿಸುತ್ತಿದ್ದನೆಂದು ಭಾವಿಸುತ್ತೇನೆ.

ನೇಟಾಲಿನಲ್ಲಿ ನಡೆದ ವಿದ್ಯಮಾನಗಳ ಪ್ರಭಾವ ಇಂಗ್ಲೆಂಡಿನ ಮೇಲೂ ಆಯಿತು. ವಲಸೆ ರಾಷ್ಟ್ರಗಳ ಕಾರ್ಯದರ್ಶಿಗಳಾದ ಚೇಂಬರ್ಲಿನ್‌ರು ನನ್ನಮೇಲೆ ಕೈಮಾಡಿದವರ ಮೇಲೆ ಮೊಖದ್ದಮೆ ಹೂಡಬೇಕೆಂದೂ ನನಗೆ ನ್ಯಾಯ ದೊರೆಯುವಂತೆ ಕಾರ್ಯಕ್ರಮ ಕೈಗೊಳ್ಳಬೇಕೆಂದೂ ವಾರ್ತೆ ಕಳುಹಿಸಿದರು.

ನೇಟಾಲ್ ಸರಕಾರದ ಅಟಾರ್ನಿ ಜನರಲ್ ಆದ ಎಸ್ಕಾಮ್‌ರು ನನ್ನನ್ನು ಕರೆಸಿದರು. ಚೇಂಬರ್ಲಿನ್‌ರ ಕೇಬಲ್ ವಿಷಯ ನನಗೆ ತಿಳಿಸಿದರು. ನನಗೆ ಆದ ಗಾಯಗಳಿಗೆ ವ್ಯಸನವನ್ನು ಸೂಚಿಸಿ, ಗಾಯಗಳು ಅಷ್ಟು ಅಪಾಯಕರವಾಗಿಲ್ಲದ್ದಕ್ಕೆ ಸಂತೋಷವನ್ನು ವ್ಯಕ್ತಪಡಿಸಿದರು. "ನಿಮಗೇ ಆಗಲಿ ನಿಮ್ಮ ಜನರಿಗೇ ಆಗಲಿ ಯಾರಿಗೂ ಗಾಯವಾಗಬೇಕೆಂದು ನನ್ನ ಇಷ್ಟವಿರಲಿಲ್ಲ. ಪ್ರಾಯಶಃ ನಿಮಗೆ ಅಪಾಯವಾಗಬಹುದೆಂದೇ ರಾತ್ರಿಯಲ್ಲಿ ಹಡಗಿಳಿಯಬೇಕೆಂದು ನಾನು ಹೇಳಿ ಕಳಿಸಿದೆ. ನನ್ನ ಸಲಹೆಯನ್ನು ನೀವು ಕೇಳಲಿಲ್ಲ. ಲಾಫ್ಟನ್ನರ ಮಾತಿನಂತೆ ನಡೆದುದಕ್ಕೆ ನಾನು ನಿಮ್ಮನ್ನು ಸ್ವಲ್ಪವೂ ಆಕ್ಷೇಪಿಸುವುದಿಲ್ಲ. ನಿಮಗೆ ಯಾವುದು ಸರಿ ಎಂದು ತೋರಿತೊ ಅದರಂತೆ ಮಾಡಲು ನಿಮಗೆ ಹಕ್ಕು

ಇದೆ. ನೇಟಾಲ್ ಸರಕಾರದವರು ಚೇಂಬರ್ಲೇನ್‌ರ ಕೋರಿಕೆಯನ್ನು ಪೂರ್ಣ ಪಾಲಿಸುತ್ತಾರೆ. ತಪ್ಪಿತಸ್ಥರನ್ನು ಶಿಕ್ಷೆಗೆ ಗುರಿಪಡಿಸಬೇಕೆಂದು ನಮ್ಮ ಇಷ್ಟ. ನಿಮ್ಮನ್ನು ಹೊಡೆದವರನ್ನು ಗುರುತಿಸಲು ನಿಮಗೆ ಸಾಧ್ಯವೆ ?" ಎಂದು ಕೇಳಿದರು.

"ಒಬ್ಬಿಬ್ಬರನ್ನು ನಾನು ಗುರುತಿಸಬಹುದು. ಈ ಸಂಭಾಷಣೆಗೆ ಮುಂಚೆಯೇ ನನ್ನಮೇಲೆ ಕೈಮಾಡಿದವರನ್ನು ಕುರಿತು ಕ್ರಮ ನಡಸಬಾರದೆಂದು ನಾನು ತೀರ್ಮಾನಿಸಿದ್ದೇನೆಂದು ಹೇಳಬಯಸುತ್ತೇನೆ. ತಪ್ಪು ಅವರದೆಂದು ನಾನು ಹೇಳಲಾರೆ. ಅವರ ಮುಖಂಡರು ತಿಳಿಸಿದ ವಿಷಯಗಳನ್ನು ನಿಜವೆಂದು ಅವರು ನಂಬಿದರು. ಅದು ಸರಿಯೇ ತಪ್ಪೇ ಎಂಬುದನ್ನು ಅವರ ತೀರ್ಮಾನಕ್ಕೆ ಬಿಡುವುದು ತಪ್ಪು. ನನ್ನ ವಿಷಯವಾಗಿ ಅವರು ಕೇಳಿದ್ದೆಲ್ಲ ನಿಜವಾಗಿದ್ದರೆ ಅವರು ಉದ್ರೇಕಗೊಂಡು, ಆ ಕೋಪದ ಭರದಲ್ಲಿ ತಪ್ಪುಮಾಡುವುದು ಸ್ವಾಭಾವಿಕ. ಅದಕ್ಕೆ ನಾನು ಅವರನ್ನು ದೂಷಿಸಲಾರೆ. ಉದ್ರೇಕಗೊಂಡ ಜನಗಳ ಗುಂಪು ನ್ಯಾಯ ತೀರಿಸುವ ಬಗೆಯೇ ಹಾಗೆ. ಯಾರದಾದರೂ ತಪ್ಪಿದ್ದರೆ ಅದು ಯೂರೋಪಿಯನ್ ಸಮಿತಿಯವರದು, ನಿಮ್ಮದು, ಮತ್ತು ನೇಟಾಲ್ ಸರಕಾರದ್ದು. ರಾಯಿಟರ್ ಸುದ್ದಿಗಾರನು ಉತ್ಪ್ರೇಕ್ಷೆಮಾಡಿ, ನಿಜವನ್ನು ವಿರೂಪಪಡಿಸಿ ವರ್ತಮಾನ ಕಳುಹಿಸಿರಬಹುದು. ಆದರೆ ನಾನೇ ನೇಟಾಲಿಗೆ ಬರುತ್ತಿದ್ದೇನೆಂದು ತಿಳಿದಮೇಲೆ, ಹಿಂದೂಸ್ಥಾನದಲ್ಲಿ ನಾನು ನಡಸಿದ ಪ್ರಚಾರದ ವಿಷಯವಾಗಿ ನಿಮಗಿದ್ದ ಸಂಶಯನಿವಾರಣೆಗೆ ನನ್ನನ್ನೇ ಪ್ರಶ್ನೆಮಾಡಬೇಕಾದ್ದು ನಿಮ್ಮ ಮತ್ತು ನಿಮ್ಮ ಸಮಿತಿಯ ಕರ್ತವ್ಯವಾಗಿತ್ತು. ನಾನು ಏನು ವಿವರಣೆ ಹೇಳುತ್ತೇನೆಂದು ಕೇಳಿ ಆಮೇಲೆ ಯುಕ್ತವೆನಿಸಿದ ಕಾರ್ಯವನ್ನು ಕೈಗೊಳ್ಳಬಹುದಾಗಿತ್ತು. ನಿಮ್ಮನ್ನೇ ಆಗಲಿ, ನಿಮ್ಮ ಸಮಿತಿಯನ್ನೇ ಆಗಲಿ ನಾನು ವ್ಯವಹಾರಕ್ಕೆ ಗುರಿಮಾಡುವಂತೆ ಇಲ್ಲ. ಅದು ಸಾಧ್ಯವಾದರೂ ನ್ಯಾಯಸ್ಥಾನದಲ್ಲಿ ಪರಿಹಾರ ಪಡೆಯುವುದು ನನಗೆ ಇಷ್ಟವಿಲ್ಲ. ಯೂರೋಪಿಯನರ ಹಕ್ಕುಬಾಧ್ಯತೆಗಳ ರಕ್ಷಣೆಗೆ ಅವಶ್ಯವೆನಿಸಿದ ಕಾರ್ಯಕ್ರಮಗಳನ್ನೆಲ್ಲ ನೀವು ಕೈಗೊಂಡಿರಿ. ಅದು ರಾಜಕೀಯ ವಿಚಾರ. ಯೂರೋಪಿಯನರಿಗೆ ಸ್ವಲ್ಪವೂ ಅಪಾಯ

ವನ್ನುಂಟುಮಾಡದೆ, ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಅಧಿಕ ಪ್ರಮಾಣದ ಜನಸಂಖ್ಯೆಯ ಭಾರತೀಯರು, ತಮ್ಮ ಆತ್ಮಗೌರವವನ್ನೂ ಹಕ್ಕುಬಾಧ್ಯತೆಗಳನ್ನೂ ಕಾಪಾಡಿಕೊಳ್ಳಲು ಬದ್ಧಕಂಕಣರೆಂದು ನಿಮಗೂ ಇತರ ಯೂರೋಪಿಯನರಿಗೂ ತೋರಿಸಲು ನಿಮ್ಮೊಂದಿಗೆ ನಾನು ರಾಜಕೀಯ ಕ್ಷೇತ್ರದಲ್ಲಿ ಕಾದಾಡಬೇಕಾಗಿದೆ" ಎಂದು ಹೇಳಿದೆ.

ಎಸ್ಕಾಮ್‌ರು "ನೀವು ಹೇಳುವುದು ನನಗೆ ಅರ್ಥವಾಗುತ್ತದೆ, ಮತ್ತು ನಾನು ಅದನ್ನು ಗೌರವಿಸುತ್ತೇನೆ. ನಿಮ್ಮ ಹಂತಕರನ್ನು ನೀವು ನ್ಯಾಯಸ್ಥಾನದಲ್ಲಿ ವಿಚಾರಣೆಗೆ ಗುರಿಪಡಿಸುವುದಿಲ್ಲವೆಂದು ತಿಳಿಯಲು ಸಿದ್ಧನಿರಲಿಲ್ಲ. ಅವರನ್ನು ವಿಚಾರಣೆಗೆ ಗುರಿಪಡಿಸಿದ್ದರೆ ನನಗೆ ಸ್ವಲ್ಪವೂ ವ್ಯಸನವಾಗುತ್ತಿರಲಿಲ್ಲ. ಮೊಕದ್ದಮೆ ಹೂಡಲಾಗದೆಂದು ನೀವು ತೀರ್ಮಾನಿಸಿರುವುದು ನನ್ನ ಅಭಿಪ್ರಾಯದಲ್ಲಿ ಸರಿಯಾದ ತೀರ್ಮಾನ. ನಿಮ್ಮ ಆತ್ಮಸಂಯಮದಿಂದ ನಿಮ್ಮ ಜನರಿಗೆ ಬಹು ದೊಡ್ಡ ಉಪಕಾರವಾಗುತ್ತದೆ. ನಿಮ್ಮ ತೀರ್ಮಾನದಿಂದ ನೇಟಾಲ್ ಸರಕಾರದವರು ಸಿಕ್ಕಿರುವ ಸಂದಿಗ್ಧ ಸನ್ನಿವೇಶದಿಂದಲೂ ಪಾರಾಗುತ್ತಾರೆ. ನೀವು ಇಷ್ಟಪಟ್ಟರೆ ನಿಮ್ಮ ಹಂತಕರನ್ನು ನೇಟಾಲ್ ಸರಕಾರದವರು ದಸ್ತಗಿರಿ ಮಾಡಲು ಸಿದ್ಧರಿದ್ದಾರೆ. ಆದರೆ ಅದರಿಂದ ಯೂರೋಪಿಯನರು ಉದ್ರಿಕ್ತರಾಗುವರೆಂದೂ ಸರಕಾರದಮೇಲೆ ಸಹಿಸಲಾಗದ ಟೀಕೆಗಳಿಗೆ ಅವಕಾಶವಾಗುವುದೆಂದೂ ನಿಮಗೆ ತಿಳಿಸುವುದು ಅನಾವಶ್ಯಕ. ಮೊಕದ್ದಮೆ ಹೂಡಬಾರದೆಂದು ನೀವು ಕಟ್ಟಕಡೆಯ ತೀರ್ಮಾನಕ್ಕೆ ಬಂದಿದ್ದರೆ ಅದೇ ನಿಮ್ಮ ಇಷ್ಟವೆಂದು ಒಂದು ಪತ್ರವನ್ನು ನನಗೆ ಬರೆಯುವುದು ಆವಶ್ಯಕ. ನಮ್ಮ ಸಂಭಾಷಣೆಯ ಸಾರಾಂಶವನ್ನು ಮಾತ್ರ ಚೇಂಬರ್ಲಿನ್‌ರಿಗೆ ಕಳಿಸಿ, ನನ್ನ ಸರಕಾರವನ್ನು ನಾನು ಸಮರ್ಥಿಸುವಹಾಗಿಲ್ಲ. ನಿಮ್ಮ ಪತ್ರದ ಸಾರಾಂಶವನ್ನು ಕೇಬಲ್ ಮಾಡಬಲ್ಲೆ. ನಿಮ್ಮ ಪತ್ರವನ್ನು ಈಗಲೇ ಕೊಡಬೇಕಾಗಿಲ್ಲ. ನಿಮ್ಮ ಸ್ನೇಹಿತರ ಸಲಹೆ ಪಡೆದು,– ಲಾಫ್ಟನ್‌ರ ಆಲೋಚನೆಯನ್ನೂ ಕೇಳಬಹುದು – ಆ ರೀತಿ ಸಲಹೆ ಪಡೆದಮೇಲೂ ಮೊಕದ್ದಮೆ ಹೂಡಬಾರದೆಂಬುದೇ ನಿಮ್ಮ ಸಂಕಲ್ಪವಾದರೆ ನನಗೆ ಬರೆಯಿರಿ. ಆದರೆ ನೀವೇ, ನಿಮ್ಮ ಸ್ವಂತ ಇಚ್ಛೆಯಂತೆ, ನಿಮ್ಮ ಮೇಲೆ

ಕೈ ಮಾಡಿದವರನ್ನು ವಿಚಾರಣೆಗೆ ಗುರಿಪಡಿಸುವುದಿಲ್ಲವೆಂದು ತೀರ್ಮಾನಿಸಿರುವುದಾಗಿ ನಿಮ್ಮ ಪತ್ರದಲ್ಲಿರಬೇಕು. ಹಾಗಿದ್ದರೇನೆ ಅದರಿಂದ ನನಗೆ ಉಪಯೋಗ" ಎಂದು ಹೇಳಿದರು.

"ಈ ವಿಷಯವನ್ನು ಚರ್ಚಿಸಲು ಹೇಳಿಕಳುಹಿಸಿದ್ದಿರೆಂದು ನನಗೆ ಗೊತ್ತಿರಲಿಲ್ಲ. ನಾನು ಯಾರೊಂದಿಗೂ ಯೋಚನೆ ಮಾಡಿಲ್ಲ; ಮಾಡಬಯಸುವುದೂ ಇಲ್ಲ. ನಾನು ಹಡಗು ಇಳಿಯಬೇಕೆಂದು ನಿರ್ಧರಿಸಿ ಲಾಫ್ಟನ್‌ರೊಂದಿಗೆ ಹೊರಟಾಗಲೇ ನನಗೇನಾದರೂ ಅಪಾಯವಾದರೆ ಅದನ್ನು ಮನಸ್ಸಿಗೆ ತಂದುಕೊಳ್ಳಬಾರದಾಗಿ ತೀರ್ಮಾನಿಸಿದ್ದೆ. ನನ್ನ ಅತ್ಯಾಚಾರಿಗಳನ್ನು ಆಪಾದನೆಗೆ ಗುರಿಪಡಿಸುವ ಪ್ರಶ್ನೆಯೇ ಈಗ ಇಲ್ಲ. ಇದು ನನಗೆ ಒಂದು ಧಾರ್ಮಿಕ ಪ್ರಶ್ನೆ. ಈ ರೀತಿ ನಡೆಯುವುದರಿಂದ ನನ್ನ ಮತ್ತು ನನ್ನ ಜನರ ಕೆಲಸಕ್ಕೆ ಸಹಾಯವಾಗುವುದೆಂದು ನೀವು ಹೇಳುವುದನ್ನು ನಾನು ಒಪ್ಪುತ್ತೇನೆ. ಆದ್ದರಿಂದ ಎಲ್ಲ ಜವಾಬ್ದಾರಿಯನ್ನೂ ನಾನೇ ವಹಿಸಿಕೊಂಡು ನಿಮಗೆ ಬೇಕಾದ ಪತ್ರ ಈಗಲೇ ಕೊಡುತ್ತೇನೆ" ಎಂದು ಹೇಳಿದೆ. ಅವರಿಂದಲೇ ಒಂದು ಕಾಗದ ತೆಗೆದುಕೊಂಡು ಅವರ ಇಷ್ಟದಂತೆ ಪತ್ರ ಬರೆದು ಅವರ ಕೈಗೆ ಕೊಟ್ಟೆ.

# ೮. ಸತ್ಯಾಗ್ರಹಕ್ಕೆ ಮುಂಚಿನ ಹೋರಾಟ

(ಮುಗಿದುದು)

## ಇಂಗ್ಲೆಂಡಿನಲ್ಲಿ ಕೆಲಸ

ಹಿಂದಿನ ಅಧ್ಯಾಯಗಳಲ್ಲಿ ಭಾರತೀಯರು, ತಮ್ಮ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳಲು ಹೇಗೆ ಪ್ರಯತ್ನಪಟ್ಟರು, ತಮ್ಮ ಗೌರವವನ್ನು ಹೇಗೆ ಹೆಚ್ಚಿಸಿಕೊಂಡರು ಎಂಬುದು ವಾಚಕರಿಗೆ ಗೊತ್ತಾಗಿದೆ. ತಮ್ಮ ಅಂತಃ ಶಕ್ತಿಯನ್ನು ಅಭಿವೃದ್ಧಿಪಡಿಸಿಕೊಳ್ಳುವ ಪ್ರಯತ್ನದೊಂದಿಗೆ ಭಾರತದಿಂದಲೂ ಇಂಗ್ಲೆಂಡಿನಲ್ಲಿ ಸಹಾನುಭೂತಿಯನ್ನು ಪಡೆಯಲು ಕೈಗೊಂಡ ಕಾರ್ಯಕ್ರಮವನ್ನು ತಿಳಿಸುವುದು ಮಾತ್ರ ಉಳಿದಿದೆ. ಮೊದಲು ಭಾರತದ ರಾಷ್ಟ್ರ ಮಹಾಸಭೆಯ ಬ್ರಿಟಿಷ್ ಸಮಿತಿಯೊಂದಿಗೆ ಸಂಬಂಧವಿಟ್ಟುಕೊಳ್ಳ

ಬೇಕಾದುದು ಅವಶ್ಯವಾಯಿತು. ಭಾರತದ ವೃದ್ಧ ಪಿತಾಮಹ ದಾದಾ ಭಾಯಿಯವರಿಗೂ, ಬ್ರಿಟಿಷ್ ಸಮಿತಿಯ ಅಧ್ಯಕ್ಷ ಸರ್ ವಿಲಿಯಮ್ ವೆಡರ್‌ಬರ್ನ್ನರಿಗೂ ಪೂರ್ಣ ವಿವರಗಳನ್ನು ಕೊಟ್ಟು ವಾರ ವಾರಕ್ಕೆ ಪತ್ರ ಬರೆಯಲಾರಂಭಿಸಿದೆವು. ಅರಿಕೆಗಳ ಪ್ರತಿಗಳನ್ನು ಕಳುಹಿಸಿದಾಗಲೆಲ್ಲ ಸಮಿತಿಯ ಟಪಾಲು ಖರ್ಚು ಮತ್ತು ಇನ್ನಿತರ ಸಾಧಾರಣ ವೆಚ್ಚಕ್ಕಾಗಿ ಹತ್ತು ಪೌಂಡುಗಳನ್ನಾದರೂ ಕಳುಹಿಸುತ್ತಿದ್ದೆವು.

ದಾದಾಭಾಯಿ ನವರೋಜಿಯವರ ಪವಿತ್ರ ನೆನಪೊಂದನ್ನು ಇಲ್ಲಿ ಹೇಳಬೇಕೆನ್ನಿಸುತ್ತದೆ. ಅವರು ಸಮಿತಿಯ ಅಧ್ಯಕ್ಷರಾಗಿರಲಿಲ್ಲ. ಆದರೂ ಮೊದಲು ನಾವು ಅವರಿಗೆ ಹಣ ಕಳುಹಿಸಿ, ಆ ಹಣವನ್ನು ಅವರು ಅಧ್ಯಕ್ಷರಿಗೆ ಕಳುಹಿಸುವುದೇ ಉಚಿತ ಮಾರ್ಗವೆಂದು ನಮಗೆ ತೋರಿತು. ಆದರೆ ದಾದಾಭಾಯಿಯವರು ಮೊದಲನೆಯ ಕಂತನ್ನೇ ಹಿಂದಕ್ಕೆ ಕಳುಹಿಸಿ ಸಮಿತಿಗೆ ಸಂಬಂಧಪಟ್ಟ ಎಲ್ಲ ಪತ್ರವ್ಯವಹಾರ ಮತ್ತು ಹಣವನ್ನೂ ನೇರವಾಗಿ ಸರ್ ವಿಲಿಯಮ್ ವೆಡರ್‌ಬರ್ನ್ನರವರಿಗೆ ಕಳುಹಿಸಬೇಕೆಂದು ಬರೆದರು. ಅವರೇ ನಮಗೆ ಎಲ್ಲ ಸಹಾಯವನ್ನೂ ಖಂಡಿತ ಮಾಡುವುದಾಗಿ ನಮಗೆ ತಿಳಿಸಿದರು. ಬ್ರಿಟಿಷ್ ಭಾರತದ ಸಮಿತಿಯ ಗೌರವ ಹೆಚ್ಚಬೇಕಾದರೆ ಮೊದಲು ನಾವು ಸರ್ ವಿಲಿಯಮ್ ರವರ ಮೂಲಕ ಸಮಿತಿಯ ಬಳಿ ಹೋಗಬೇಕು. ಅಲ್ಲದೆ ದಾದಾಭಾಯಿ ಯವರಿಗೆ ಬಹಳ ವಯಸ್ಸಾಗುತ್ತ ಬಂದಿದ್ದರೂ ಪತ್ರವ್ಯವಹಾರದಲ್ಲಿ ಬಹಳ ನಿಖರವಾಗಿದ್ದರು. ಅವರು ಉತ್ತರ ಬರೆಯಲು ಏನೂ ಇಲ್ಲ ದಿದ್ದರೂ ನಮ್ಮ ಪತ್ರಬಂದಿರುವುದಾಗಿ ತಿಳಿಸಿ ಒಂದೆರಡು ಪ್ರೋತ್ಸಾಹದ ಮಾತನ್ನು ಸೇರಿಸುತ್ತಿದ್ದರು. ಈ ಕಾಗದಗಳನ್ನು ಸ್ವತಃ ಬರೆದು ಅವರ ಪುಸ್ತಕದಲ್ಲಿ ನಕಲುಗಳನ್ನು ಇಟ್ಟುಕೊಳ್ಳುತ್ತಿದ್ದರು.

ನಮ್ಮ ಸಂಸ್ಥೆಯನ್ನು ಕಾಂಗ್ರೆಸ್ ಎಂದು ಕರೆದರೂ, ನಮ್ಮ ಕುಂದು ಕೊರತೆಗಳನ್ನು ಏಕಪಕ್ಷದ ಪ್ರಶ್ನೆಯಾಗಿ ಮಾಡಿಕೊಳ್ಳುವ ಇಷ್ಟ ಇರಲಿಲ್ಲವೆಂದು ಮೊದಲೇ ತಿಳಿಸಿದ್ದೇನೆ. ಆದ್ದರಿಂದ ದಾದಾಭಾಯಿ ಯವರಿಗೆ ತಿಳಿಸಿ ಇತರ ಪಕ್ಷಗಳ ಸದಸ್ಯರೊಂದಿಗೂ ನಾವು ವ್ಯವಹಾರ ನಡೆಸುತ್ತಿದ್ದೆವು. ಅವರಲ್ಲಿ ಸರ್ ಮಂಚೇರ್‌ಜಿ ಭಾವ್‌ನಗರಿ ಮತ್ತು

ಸರ್ ಡಬ್ಲ್ಯು. ಡಬ್ಲ್ಯು. ಹಂಟರ್ ಇವರು ಮುಖ್ಯರು. ಸರ್ ಮಂಚೇರ್‌ಜಿ ಯವರು ಆಗ ಪಾರ್ಲಿಮೆಂಟ್ ಸದಸ್ಯರಾಗಿದ್ದರು. ಅವರ ಸಹಾಯ ಬಹಳ ಅಮೂಲ್ಯವಾಗಿತ್ತು. ಅವರು ಯಾವಾಗಲೂ ನಮಗೆ ಬಹು ಒಳ್ಳೆಯ ಸಲಹೆಗಳನ್ನು ಕೊಡುತ್ತಿದ್ದರು. ಆದರೆ ದಕ್ಷಿಣ ಆಫ್ರಿಕದ ಭಾರತೀಯರ ಪ್ರಶ್ನೆಯ ಪ್ರಾಮುಖ್ಯತೆಯನ್ನು ಭಾರತೀಯರಿಗೂ ಮುಂಚೆ ತಿಳಿದಿದ್ದವ ರೆಂದರೆ, ಸರ್ ವಿಲಿಯಮ್ ವಿಲ್ಸನ್ ಹಂಟರ್ ಅವರು. ಅವರು 'ಟೈಮ್ಸ್' ಪತ್ರಿಕೆಯ ಭಾರತೀಯ ಶಾಖೆಯ ಸಂಪಾದಕರಾಗಿದ್ದರು. ಈ ಸಂಬಂಧವಾಗಿ ನಾವು ಅವರೊಡನೆ ಪತ್ರ ವ್ಯವಹಾರ ನಡಸಿದ ಕೂಡಲೆ 'ಟೈಮ್ಸ್' ಪತ್ರಿಕೆಯಲ್ಲಿ ನಮ್ಮ ಪ್ರಶ್ನೆಯನ್ನು ಸತ್ಯಾನ್ವೇಷಣ ದೃಷ್ಟಿಯಿಂದ ಚರ್ಚೆ ಮಾಡಿದರು. ನಮ್ಮ ವಿಷಯಕ್ಕೆ ಸಹಾಯ ನೀಡ ಬೇಕೆಂದು ಅನೇಕರಿಗೆ ಸ್ವತಃ ಕಾಗದಗಳನ್ನು ಬರೆದರು. ಯಾವು ದಾದರೂ ಮುಖ್ಯ ವಿಷಯ ಪ್ರಾಮುಖ್ಯತೆಗೆ ಬಂದ ಒಡನೆ ನಮಗೆ ಪ್ರತಿ ವಾರವೂ ಕಾಗದ ಬರೆಯುತ್ತಿದ್ದರು. ಅವರ ಮೊದಲನೆಯ ಪತ್ರದಲ್ಲಿ "ಅಲ್ಲಿನ ಸ್ಥಿತಿಯನ್ನು ಓದಲು ನನಗೆ ವ್ಯಸನವಾಗುತ್ತದೆ. ನಿಮ್ಮ ಹೋರಾಟವನ್ನು ಗೌರವದಿಂದಲೂ ಶಾಂತಿಯುತವಾಗಿಯೂ ಉತ್ಪ್ರೇಕ್ಷೆ ಯಿಲ್ಲದೆಯೂ ನಡಸುತ್ತ ಇದ್ದೀರಿ. ಈ ವಿಷಯದಲ್ಲಿ ನನ್ನ ಪೂರ್ಣ ಸಹಾನು ಭೂತಿ ನಿಮ್ಮೊಂದಿಗೆ ಇದೆ. ನಿಮಗೆ ನ್ಯಾಯ ದೊರೆಯಲು ಸಾರ್ವಜನಿಕ ವಾಗಿಯೂ ವೈಯಕ್ತಿಕವಾಗಿಯೂ ನನ್ನ ಕೈಲಾದ ಎಲ್ಲ ಸಹಾಯವನ್ನೂ ಕೊಡುತ್ತೇನೆ. ಈ ವಿಷಯದಲ್ಲಿ ಒಂದು ಹೆಜ್ಜೆಯನ್ನೂ ಬಿಟ್ಟುಕೊಡಲು ಸಾಧ್ಯವಿಲ್ಲ. ನಿಮ್ಮ ಬೇಡಿಕೆಗಳು ಬಹಳ ನ್ಯಾಯವಾಗಿರುವದರಿಂದ ನಿಷ್ಪಕ್ಷಪಾತಿಯಾದ ಯಾರೂ ಅವನ್ನು ಕಡಮೆ ಮಾಡಿ ಎಂದು ಸಹ ಹೇಳುವಂತೆ ಇಲ್ಲ" ಎಂದು ಬರೆದರು. ಟೈಮ್ಸ್ ಪತ್ರಿಕೆಗೆ ಈ ವಿಷಯ ವಾಗಿ ಅವರು ಬರೆದ ಲೇಖನದಲ್ಲಿ ಈ ಪತ್ರವನ್ನು ಅಕ್ಷರಶಃ ಪ್ರಕಟಿಸಿದರು. ಅವರ ಮನೋಭಾವ ಕೊನೆಯವರೆಗೂ ಒಂದೇ ತೆರನಾಗಿತ್ತು. ಅವರು ಸಾಯುವ ಮುಂಚೆ ಭಾರತೀಯರ ಪ್ರಶ್ನೆಯ ಮೇಲೆ ಒಂದು ಲೇಖನ ಮಾಲೆಗೆ ವಿಷಯಗಳನ್ನು ಸಂಗ್ರಹಿಸಿದ್ದುದಾಗಿ ಅವರ ಪತ್ನಿ ಲೇಡಿ ಹಂಟರ್‌ರವರು ಒಂದು ಪತ್ರ ಬರೆದರು.

ಕಳೆದ ಅಧ್ಯಾಯದಲ್ಲಿ ಶ್ರೀ ಮನ್ಸುಖಲಾಲ್ ನಾಜರ್‌ರವರ ಹೆಸರನ್ನು ಪ್ರಸ್ತಾಪಿಸಿದ್ದೇನೆ. ಭಾರತೀಯರ ಪರವಾಗಿ ಇಂಗ್ಲೆಂಡಿಗೆ ಹೋಗಿ ವಸ್ತುಸ್ಥಿತಿಯನ್ನು ವಿವರವಾಗಿ ತಿಳಿಯ ಹೇಳಲು ಇವರನ್ನು ಇಂಗ್ಲೆಂಡಿಗೆ ಕಳುಹಲಾಯಿತು. ಎಲ್ಲ ಪಕ್ಷಗಳ ಸದಸ್ಯರೊಂದಿಗೂ ಕೆಲಸ ಮಾಡಬೇಕೆಂದು ಹೇಳಿಕಳುಹಿಸಿದ್ದೆವು. ಇಂಗ್ಲೆಂಡಿನಲ್ಲಿದ್ದಾಗ ಸರ್ ಡಬ್ಲ್ಯು. ಡಬ್ಲ್ಯು. ಹಂಟರ್, ಸರ್ ಮಂಚೇರ್‌ಜಿ ಭಾವ್‌ನಗರಿ, ಭಾರತ ರಾಷ್ಟ್ರ ಮಹಾಸಭೆಯ ಬ್ರಿಟಿಷ್ ಸಮಿತಿ – ಇವರೆಲ್ಲರ ಸಂಬಂಧ ವನ್ನಿಟ್ಟುಕೊಂಡಿದ್ದರು. ಇದೇ ರೀತಿ ಇಂಡಿಯನ್ ಸಿವಿಲ್ ಸರ್ವಿಸಿನ ನಿವೃತ್ತ ಅಧಿಕಾರಿಗಳೊಂದಿಗೂ, ಇಂಡಿಯ ಆಫೀಸ್ ಮತ್ತು ಕಲೋನಿ ಯಲ್ ಆಫೀಸ್‌ಗಳೊಂದಿಗೂ ಸಂಬಂಧ ಇಟ್ಟುಕೊಂಡಿದ್ದರು. ಈ ರೀತಿ ಎಲ್ಲ ಕಡೆಯೂ ನಮ್ಮ ಪ್ರಯತ್ನಗಳು ನಡೆದುವು. ಇವೆಲ್ಲದರ ಪರಿಣಾಮ ವಾಗಿ ಸಮುದ್ರದಾಚೆಯ ದೇಶಗಳಲ್ಲಿನ ಭಾರತೀಯರ ಪ್ರಶ್ನೆ ಸಾಮ್ರಾಜ್ಯ ಸರಕಾರದ ಎದುರಿನಲ್ಲಿ ಅತ್ಯಂತ ಮಹತ್ವದ ಪ್ರಶ್ನೆಯಾಯಿತು. ಇತರ ವಲಸೆ ರಾಷ್ಟ್ರಗಳಲ್ಲಿ ಇದರ ಪರಿಣಾಮ ಒಳ್ಳೆಯದೂ ಆಯಿತು, ಕೆಟ್ಟದೂ ಆಯಿತು. ಭಾರತೀಯರು ಇದ್ದ ಕಡೆಗಳಲ್ಲೆಲ್ಲ ತಮ್ಮ ಸ್ಥಾನಮಾನವನ್ನು ಕಾಪಾಡಿಕೊಳ್ಳಲು ಎಚ್ಚತ್ತರು ; ತಮ್ಮ ಪ್ರಾಮುಖ್ಯತೆಗೆ ಭಾರತೀಯರು ಅಡ್ಡಿಬರುತ್ತಾರೆಂದು ಯೂರೋಪಿಯನರೂ ಎಚ್ಚತ್ತರು.

## ೯. ಬೋಅರ್ ಯುದ್ಧ

ಬೋಅರ್ ಯುದ್ಧ ಪ್ರಾರಂಭವಾದಾಗ ದಕ್ಷಿಣ ಆಫ್ರಿಕದ ಭಾರತೀ ಯರ ಸ್ಥಿತಿಯನ್ನೂ ಅದನ್ನು ಉತ್ತಮಗೊಳಿಸಲು ಕೈಗೊಂಡ ಕಾರ್ಯ ಕ್ರಮದ ವಿಷಯವನ್ನೂ ಹಿಂದಿನ ಅಧ್ಯಾಯಗಳಲ್ಲಿ ತಿಳಿಸಿದೆ.

೧೮೯೫ರಲ್ಲಿ ಚಿನ್ನದ ಗಣಿಗಳ ಯಜಮಾನರೊಂದಿಗೆ ಮಾಡಿದ್ದ ಪಿತೂರಿಯಂತೆ ಡಾಕ್ಟರ್ ಜೇಮ್ಸನ್‌ರು ಜೋಹನೆಸ್‌ಬರ್ಗಿಗೆ ಮುತ್ತಿಗೆ ಹಾಕಿದರು. ಜೋಹನೆಸ್‌ಬರ್ಗ್ ಪಟ್ಟಣವನ್ನು ತೆಗೆದುಕೊಂಡಮೇಲೆ, ಬೋಅರ್ ಸರಕಾರಕ್ಕೆ ವರ್ತಮಾನ ತಿಳಿಯಬಹುದೆಂದು ಯೋಚಿಸಿದ್ದರು. ಈ ಯೋಚನೆಯಲ್ಲಿ ಡಾಕ್ಟರ್ ಜೇಮ್ಸನ್‌ರೂ ಅವರ ಸಹಾಯಕರೂ

ತಪ್ಪು ಮಾಡಿದ್ದರು. ತಮ್ಮ ಪಿತೂರಿ ಗೊತ್ತಾದ ಮೇಲೆ, ಯುದ್ಧ ಸಿದ್ಧತೆ ಇಲ್ಲದ ಬೋಅರ್ ವ್ಯವಸಾಯಗಾರರು, ಸುಸಜ್ಜಿತ ರ್‍ಹೊಡೀಷಿಯಾ ಬಂದೂಕು ಸೈನ್ಯದ ಎದುರಿನಲ್ಲಿ ಏನೂ ಮಾಡಲಾರರೆಂದು ಯೋಚಿಸಿದ್ದು ಇನ್ನೊಂದು ದೊಡ್ಡ ತಪ್ಪು. ಜೋಹನೆಸ್‌ಬರ್ಗ್‌ನ ನಿವಾಸಿಗಳಲ್ಲನೇಕರು ತಮಗೆ ಸ್ವಾಗತವನ್ನು ಕೊಡುತ್ತಾರೆಂದು ಪಿತೂರಿಗಾರರು ತಿಳಿದುಕೊಂಡಿದ್ದರು. ಇಲ್ಲಿಯೂ ಡಾಕ್ಟರ್ ಸಾಹೇಬರು ಗಾಳಿಗೋಪುರ ಕಟ್ಟಿದ್ದರು. ಅಧ್ಯಕ್ಷ ಕ್ರೂಗರ್‌ರಿಗೆ ಮುಂಚೆಯೇ ವರ್ತಮಾನ ತಿಳಿದಿತ್ತು. ಏಕಕಾಲದಲ್ಲಿ ಡಾಕ್ಟರ್ ಜೇಮ್ಸನ್‌ರನ್ನು ಎದುರಿಸುವುದಕ್ಕೂ ಮತ್ತು ಅವರ ಜೊತೆಗಾರರನ್ನು ದಸ್ತಗಿರಿ ಮಾಡುವುದಕ್ಕೂ ಮೊದಲೇ ಯೋಚನೆ ಮಾಡಿ ಬುದ್ಧಿವಂತಿಕೆಯಿಂದಲೂ ಗುಪ್ತವಾಗಿಯೂ ಸಿದ್ಧತೆ ಮಾಡಿಕೊಂಡಿದ್ದರು. ಆದ್ದರಿಂದ ಡಾಕ್ಟರ್ ಜೇಮ್ಸನ್‌ರು ಜೋಹನೆಸ್‌ಬರ್ಗ್ ಹತ್ತಿರ ಬರುವ ಮುಂಚೆಯೇ ಬೋಅರರು ಅವರ ಮೇಲೆ ಗುಂಡುಗಳ ಸುರಿಮಳೆಯನ್ನು ಕರೆದರು. ತಮ್ಮನ್ನು ಎದುರಿಸಿದ ಸೈನ್ಯದ ಮೇಲೆ ಡಾಕ್ಟರ ಕಡೆಯವರು ಯುದ್ಧವನ್ನು ಪೂರೈಸುವಂತೆ ಇರಲಿಲ್ಲ. ಅದರಂತೆಯೇ ಜೋಹನೆಸ್ ಬರ್ಗ್‌ನಲ್ಲಿ ದಂಗೆ ಏಳದಂತೆ ಮುಂಜಾಗರೂಕತೆಯನ್ನು ತೆಗೆದುಕೊಳ್ಳಲಾಗಿತ್ತು. ಯಾರೂ ಹೊರಗೆ ತಲೆ ಸಹ ಇಡಲಿಲ್ಲ. ಜೋಹನೆಸ್ ಬರ್ಗಿನ ಕೋಟ್ಯಧೀಶ್ವರರು ಅಧ್ಯಕ್ಷ ಕ್ರೂಗರ್‌ರ ಕಾರ್ಯಕ್ರಮವನ್ನು ಕಂಡು ಮೂಕರಾದರು. ಅವರ ಅತ್ಯುತ್ತಮ ಸಿದ್ಧತೆಯಿಂದ, ಅತ್ಯಲ್ಪ ದ್ರವ್ಯ ಮತ್ತು ಪ್ರಾಣಹಾನಿಯೊಡನೆ ದಂಗೆ ಅಡಗಿತು.

ಚಿನ್ನದ ಗಣಿಗಳ ಮಾಲಕರಾದ ಡಾಕ್ಟರ್ ಜೇಮ್ಸನ್ ಮತ್ತು ಅವರ ಸ್ನೇಹಿತರನ್ನು ದಸ್ತಗಿರಿ ಮಾಡಿ, ತಕ್ಷಣವೇ ಅವರ ಮೇಲೆ ಮೊಕದ್ದಮೆ ಹೂಡಲಾಯಿತು. ಕೆಲವರಿಗೆ ಮರಣದಂಡನೆಯಾಯಿತು. ಶಿಕ್ಷೆಯಾದವರಲ್ಲಿ ಅನೇಕರು ಕೋಟ್ಯಧೀಶ್ವರರು. ಹಗಲೇ ಅವರು ದರೋಡೆ ಮಾಡಿದ್ದರಿಂದ ಸಾಮ್ರಾಜ್ಯ ಸರಕಾರ ಅವರಿಗೆ ಯಾವ ಸಹಾಯವನ್ನೂ ಮಾಡಲಾಗಲಿಲ್ಲ. ಇದ್ದಕ್ಕಿದ್ದ ಹಾಗೆ ಅಧ್ಯಕ್ಷ ಕ್ರೂಗರ್‌ರ ಪ್ರಾಶಸ್ತ್ಯ ಹೆಚ್ಚಿತು. ವಲಸೆ ರಾಷ್ಟ್ರಗಳ ಕಾರ್ಯದರ್ಶಿಗಳಾದ ಚೇಂಬರ್ಲಿನರು ದೈನ್ಯದಿಂದ ಅವರಿಗೆ ಕೇಬಲ್ ಕಳುಹಿಸಿ ಶಿಕ್ಷೆಗೊಳಗಾದ ಧನಿಕರ

ಪರವಾಗಿ ಕ್ಷಮಾಭಿಕ್ಷೆ ಬೇಡಿದರು. ಅಧ್ಯಕ್ಷ ಕ್ರೂಗರ್‌ರಿಗೆ ತಮ್ಮ ಕೆಲಸ ಏನೆಂಬುದು ಗೊತ್ತು. ದಕ್ಷಿಣ ಆಫ್ರಿಕದಲ್ಲಿ ತಮ್ಮ ಸ್ವತಂತ್ರ ಮನೋಭಾವನೆಯನ್ನು ಎದುರಿಸುವ ಶಕ್ತಿ ಯಾವುದೂ ಇಲ್ಲವೆಂದು ತಿಳಿದಿದ್ದರು. ಡಾಕ್ಟರ್ ಜೇಮ್ಸನ್ ಮತ್ತು ಅವರ ಸ್ನೇಹಿತರು ಒಳ್ಳೆಯ ಸನ್ನಾಹ ಮಾಡಿಕೊಂಡಿದ್ದೇವೆಂದು ತಿಳಿದುಕೊಂಡಿದ್ದರೂ ಅಧ್ಯಕ್ಷ ಕ್ರೂಗರ್‌ರ ದೃಷ್ಟಿಯಲ್ಲಿ ಅದು ಬುದ್ಧಿಯಿಲ್ಲದ ಹುಚ್ಚುತನವಾಗಿತ್ತು. ಆದ್ದರಿಂದ ಅವರು ಚೇಂಬರ್ಲಿನರ ಸವಿನಯ ಬೇಡಿಕೆಗೆ ಮನ್ನಣೆ ಕೊಟ್ಟರು. ಮರಣದಂಡನೆಯನ್ನು ರದ್ದುಗೊಳಿಸಿ, ಎಲ್ಲರನ್ನೂ ಕ್ಷಮಿಸಿ ಬಿಡುಗಡೆ ಮಾಡಿದರು.

ಆದರೆ ಇದೇರೀತಿ ಬಹಳ ಕಾಲ ನಡೆಯಲು ಸಾಧ್ಯವಿರಲಿಲ್ಲ. ಡಾಕ್ಟರ್ ಜೇಮ್ಸನ್‌ರ ಮುತ್ತಿಗೆ ಬಲವಾದ ರೋಗದ ಒಂದು ಸಣ್ಣ ಕುರುಹು ಮಾತ್ರ ಎಂದು ಅವರಿಗೆ ತಿಳಿದಿತ್ತು. ಜೋಹನೆಸ್‌ಬರ್ಗಿನ ಕೋಟ್ಯಧೀಶ್ವರರು ತಮಗಾದ ಅವಮಾನವನ್ನು ಅಳಿಸಲು ಶಕ್ತಿಮೀರಿ ಪ್ರಯತ್ನಮಾಡದೆ ಸುಮ್ಮನಿರುವುದು ಅಸಾಧ್ಯವಾಗಿತ್ತು. ಅದೂ ಅಲ್ಲದೆ ಯಾವ ಸುಧಾರಣೆಗಳಿಗಾಗಿ ಡಾಕ್ಟರ್ ಜೇಮ್ಸನ್‌ರು ದಂಗೆ ಎದ್ದರೋ ಆ ಸುಧಾರಣೆಗಳು ಇನ್ನೂ ಜಾರಿಗೆ ಬರಲಿಲ್ಲ. ಆದ್ದರಿಂದ ಕೋಟ್ಯಧೀಶ್ವರರು ತೆಪ್ಪಗಿರುವುದು ಸಾಧ್ಯವಿರಲಿಲ್ಲ. ದಕ್ಷಿಣ ಆಫ್ರಿಕದ ಬ್ರಿಟಿಷ್ ಹೈಕಮಿಷನರ್ ಆದ ಲಾರ್ಡ್ ಮಿಲ್ನರ್‌ಗೆ ಈ ಕೋಟ್ಯಧೀಶ್ವರರ ಬೇಡಿಕೆಗಳ ವಿಷಯದಲ್ಲಿ ಪೂರ್ಣ ಸಹಾನುಭೂತಿ ಇತ್ತು. ಚೇಂಬರ್ಲಿನರು ಸಹ ಅಧ್ಯಕ್ಷ ಕ್ರೂಗರ್‌ರ ದಯಾಳುತ್ವವನ್ನು ಕೊಂಡಾಡಿದಾಗ ಸುಧಾರಣೆಗಳ ಆವಶ್ಯಕತೆಯ ಕಡೆಗೆ ಅವರ ಗಮನವನ್ನು ಎಳೆದಿದ್ದರು. ಯುದ್ಧ ಅನಿವಾರ್ಯವೆಂದು ಎಲ್ಲರೂ ತಿಳಿದಿದ್ದರು. ಟ್ರಾನ್ಸ್‌ವಾಲಿನಲ್ಲಿ ಬೋಅರರ ಶಕ್ತಿಯನ್ನು ಮೊಟಕು ಮಾಡಬೇಕೆಂಬುದೇ ಐಟ್‌ಲ್ಯಾಂಡರ್‌ಗಳ ಬೇಡಿಕೆಗಳ ಗುರಿ. ಯುದ್ಧದ ಪರ್ಯವಸಾನವೇನು ಎಂಬುದು ಉಭಯ ಪಕ್ಷದವರಿಗೂ ತಿಳಿದಿದ್ದ ಕಾರಣ ಎರಡು ಕಡೆಯವರೂ ಯುದ್ಧಸನ್ನದ್ಧರಾಗುತ್ತಿದ್ದರು. ಉಭಯಪಕ್ಷಗಳ ಮಧ್ಯೆ ನಡೆದ ವಾಗ್ಯುದ್ಧ ಗಮನಾರ್ಹವಾದುದು. ಅಧ್ಯಕ್ಷ ಕ್ರೂಗರ್‌ರು ಮದ್ದು

ಗುಂಡುಗಳನ್ನು ಕೊಳ್ಳಲು ಆಜ್ಞೆಮಾಡಿದ ಕೂಡಲೆ, ಬ್ರಿಟಿಷ್ ಪ್ರತಿನಿಧಿ ಆತ್ಮರಕ್ಷಣೆಗಾಗಿ ಬ್ರಿಟಿಷರು ದಕ್ಷಿಣ ಆಫ್ರಿಕದೊಳಕ್ಕೆ ಸೈನ್ಯಗಳನ್ನು ಕರಸಬೇಕಾಗುವುದೆಂದು ಎಚ್ಚರಿಸಿದನು. ದಕ್ಷಿಣ ಆಫ್ರಿಕಕ್ಕೆ ಬ್ರಿಟಿಷ್ ಸೈನ್ಯಗಳು ಬಂದೊಡನೆ ಅಧ್ಯಕ್ಷ ಕ್ರೂಗರ್‌ರು ಬ್ರಿಟಿಷರನ್ನು ಅಪಹಾಸ್ಯ ಮಾಡಿ ತಮ್ಮ ಸಿದ್ಧತೆಯನ್ನು ಇನ್ನೂ ಮುಂದುವರಿಸಿದರು. ಈ ರೀತಿ ಎರಡು ಕಡೆಯವರೂ ಪ್ರತಿಪಕ್ಷದವರ ಮೇಲೆ ಆಕ್ಷೇಪಣೆ ಮಾಡುತ್ತಿದ್ದರೂ, ತಮ್ಮ ಸಿದ್ಧತೆಯನ್ನು ಮಾತ್ರ ಮುಂದುವರಿಸಿ ಬಲಪಡಿಸುತ್ತಿದ್ದರು.

ಅಧ್ಯಕ್ಷ ಕ್ರೂಗರ್‌ರು ತಮ್ಮ ಸಿದ್ಧತೆಯನ್ನು ಪೂರೈಸಿದ ಒಡನೆ ಇನ್ನು ಕಾಲವಿಳಂಬ ಮಾಡಿದರೆ, ಶತ್ರುಗಳಿಗೆ ಅನುಕೂಲವೆಂದು ತಿಳಿದರು. ಬ್ರಿಟಿಷರ ಜನ ಮತ್ತು ಧನಸಹಾಯ ಅಪಾರವಾಗಿತ್ತು. ಐಟ್‌ಲ್ಯಾಂಡರ್‌ಗಳ ಬೇಡಿಕೆಗಳನ್ನು ಪೂರೈಸಿರೆಂದು ಸಂಧಾನ ನಡಸುತ್ತ, ತಮ್ಮ ಸಿದ್ಧತೆಗಳನ್ನು ಪೂರೈಸಲು ಬ್ರಿಟಿಷರಿಗೆ ಅವಕಾಶ ದೊರೆಯುವು ದೆಂದೂ ಕೊನೆಗೆ ಸಿದ್ಧತೆ ಪೂರೈಸಿದ ಒಡನೆ ತಮ್ಮ ಬೇಡಿಕೆಗಳಿಗೆ ಪರಿಹಾರ ದೊರೆಯದ ಕಾರಣ ಯುದ್ಧ ಅನಿವಾರ್ಯವಾಯಿತೆಂದು ಬ್ರಿಟಿಷರು ಪ್ರಪಂಚಕ್ಕೆ ಮಂಕುಬೂದಿ ಎರಚಲು ಅವಕಾಶವಾಗುವು ದೆಂದೂ ತಿಳಿದಿತ್ತು. ಪೂರ್ಣಸಿದ್ಧತೆಯಾದ ಮೇಲೆ ಯುದ್ಧಕ್ಕೆ ನಿಂತರೆ ಬೋಅರರು ಅದರ ತೀಕ್ಷ್ಣತೆಯನ್ನು ತಾಳಲಾಗದೆ, ಶರಣಾಗತರಾಗಿ ಬ್ರಿಟಿಷರು ಹೇಳಿದ ಷರತ್ತುಗಳಿಗೆ ಒಪ್ಪಬೇಕಾಗಿತ್ತು. ಹದಿನೆಂಟು ವರ್ಷದಿಂದ ಅರುವತ್ತುವರ್ಷದ ವರೆಗಿನ ಪ್ರತಿ ಬೋಅರನೂ ಒಳ್ಳೆಯ ಯೋಧನಿದ್ದನು. ಬೇಕೆಂದರೆ ಬೋಅರ್ ಹೆಂಗಸರೂ ಯುದ್ಧ ಮಾಡ ಬಲ್ಲವರಾಗಿದ್ದರು. ಬೋಅರರಿಗೆ ರಾಷ್ಟ್ರೀಯ ಸ್ವಾತಂತ್ರ್ಯ ಧಾರ್ಮಿಕ ತತ್ವದಷ್ಟೇ ಬೆಲೆಯುಳ್ಳದ್ದಾಗಿತ್ತು. ಅಂತಹ ಧೈರ್ಯಶಾಲಿಗಳಾದ ಜನರು ಪ್ರಪಂಚದ ಅತ್ಯಂತ ಪ್ರಬಲ ಸಾಮ್ರಾಜ್ಯದಿಂದ ಕೂಡ ಅಪಮಾನವನ್ನು ಸಹಿಸುವಂತೆ ಇರಲಿಲ್ಲ. ಅಧ್ಯಕ್ಷ ಕ್ರೂಗರ್‌ರು ಆಗಲೇ ಆರೆಂಜ್ ಫ್ರೀ ಸ್ಟೇಟ್‌ನೊಂದಿಗೆ ಒಂದು ಒಪ್ಪಂದಕ್ಕೆ ಬಂದಿದ್ದರು. ಸ್ವತಂತ್ರ ಬೋಅರ್ ರಿಪಬ್ಲಿಕ್‌ಗಳೆರಡೂ ಒಂದೇ ಕಾರ್ಯನೀತಿಯನ್ನನು ಸರಿಸಿದುವು. ಬ್ರಿಟಿಷರ ಬೇಡಿಕೆಗಳನ್ನು ಪೂರ್ತಿ ಅಲ್ಲ— ಐಟ್‌ಲ್ಯಾಂಡರು

ಗಳನ್ನು ತೃಪ್ತಿಪಡಿಸುವಷ್ಟು ಸಹ– ಒಪ್ಪಲು ಅಧ್ಯಕ್ಷ ಕ್ರೂಗರ್‌ರು ಇಷ್ಟಪಡಲಿಲ್ಲ. ಎರಡು ರಿಪಬ್ಲಿಕ್‌ಗಳೂ, ಯುದ್ಧ ಅನಿವಾರ್ಯವೆಂದು ತಿಳಿದ ಒಡನೆ, ಬ್ರಿಟಿಷರಿಗೆ ಇನ್ನು ಹೆಚ್ಚು ವ್ಯವಧಾನಕೊಟ್ಟರೆ ಯುದ್ಧ ಸಿದ್ಧತೆಯನ್ನು ಪೂರೈಸಲು ಅವರಿಗೆ ಅವಕಾಶ ದೊರೆಯುತ್ತದೆಂದು ನಿರ್ಧರಿಸಿದರು. ಅಧ್ಯಕ್ಷ ಕ್ರೂಗರ್‌ರು ಲಾರ್ಡ್ ಮಿಲ್ನರ್‌ಗೆ ಕೊನೆಯ ಎಚ್ಚರಕೊಟ್ಟು ಟ್ರಾನ್ಸ್‌ವಾಲ್ ಮತ್ತು ಆರೆಂಜ್ ಫ್ರೀ ಸ್ಟೇಟ್ ಗಡಿಗಳಲ್ಲಿ ಸೈನ್ಯಗಳನ್ನು ಜಮಾಯಿಸಿದರು. ಈ ಕಾರ್ಯಕ್ರಮದ ಪರಿಣಾಮ ಎಲ್ಲರಿಗೂ ತಿಳಿದೇ ಇತ್ತು. ಪ್ರಪಂಚದಲ್ಲೇ ದೊಡ್ಡ ಸಾಮ್ರಾಜ್ಯದವರೆನಿಸಿದ ಬ್ರಿಟಿಷರು ಕಣ್ಣುಮುಚ್ಚಿ ಕೂಡುವಂತೆ ಇರಲಿಲ್ಲ. ಎಚ್ಚರಿಕೆ ಕೊಟ್ಟ ವಾಯಿದೆ ಮುಗಿದ ಒಡನೆ ಬೋಅರರು ಮಿಂಚಿನ ವೇಗದಿಂದ ಮುಂದುವರಿದು ಲೇಡಿಸ್ಮಿತ್, ಕಿಂಬರ್ಲಿ, ಮ್ಯಾಫೆಕಿಂಗ್‌ಗಳಿಗೆ ಮುತ್ತಿಗೆ ಹಾಕಿದರು. ಈ ಮಹಾಯುದ್ಧ ಪ್ರಾರಂಭವಾದದ್ದು ೧೮೯೯ರಲ್ಲಿ. ಬ್ರಿಟಿಷರ ಘೋಷಣೆಯಂತೆ ಬೋಅರರು ಭಾರತೀಯರಿಗೆ ಕೊಟ್ಟ ಹಿಂಸೆಯೂ ಈ ಯುದ್ಧಕ್ಕೆ ಒಂದು ಕಾರಣವೆಂದು ವಾಚಕರು ಜ್ಞಾಪಕದಲ್ಲಿಡಬೇಕು.

ಈ ಸಂದರ್ಭದಲ್ಲಿ ದಕ್ಷಿಣ ಆಫ್ರಿಕದಲ್ಲಿ ಭಾರತೀಯರು ಏನು ಮಾಡಬೇಕೆಂಬ ಮಹಾ ಸಮಸ್ಯೆ ನಮ್ಮೆದುರಿಗೆ ನಿಂತಿತು. ಬೋಅರರಲ್ಲಿ ಗಂಡಸರೆಲ್ಲರೂ ಯುದ್ಧಕ್ಕೆ ಸೇರಿದರು. ನ್ಯಾಯವಾದಿಗಳು ನ್ಯಾಯವೃತ್ತಿಯನ್ನೂ, ವ್ಯವಸಾಯಗಾರರು ಜಮೀನುಗಳನ್ನೂ, ವರ್ತಕರು ವ್ಯಾಪಾರವನ್ನೂ ನೌಕರರು ತಮ್ಮ ಕೆಲಸವನ್ನೂ ಬಿಟ್ಟುಬಂದರು. ದಕ್ಷಿಣ ಆಫ್ರಿಕದ ಬ್ರಿಟಿಷರು ಅದೇ ಪ್ರಮಾಣದಲ್ಲಿ ಯುದ್ಧಕ್ಕೆ ಸೇರಲಿಲ್ಲ. ಆದರೂ ಕೇಪ್ ಕಾಲೊನಿ ನೇಟಾಲ್, ರ್ಹೊಡೀಷಿಯಾ ಪ್ರಾಂತಗಳಿಂದ ಅನೇಕ ಸಾರ್ವಜನಿಕ ಮುಖಂಡರು ಸ್ವಯಂ ಸೇವಕರಾಗಿ ಸೇರಿದರು. ಅನೇಕ ಪ್ರಮುಖ ಇಂಗ್ಲಿಷ್ ನ್ಯಾಯವಾದಿಗಳೂ ವರ್ತಕರೂ ಅವರನ್ನು ಹಿಂಬಾಲಿಸಿದರು. ನಾನು ವಾದಮಾಡುತ್ತಿದ್ದ ನ್ಯಾಯಸ್ಥಾನದಲ್ಲಿ ಈಗ ಬಹಳ ಸ್ವಲ್ಪ ನ್ಯಾಯವಾದಿಗಳು ಉಳಿದರು. ಹಿರಿಯ ನ್ಯಾಯವಾದಿಗಳನೇಕರು ಯುದ್ಧ ಸಹಾಯಕ ಕಾರ್ಯಗಳಲ್ಲಿ ತೊಡಗಿದ್ದರು. ಭಾರತೀ

ಯರು ದುಡ್ಡುಮಾಡಲು ಮಾತ್ರ ದಕ್ಷಿಣ ಆಫ್ರಿಕಕ್ಕೆ ಹೋಗಿದ್ದಾರೆಂದೂ ಬ್ರಿಟಿಷರ ಕುತ್ತಿಗೆಗೆ ಉರುಲೆಂದೂ ಒಂದು ಆಪಾದನೆ ಇತ್ತು. ಮರ ದೊಳಗೇ ಸೇರಿ ಕೊರೆದು ಕೊಬ್ಬುವ ಹುಳುಗಳಂತೆ ಭಾರತೀಯರು ಬ್ರಿಟಿಷರ ಖರ್ಚಿನಿಂದ ತಮ್ಮ ಬೊಜ್ಜುಬೆಳಸಲು ದಕ್ಷಿಣ ಆಫ್ರಿಕಕ್ಕೆ ಬಂದಿದ್ದಾರೆಂದು ಹೇಳುತ್ತಿದ್ದರು. ದೇಶವನ್ನೇ ಆಗಲಿ, ತಮ್ಮ ಮನೆ ಗಳನ್ನೇ ಆಗಲಿ ಮುತ್ತಿದರೂ ಭಾರತೀಯರು ಯಾವ ಸಹಾಯವನ್ನು ಮಾಡುವುದಿಲ್ಲವೆನ್ನುತ್ತಿದ್ದರು. ಬ್ರಿಟಿಷರು ಈ ಸಂದರ್ಭದಲ್ಲಿ ತಮ್ಮ ರಕ್ಷಣೆಯಲ್ಲದೆ ಭಾರತೀಯರ ರಕ್ಷಣೆಯನ್ನೂ ನೋಡಿಕೊಳ್ಳಬೇಕಾಗಿದೆ ಎಂದರು. ನಾವು ಭಾರತೀಯರು ಈ ಎಲ್ಲ ಆಪಾದನೆಗಳನ್ನೂ ಗಮನಿ ಸಿದೆವು. ಇವುಗಳಾವುದಕ್ಕೂ ಬುಡವಿಲ್ಲವೆಂದು ತೋರಿಸಲು ಇದು ಒಳ್ಳೆಯ ಸಮಯವೆಂದೆವು. ಆದರೆ ಕೆಲವರು

"ಬೋಅರರಷ್ಟೇ ಬ್ರಿಟಿಷರೂ ನಮ್ಮನ್ನು ಹಿಂಸಿಸುತ್ತಾರೆ. ಟ್ರಾನ್ಸ್‌ವಾಲಿನಲ್ಲಿ ನಮಗೆ ತೊಂದರೆಗಳಿದ್ದರೆ ನೇಟಾಲಿನಲ್ಲಾಗಲಿ, ಕೇಪ್ ಕಾಲೊನಿಯಲ್ಲಾಗಲಿ ನಮ್ಮ ಸ್ಥಿತಿ ಉತ್ತಮವಾಗಿಲ್ಲ. ವ್ಯತ್ಯಾಸ ವೇನಿದ್ದರೂ ಕಾಠಿಣ್ಯದಲ್ಲಿ ಮಾತ್ರ. ಸ್ವಲ್ಪ ಹೆಚ್ಚುಕಡಮೆ ನಾವೆಲ್ಲರೂ ಗುಲಾಮರು. ಅಲ್ಪ ಸಂಖ್ಯಾತರಾದ ಬೋಅರ್ ಜನಾಂಗದವರು ತಮ್ಮ ಉಳಿವಿಗಾಗಿ ಹೋರಾಡುತ್ತಿರುವಾಗ ಅವರ ವಿನಾಶಕ್ಕೆ ನಾವೇಕೆ ಕಾರಣರಾಗಬೇಕು ? ಕಡೆಯದಾಗಿ, ವ್ಯವಹಾರ ದೃಷ್ಟಿಯಿಂದ ನೋಡಿ ದರೂ ಬೋಅರರು ಸೋಲುವುದೇ ಖಂಡಿತವೆಂದು ಹೇಳಲು ಯಾರೂ ಧೈರ್ಯಮಾಡಲಾರರು. ಅವರು ಗೆದ್ದುದೇ ಆದರೆ ಖಂಡಿತವಾಗಿಯೂ ನಮ್ಮ ಮೇಲೆ ಸೇಡುತೀರಿಸಿಕೊಳ್ಳದೆ ಬಿಡುವುದಿಲ್ಲ" ಎಂದರು.

ಮೇಲಿನ ವಾದವನ್ನು ಎತ್ತಿಹಿಡಿದವರ ಸಂಖ್ಯೆ ನಮ್ಮಲ್ಲಿ ಬಹಳ ಬಲವಾಗಿತ್ತು. ಅದು ನನಗೆ ಅರ್ಥವಾಯಿತು; ಅದಕ್ಕೆ ತಕ್ಕ ಬೆಲೆ ಯನ್ನೂ ಕೊಟ್ಟೆವು. ಆದರೂ ಆ ವಾದ ನನಗೆ ಹಿಡಿಸಲಿಲ್ಲ. ನಮ್ಮ ಜನರೆದುರಿನಲ್ಲಿ ಈ ರೀತಿ ಅದನ್ನು ಖಂಡಿಸಿದೆ :

"ನಾವು ದಕ್ಷಿಣ ಆಫ್ರಿಕದಲ್ಲಿರುವುದು ಬ್ರಿಟಿಷ್ ಪ್ರಜೆಗಳಾಗಿ. ನಾವು ಕಳುಹಿಸಿದ ಪ್ರತಿಯೊಂದು ಅರ್ಜಿಯಲ್ಲೂ ಈ ವಿಷಯವನ್ನು

ಪ್ರತಿಪಾದಿಸಿ ಸ್ಥಿರಪಡಿಸುತ್ತ ಬಂದಿದ್ದೇವೆ. ಬ್ರಿಟಿಷ್ ಪ್ರಜೆಗಳೆಂದು ನಾವು ಹೆಮ್ಮೆ ಪಟ್ಟಿದ್ದೇವೆ ; ನಮ್ಮ ಆಳರಸರಿಗೂ ಪ್ರಪಂಚಕ್ಕೂ ನಂಬಿಕೆ ಹುಟ್ಟಿಸಿದ್ದೇವೆ. ನಾವು ಬ್ರಿಟಿಷ್ ಪ್ರಜೆಗಳಾದ್ದರಿಂದ ನಮ್ಮ ಹಕ್ಕು ಬಾಧ್ಯತೆಗಳನ್ನು ರಕ್ಷಿಸುವುದಾಗಿ ನಮ್ಮ ಆಳರಸರು ಹೇಳುತ್ತಿದ್ದಾರೆ. ಈಗ ನಮಗೆ ಏನಾದರೂ ಸ್ವಲ್ಪ ಹಕ್ಕು ಬಾಧ್ಯತೆಗಳಿದ್ದರೆ ಬ್ರಿಟಿಷ್ ಪ್ರಜೆಗಳಾಗಿರುವುದರಿಂದ. ಬ್ರಿಟಿಷರಿಗೂ ನಮಗೂ ಸರ್ವನಾಶ ಸಿದ್ಧವಾಗಿರುವಾಗ, ನಮಗೆ ಇಲ್ಲಿ ತೊಂದರೆ ಕೊಡುತ್ತಿದ್ದಾರೆಂಬ ನೆಪದಿಂದ ನಾವು ಕೈಕಟ್ಟಿ ಸುಮ್ಮನೆ ನೋಡುತ್ತ ಕುಳಿತುಕೊಳ್ಳುವುದು ನಮ್ಮ ಜನಾಂಗದ ಘನತೆಗೆ ಸಲ್ಲದ ಮಾತು. ಅಂತಹ ಹೀನ ನಡತೆ ನಮ್ಮ ತೊಂದರೆಗಳನ್ನು ಹೆಚ್ಚಿಸುವುದಲ್ಲದೆ, ನಮ್ಮ ಮೇಲಿನ ಯಾವ ಆಪಾದನೆಗಳನ್ನು ಬುಡವಿಲ್ಲದವುಗಳೆಂದು ನಂಬಿದ್ದೆವೊ ಅಂತಹ ನಂಬುಗೆಯನ್ನು ದೃಢಪಡಿಸಿಕೊಡಲು ಅನಾಯಾಸವಾಗಿ ದೊರೆತಿರುವ ಈ ಅವಕಾಶವನ್ನು ಉಪಯೋಗಿಸಿಕೊಳ್ಳದಿದ್ದರೆ ನಮ್ಮ ಆತ್ಮಘಾತವನ್ನು ನಾವೇ ಮಾಡಿಕೊಳ್ಳುತ್ತೇವೆ. ಇಂಗ್ಲಿಷರು ನಮ್ಮನ್ನು ಇನ್ನೂ ಕೀಳಾಗಿ ಕಂಡು ಮೊದಲಿಗಿಂತ ಹೆಚ್ಚಾಗಿ ತೊಂದರೆಕೊಟ್ಟರೆ ಆಶ್ಚರ್ಯಪಡಬೇಕಾದ್ದಿಲ್ಲ. ಆಗ ತಪ್ಪೆಲ್ಲವೂ ನಮ್ಮದೇ ಆಗುತ್ತದೆ. ನಮ್ಮ ಮೇಲಿನ ಆಪಾದನೆಗಳಿಗೆ ವಾಸ್ತವವಾಗಿ ಬುಡವಿಲ್ಲವೆಂದೂ ಅವು ನಿಜವಾಗಿಯೂ ನಿರಾಧಾರವಾದವು ಎಂದೂ ಹೇಳಿದರೆ ಆತ್ಮವಂಚನೆಯಾಗುತ್ತದೆ. ನಾವು ಸಾಮ್ರಾಜ್ಯದ ಅಸ್ಪೃಶ್ಯರಾಗಿರಬಹುದು. ಆದರೆ ಸಾಮ್ರಾಜ್ಯದ ಪ್ರಜೆಗಳಾಗಿಯೇ ನಮ್ಮ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಲು ಯತ್ನಿಸಿದ್ದೇವೆ. ಇದೇ ನಮ್ಮ ಮತ್ತು ಭಾರತದಲ್ಲಿನ ನಮ್ಮ ಮುಖಂಡರ ಕಾರ್ಯನೀತಿ. ನಮ್ಮ ಸ್ವಾತಂತ್ರ್ಯವನ್ನು ಸಂಪಾದಿಸಿ, ಬ್ರಿಟಿಷ್ ಸಾಮ್ರಾಜ್ಯದ ಪ್ರಜೆಗಳಾಗಿ ನಮ್ಮ ಹಿತಚಿಂತನೆಯನ್ನು ಕಾಪಾಡಿಕೊಳ್ಳಬಯಸಿದರೆ, ನಮ್ಮ ಶಕ್ತಿ ಸಾಮರ್ಥ್ಯಗಳೆಲ್ಲವನ್ನೂ ಉಪಯೋಗಿಸಿ ಬ್ರಿಟಿಷರಿಗೆ ಸಹಾಯಮಾಡುವ ಈ ಅವಕಾಶವೇ ಚಿನ್ನದಂಥ ಅವಕಾಶ. ನ್ಯಾಯ ಬೋಅರರ ಕಡೆ ಇದೆ ಎಂದು ಬಹುಮಟ್ಟಿಗೆ ಒಪ್ಪಲೇ ಬೇಕು. ಆದರೆ ಒಂದು ರಾಷ್ಟ್ರದ ಪ್ರಜೆ ಎಲ್ಲ ಸಮಯಗಳಲ್ಲಿಯೂ ತನ್ನ ಸ್ವಂತ ಅಭಿಪ್ರಾಯವನ್ನು ರಾಷ್ಟ್ರದ

ಮೇಲೆ ಒತ್ತಾಯಪಡಿಸಬಯಸುವುದು ಯೋಗ್ಯವಲ್ಲ. ಅಧಿಕಾರಿಗಳು ಮಾಡಿದ ಕೆಲಸವೆಲ್ಲ ಸರಿಯಿಲ್ಲದಿರಬಹುದು. ಪ್ರಜೆಗಳು ಸರಕಾರದಲ್ಲಿ ಭಕ್ತಿಯನ್ನಿಟ್ಟಿರುವವರೆಗೂ ಸಾಧಾರಣವಾಗಿ ಸರಕಾರದ ರಾಜಕಾರ್ಯ ಗಳಿಗೆ ತಮ್ಮ ಅಭಿಪ್ರಾಯಗಳನ್ನು ಹೊಂದಿಸಿಕೊಂಡು, ತಮ್ಮ ಬೆಂಬಲ ಕೊಡಬೇಕಾದ್ದು ಪ್ರಜೆಗಳ ಸ್ಪಷ್ಟ ಕರ್ತವ್ಯ.

"ಅದೂ ಅಲ್ಲದೆ ಯಾವುದಾದರೂ ಪ್ರಜಾವರ್ಗಕ್ಕೆ, ಸರಕಾರ ಮಾಡುವ ಕೆಲಸ ಧಾರ್ಮಿಕ ದೃಷ್ಟಿಯಿಂದ ಅನೀತಿಯುತವಾದುದೆಂದು ತೋರಿದರೆ, ಆ ಕೆಲಸಕ್ಕೆ ಸಹಾಯ ಮಾಡುವ ಅಥವಾ ವಿರೋಧಿಸುವ ಮುಂಚೆ ತಮ್ಮ ಪ್ರಾಣವನ್ನು ಬಲಿಕೊಟ್ಟಾದರೂ ಸರಕಾರ ಆ ಮಾರ್ಗ ವನ್ನು ಹಿಡಿಯದಂತೆ ಸರಕಾರದ ಮನಸ್ಸನ್ನು ಪರಿವರ್ತನೆ ಮಾಡಲು ಪ್ರಯತ್ನ ಮಾಡಬೇಕು. ನಾವು ಆ ರೀತಿ ಏನನ್ನೂ ಮಾಡಿರುವುದಿಲ್ಲ. ಅಂತಹ ಧಾರ್ಮಿಕ ಬಿಕ್ಕಟ್ಟು ಯಾವುದೂ ನಮ್ಮ ಮುಂದೆ ಇರುವುದಿಲ್ಲ. ಈ ಯುದ್ಧದಿಂದ ದೂರವಿರಲು ಅಂತಹ ಬಲವತ್ತರವಾದ ವಿಶ್ವಧರ್ಮ ಸಮನ್ವಿತವಾದ ಕಾರಣಗಳಿವೆ ಎಂದು ಯಾರೂ ಹೇಳುವುದಿಲ್ಲ. ಆದ್ದ ರಿಂದ ಸಾಮಾನ್ಯ ಪ್ರಜೆಗಳಾಗಿ, ಯುದ್ಧದ ಗುಣಾವಗುಣಗಳನ್ನು ಪ್ರಶ್ನಿ ಸುವುದು ನಮ್ಮ ಕೆಲಸವಲ್ಲ. ಈಗಾಗಲೆ ಯುದ್ಧ ಪ್ರಾರಂಭವಾಗಿರು ವುದರಿಂದ ನಮ್ಮ ಕೈಲಾದ ಸಹಾಯವನ್ನು ಒದಗಿಸಬೇಕಾದ್ದು ನಮ್ಮ ಕೆಲಸ. ಕೊನೆಯದಾಗಿ ಬೋಅರರು ಗೆದ್ದರೆ– ಬೋಅರರು ಗೆಲ್ಲಲು ಅವಕಾಶವೂ ಇತ್ತು–ನಮ್ಮ ಸ್ಥಿತಿ ಮೊದಲಿಗಿಂತ ಕೀಳಾಗುವು ದೆಂದೂ, ಬೋಅರರು ಬಲವಾಗಿ ಸೇಡು ತೀರಿಸಿಕೊಳ್ಳುವರೆಂದೂ ಹೇಳಿದರೆ ಬೋಅರರ ಧೀರೋದಾತ್ತತೆಗೂ ನಮಗೂ ಅನ್ಯಾಯ ಮಾಡಿದಂತಾಗುತ್ತದೆ. ಅಂತಹ ಪರಿಸ್ಥಿತಿಗೆ ಹೆದರಿ ಕಾಲಕಳೆಯುವುದು ಹೇಡಿತನ ಮತ್ತು ನಮ್ಮ ರಾಜಭಕ್ತಿಗೆ ಕಳಂಕ. ಯುದ್ಧದಲ್ಲಿ ಸೋಲಾದರೆ ತನ್ನ ಗತಿ ಏನು ಎಂದು ಯಾವ ಇಂಗ್ಲಿಷನಾದರೂ ಯೋಚಿಸುವನೇನು ? ತನ್ನ ಗಂಡುತನಕ್ಕೆ ಸಂಚಕಾರ ಕೊಡದ ಮುನ್ನ ಯುದ್ಧಕ್ಕೆ ಸೇರುವ ಯಾವ ಮನುಷ್ಯನೂ ಆ ರೀತಿ ಯೋಚಿಸುವುದಿಲ್ಲ."

೧೮೯೯ರಲ್ಲಿ ನಾನು ಈ ವಾದವನ್ನು ನಮ್ಮ ಜನರೆದುರಿಗೆ ಇಟ್ಟೆ. ಈಗಲೂ ಆ ಅಭಿಪ್ರಾಯವನ್ನು ಬದಲಾಯಿಸಲು ಯಾವ ಕಾರಣವೂ ತೋರುವುದಿಲ್ಲ. ಬ್ರಿಟಿಷ್ ಸಾಮ್ರಾಜ್ಯದಲ್ಲಿ ನನಗೆ ಆಗ ಇದ್ದ ನಂಬಿಕೆ ಈಗಲೂ ಇದ್ದರೆ, ಸಾಮ್ರಾಜ್ಯದ ಆಶ್ರಯದಲ್ಲಿಯೇ ನಮ್ಮ ಸ್ವಾತಂತ್ರ್ಯ ವನ್ನು ಗಳಿಸಬಹುದೆಂದು ಆಗ ನನಗಿದ್ದ ಆಸೆ ಈಗಲೂ ಇದ್ದರೆ, ಇಂದಿಗೂ ದಕ್ಷಿಣ ಆಫ್ರಿಕದಲ್ಲಿ ಮತ್ತು ಅಂಥದೇ ಸಂದರ್ಭಗಳಲ್ಲಿ ಭಾರತದಲ್ಲಿ ಸಹ ಅದೇ ವಾದಸರಣಿಯನ್ನು ಅವಲಂಬಿಸುತ್ತಿದ್ದೆ. ದಕ್ಷಿಣ ಆಫ್ರಿಕದಲ್ಲೂ, ಅನಂತರ ಇಂಗ್ಲೆಂಡಿನಲ್ಲೂ, ಈ ವಾದಸರಣಿಯನ್ನು ದೂಷಿಸಿದ ಪ್ರಯತ್ನ ನನ್ನ ಕಿವಿಗೆ ಕೇಳಿಬಂತು. ಆದರೂ ನನ್ನ ಅಭಿಪ್ರಾಯವನ್ನು ಬದಲಾಯಿಸಲು ಕಾರಣ ತೋರಲಿಲ್ಲ. ಈಗಿನ ನನ್ನ ಅಭಿಪ್ರಾಯಗಳಿಗೂ, ಈ ಗ್ರಂಥ ವಿಷಯಕ್ಕೂ ಯಾವ ಸಂಬಂಧವೂ ಇಲ್ಲವೆಂದು ನನಗೆ ಗೊತ್ತು, ಆದರೆ ಅದರ ವಿಷಯ ಪ್ರಸ್ತಾಪಿಸಲು ಎರಡು ಕಾರಣಗಳಿವೆ. ಆತುರದಲ್ಲಿ ಈ ಪುಸ್ತಕವನ್ನು ಓದುವವನು ಸಾವಧಾನವಾಗಿ ಮನಸ್ಸಿಟ್ಟು ಓದುತ್ತಾನೆಂದು ನಂಬಲು ನನಗೆ ಯಾವ ಆಧಾರವೂ ಇಲ್ಲ; ಅಂತಹ ವಾಚಕನು ಮೇಲ್ಕಂಡ ನನ್ನ ಅಭಿಪ್ರಾಯ ವನ್ನು ಈಗಿನ ನನ್ನ ಕಾರ್ಯನೀತಿಯೊಂದಿಗೆ ಸರಿದೂಗಿಸಲು ಪ್ರಯತ್ನ ಪಟ್ಟರೆ ಕಷ್ಟವಾಗುತ್ತದೆ. ಎರಡನೆಯದಾಗಿ ಮೇಲ್ಕಂಡ ವಾದ ಸರಣಿಯ ಮೂಲತತ್ವ ಸತ್ಯಾಗ್ರಹ; ಸತ್ಯವನ್ನೇ ಎತ್ತಿಹಿಡಿಯುವುದು. ನಾವು ಇದ್ದಂತೆ ಹೊರಗೂ ಕಾಣಿಸಿಕೊಂಡು ಅದರಂತೆಯೇ ನಡೆಯುವುದು ಧರ್ಮಾಚರಣೆಯ ಮೊದಲನೆಯ ಮೆಟ್ಟಲು. ಅಂತಹ ತಳಹದಿ ಇಲ್ಲದೆ ಧಾರ್ಮಿಕ ಜೀವನವನ್ನು ನಡೆಸುವುದು ಅಸಾಧ್ಯ.

ನಮ್ಮ ಕಥೆಯನ್ನು ಮುಂದುವರಿಸೋಣ. ಅನೇಕರು ನನ್ನ ವಾದ ಸರಣಿಯನ್ನು ಒಪ್ಪಿದರು. ಆರೀತಿ ವಾದಮಾಡಿದವನು ನಾನೊಬ್ಬನೇ ಇರಲಿಲ್ಲ. ಈ ಅಭಿಪ್ರಾಯವನ್ನು ಹೊರಗಡಹುವ ಮುಂಚೆಯೇ ಯುದ್ಧ ದಲ್ಲಿ ತಮ್ಮ ಕೈಲಾದ ಸಹಾಯ ಮಾಡಬೇಕೆಂದು ಕೆಲವರು ಅಭಿಪ್ರಾಯ ಪಟ್ಟಿದ್ದರು. ಯುದ್ಧದ ಚಂಡಮಾರುತ ಬೀಸುತ್ತಿರುವಾಗ ಭಾರತೀಯ ಆರ್ತಧ್ವನಿಗೆ ಕಿವಿಗೊಡುವವರು ಯಾರು ಎಂಬುದು ಈಗ ಮುಖ್ಯ ಪ್ರಶ್ನೆ

ಆಯಿತು. ಈ ಸಹಕಾರ ಹಸ್ತದ ಬೆಲೆಯಾದರೂ ಏನು? ನಾವು ಯಾರೂ ಆಯುಧವನ್ನು ಮುಟ್ಟಿದವರಲ್ಲ. ರಣರಂಗದಲ್ಲಿ ಆಯುಧ ಹಿಡಿದು ಕಾದಾಡದಿರುವವರು ಮಾಡಬೇಕಾದ ಕೆಲಸಕ್ಕೂ ಪೂರ್ವಸಿದ್ಧತೆ ಆವಶ್ಯಕವಿತ್ತು. ಹೇಗೆ ನಡೆಯಬೇಕೆಂಬುದು ಸಹ ನಮಗಾರಿಗೂ ತಿಳಿದಿರಲಿಲ್ಲ. ಹೆಗಲಮೇಲೆ ಸಾಮಾನುಗಳನ್ನು ಹೊತ್ತುಕೊಂಡು ದೂರ ದಾರಿಗಳನ್ನು ಪ್ರಯಾಣ ಮಾಡುವುದು ಅಷ್ಟು ಸುಲಭದ ಕೆಲಸವಲ್ಲ. ಬಿಳಿಯವರು ನಮ್ಮನ್ನು ಕೂಲಿಗಳೆಂದು ಅಪಮಾನಗೊಳಿಸಿ ಹೀಯಾಳಿಸುತ್ತಾರೆ. ಇದೆಲ್ಲವನ್ನೂ ಸಹಿಸುವುದು ಹೇಗೆ? ನಮ್ಮ ಸೇವೆಯನ್ನು ಸಲ್ಲಿಸಲು ನಾವು ಸಿದ್ಧರಿದ್ದರೂ, ಅದನ್ನು ಸ್ವೀಕರಿಸುವಂತೆ ಸರಕಾರವನ್ನು ಒಪ್ಪಿಸುವುದು ಹೇಗೆ? ಕೊನೆಗೆ ನಮ್ಮ ಸಹಾಯವನ್ನು ಸರಕಾರ ಅಂಗೀಕರಿಸುವಂತೆ ಸರ್ವ ಪ್ರಯತ್ನವನ್ನೂ ಮಾಡಬೇಕು; ಕೆಲಸದ ಅನುಭವದಿಂದ ಮತ್ತಷ್ಟು ಕೆಲಸ ಮಾಡಲು ಕಲಿಯಬಹುದು; ಮನವಿದ್ದಲ್ಲಿ ಸೇವೆಗೆ ದೈವಸಹಾಯವೂ ಒದಗುವುದು; ನಮಗೆ ಕೊಟ್ಟ ಕೆಲಸವನ್ನು ನಿರ್ವಹಿಸುವುದು ಹೇಗೆ ಎಂಬ ಸಲುವಾಗಿ ಯೋಚಿಸಬೇಕಾದ್ದಿಲ್ಲ; ನಮ್ಮ ಶಕ್ತಿ ಇರುವ ತನಕ ಒಳ್ಳೆಯ ತರಪೇತು ಪಡೆಯಬೇಕು; ಸೇವೆಗೆ ನಿಂತಮೇಲೆ ಮೇಲು ಕೀಳೆಂಬ ಭಾವನೆಗಳನ್ನು ಬಿಟ್ಟು, ಅಪಮಾನಿತರಾದರೂ ಸಹಿಸಿಕೊಳ್ಳಬೇಕು ಎಂದು ತೀರ್ಮಾನಿಸಿದೆವು.

ನಮ್ಮ ಸಹಾಯವನ್ನು ಅಂಗೀಕರಿಸುವಂತೆ ಮಾಡಲು ಅಸಾಧ್ಯ ತೊಂದರೆಗಳನ್ನು ಎದುರಿಸಬೇಕಾಯಿತು. ಕಥೆ ಬಹಳ ಸ್ವಾರಸ್ಯವಾಗಿದ್ದರೂ ಹೇಳಲು ಇಲ್ಲಿ ಅವಕಾಶವಿಲ್ಲ. ನಮ್ಮ ಮುಖಂಡರು ಗಾಯಗೊಂಡವರಿಗೂ ಕಾಹಿಲೆಯವರಿಗೂ ಶುಶ್ರೂಷೆ ನಡಸುವುದರಲ್ಲಿ ಶಿಕ್ಷಣ ಪಡೆದು ದೇಹಾರೋಗ್ಯದ ಬಗ್ಗೆ ವೈದ್ಯಕೀಯ ಪ್ರಶಸ್ತಿಪತ್ರಗಳನ್ನು ಪಡೆದು ಸರಕಾರಕ್ಕೆ ಮನವಿ ಮಾಡಿಕೊಂಡೆವು. ಈ ಪತ್ರವೂ ಸರಕಾರ ಯಾವ ಕೆಲಸವನ್ನು ಕೊಟ್ಟರೂ ಮಾಡಲು ಸಿದ್ಧರಿರುತ್ತೇವೆಂಬ ಭರವಸೆಯೂ ಬಹಳ ಒಳ್ಳೆಯ ಪರಿಣಾಮವನ್ನುಂಟುಮಾಡಿದುವು. ಸರಕಾರ ನಮ್ಮನ್ನು ವಂದಿಸಿ, ನಮ್ಮ ಸಹಾಯ ಬೇಕಾಗಿಲ್ಲವೆಂದು ತಿರಸ್ಕರಿಸಿತು. ಇಷ್ಟುಹೊತ್ತಿಗೆ ಬೋಅರರು ಪ್ರವಾಹದೋಪಾದಿಯಲ್ಲಿ

ಮುನ್ನುಗ್ಗುತ್ತಿದ್ದರು ; ಡರ್ಬಾನ್ ಪಟ್ಟಣವನ್ನೂ ಆಕ್ರಮಿಸಬಹುದೆಂಬ ಭೀತಿ ತಲೆದೋರಿತು. ಎಲ್ಲಿ ನೋಡಿದರೂ ಗಾಯಗೊಂಡವರೂ, ಸತ್ತವರೂ ರಾಶಿರಾಶಿಯಾಗಿ ಬಿದ್ದಿದ್ದರು. ನಮ್ಮ ಸಹಕಾರವನ್ನು ಪದೇಪದೇ ಸರಕಾರದ ಮುಂದೆ ಇಡುತ್ತಿದ್ದೆವು. ಕೊನೆಗೆ ಭಾರತೀಯ ಚಿಕಿತ್ಸಾ ಪಡೆಯೊಂದರ ರಚನೆಗೆ ಅಪ್ಪಣೆ ದೊರಕಿತು. ಆಸ್ಪತ್ರೆಯಲ್ಲಿ ಕಸ ಗುಡಿಸುವವರಾಗಿ ಝಾಡಮಾಲಿಗಳಾಗಿ ಸಹ ಕೆಲಸಮಾಡಲು ಸಿದ್ಧರಿರುವುದಾಗಿ ನಾವು ತಿಳಿಸಿದ್ದೆವು. ಆದ್ದರಿಂದ ಚಿಕಿತ್ಸಾಪಡೆಯ ಯೋಚನೆ ಬಹಳ ಸಂತೋಷವನ್ನುಂಟುಮಾಡಿತು. ಮೊದಲು ಸ್ವತಂತ್ರ ಮತ್ತು ವಾಯಿದೆ ವಿಮುಕ್ತ ಕೆಲಸಗಾರರ ಪರವಾಗಿ ನಾವು ನಮ್ಮ ಸಹಾಯವನ್ನು ನೀಡಿದ್ದೆವು. ಆದರೆ ವಾಯಿದೆ ಕೆಲಸಗಾರರಿಗೆ ಸಹ ನಮ್ಮೊಂದಿಗೆ ಸೇರಲು ಅಪ್ಪಣೆ ಕೊಡುವುದು ಒಳ್ಳೆಯದೆಂದು ತಿಳಿಸಿದ್ದೆವು. ಸರಕಾರಕ್ಕೆ ಆದಷ್ಟು ಜನರ ಸಹಾಯ ಆಗ ಅಗತ್ಯವಿದ್ದ ಕಾರಣ, ವಾಯಿದೆ ಕೆಲಸಗಾರರು ಸ್ವಯಂಸೇವಕರಾಗಿ ಬರುವುದಾದರೆ ಅವರಿಗೆ ಅವಕಾಶ ಕೊಡಬೇಕೆಂದು ಸರಕಾರ ಬಂಡವಾಳಗಾರರನ್ನು ಕೇಳಿತು. ಈ ರೀತಿ ಒಂದು ಸಾವಿರದ ಒಂದು ನೂರು ಜನ ಭಾರತೀಯರ ದೊಡ್ಡ ಸುಸಜ್ಜಿತ ಚಿಕಿತ್ಸಾ ಪಡೆ ಡರ್ಬಾನಿನಿಂದ ಯುದ್ಧರಂಗಕ್ಕೆ ಹೊರಟಿತು. ಹೊರಡುವಾಗ ಎಸ್ಕಾಂಬ್ ಅವರ ಅಭಿನಂದನೆಗಳೂ ಆಶೀರ್ವಾದವೂ ನಮಗೆ ದೊರಕಿತು. ಅವರ ಹೆಸರು ವಾಚಕರಿಗೆ ಆಗಲೇ ಪರಿಚಯವಾಗಿದೆ. ಆಗ ಅವರು ನೇಟಾಲಿನಲ್ಲಿ ಯೂರೋಪಿಯನ್ ಸ್ವಯಂಸೇವಕ ದಳದ ನಾಯಕರಾಗಿದ್ದರು.

ಇಂಗ್ಲಿಷ್ ಪತ್ರಿಕಾಕರ್ತರಿಗೆ ಇದೆಲ್ಲ ಬಹಳ ವಿಸ್ಮಯವನ್ನುಂಟು ಮಾಡಿತು. ಭಾರತೀಯರು ಯುದ್ಧದಲ್ಲಿ ಯಾವ ಭಾಗವನ್ನೂ ವಹಿಸುವುದಿಲ್ಲವೆಂದು ಎಲ್ಲರ ಭಾವನೆಯಾಗಿತ್ತು. ಒಬ್ಬ ಇಂಗ್ಲಿಷ್ ಕವಿ ಒಂದು ಇಂಗ್ಲಿಷ್ ಪತ್ರಿಕೆಯಲ್ಲಿ ಭಾರತೀಯರನ್ನು ಹೊಗಳುತ್ತ "ಏನೆಂದರೂ ಸಾಮ್ರಾಜ್ಯದ ಮಕ್ಕಳು ನಾವು" ಎಂದು ಒಂದು ಕವನವನ್ನು ಸಹ ಬರೆದನು.

ನಮ್ಮ ಪಡೆಯಲ್ಲಿ ಸ್ವತಂತ್ರ ಭಾರತೀಯರು ಸೇರಿಸಿದ ಮುನ್ನೂರು ನಾನೂರು ಜನ ವಾಯಿದೆ ವಿಮುಕ್ತ ಕೆಲಸಗಾರರಿದ್ದರು. ಇವರಲ್ಲಿ

ಮೂವತ್ತೇಳು ಜನರನ್ನು, – ಅವರ ಹೆಸರಿನಲ್ಲಿ ಸರಕಾರಕ್ಕೆ ನಮ್ಮ ಮನವಿ ಕಳುಹಿಸಿದ್ದುದರಿಂದಲೂ ಮತ್ತು ಅವರು ಅನೇಕರನ್ನು ನಮ್ಮ ಪಡೆಗೆ ತಂದು ಸೇರಿಸಿದ್ದುದರಿಂದಲೂ – ಮುಖಂಡರನ್ನಾಗಿ ಕಾಣುತ್ತಿದ್ದೆವು. ಈ ಮುಖಂಡರುಗಳಲ್ಲಿ ನ್ಯಾಯವಾದಿಗಳೂ ಗುಮಾಸ್ತರುಗಳೂ ಇದ್ದರು. ಉಳಿದವರು ಗಾರೆ ಕೆಲಸದವರು, ಬಡಗಿಯವರು ಅಥವಾ ಸಾಧಾರಣ ಕೂಲಿಗಳು. ಹಿಂದೂಗಳು, ಮುಸಲ್ಮಾನರು, ಮದ್ರಾಸಿಗಳು ಮತ್ತು ಉತ್ತರ ಹಿಂದೂಸ್ಥಾನದವರು, ಎಲ್ಲ ಪಂಗಡ ಜಾತಿಗಳವರೂ ಆ ಪಡೆಯಲ್ಲಿ ಇದ್ದರು. ಅದರಲ್ಲಿ ವರ್ತಕರು ಯಾರೂ ಇರಲಿಲ್ಲ; ಆದರೆ ಅವರು ಬೇಕಾದಷ್ಟು ಧನಸಹಾಯ ಮಾಡಿದ್ದರು. ಸೈನ್ಯದ ಇಲಾಖೆಯಿಂದ ಬರುತ್ತಿದ್ದ ಸರಬರಾಯಿ ನಮ್ಮ ಪಡೆಗೆ ಸಾಕಾಗುತ್ತಿರಲಿಲ್ಲ. ಒಂದು ವೇಳೆ ಅಷ್ಟರಲ್ಲೇ ತೃಪ್ತಿಗೊಳ್ಳಬಹುದಾಗಿದ್ದರೂ ಆ ಕಠಿಣ ಜೀವನದಲ್ಲಿ ಹೊರಗಿನಿಂದ ಏನು ಸರಬರಾಯಿ ಬಂದಿದ್ದರೂ ಅನುಕೂಲವಾಗುತ್ತಿತ್ತು. ವರ್ತಕರು ಕೆಲವು ಆವಶ್ಯಕವಾದ ಸಾಮಾನುಗಳನ್ನು ಒದಗಿಸುವುದಾಗಿ ಒಪ್ಪಿದ್ದರು. ಅದರಂತೆ ನಮ್ಮ ಶುಶ್ರೂಷೆಯಲ್ಲಿದ್ದ ಗಾಯಗೊಂಡವರಿಗೆ ಸಿಹಿ ತಿಂಡಿಗಳು, ಸಿಗರೇಟುಗಳು ಮುಂತಾದ ಸಾಮಾನುಗಳನ್ನು ತಂದು ಕೊಟ್ಟು ಸಂತೋಷಗೊಳಿಸುತ್ತಿದ್ದರು. ಪಟ್ಟಣಗಳ ಹತ್ತಿರ ನಾವು ಬಿಡಾರ ಮಾಡಿದಾಗ ಅಲ್ಲಿಯ ವರ್ತಕರು ನಮ್ಮ ಆತಿಥ್ಯಕ್ಕೆ ತುಂಬ ಸಹಾಯ ಮಾಡುತ್ತಿದ್ದರು.

ನಮ್ಮ ಪಡೆಗೆ ಸೇರಿದ ವಾಯಿದೆ ಕೂಲಿಗಾರರ ಮೇಲೆ ಆಯಾ ಕಾರ್ಖಾನೆಗಳಿಂದ ಇಂಗ್ಲಿಷ್ ಓವರ್‌ಸಿಯರುಗಳು ಮೇಲ್ವಿಚಾರಣೆಗೆ ಬಂದಿದ್ದರು. ಆದರೆ ಅವರ ಕೆಲಸವೂ ನಮ್ಮ ಕೆಲಸವೂ ಒಂದೇ ಆಗಿತ್ತು. ನಾವೆಲ್ಲರೂ ಒಟ್ಟಿಗೆ ವಾಸಮಾಡಬೇಕಾಗಿದ್ದುದು ಅವರಿಗೂ ಬಹಳ ಪ್ರಿಯವಾಗಿತ್ತು; ಆ ಪಡೆಯ ಆಡಳಿತವೆಲ್ಲವೂ ಸ್ವಾಭಾವಿಕವಾಗಿ ನಮ್ಮ ಕೈಯಲ್ಲೇ ಇತ್ತು. ಈ ರೀತಿ ಒಟ್ಟು ಪಡೆ ಭಾರತೀಯ ಪಡೆ ಎಂದು ಹೆಸರಾಯಿತು, ಮತ್ತು ಅದು ಮಾಡಿದ ಸೇವೆಯಿಂದ ಭಾರತೀಯರಿಗೆ ಪ್ರಾಶಸ್ತ್ಯ ದೊರಕಿತು. ವಾಯಿದೆ ಕೆಲಸಗಾರರನ್ನು ಆ ಪಡೆಗೆ ಸೇರಿಸಿದ ಖ್ಯಾತಿ ನ್ಯಾಯವಾಗಿ ಭಾರತೀಯರದಲ್ಲ. ಅದು ಪ್ಲಾಂಟರುಗಳಿಗೇ

ನ್ಯಾಯವಾಗಿ ಸಲ್ಲಬೇಕು. ಆದರೆ ಆ ಚಿಕಿತ್ಸಾ ಪಡೆಯ ನಿರ್ಮಾಣವಾದ ಮೇಲೆ ಅದರ ಅತ್ಯುತ್ತಮ ವ್ಯವಸ್ಥೆಗೆ ಸಲ್ಲಬೇಕಾದ ಖ್ಯಾತಿ ಎಲ್ಲವೂ ಸ್ವತಂತ್ರ ಭಾರತೀಯರಿಗೆ, ಅಂದರೆ ಭಾರತೀಯ ಜನಾಂಗಕ್ಕೆ ಸಲ್ಲ ಬೇಕಾದ್ದೆಂಬುದು ನಿಸ್ಸಂದೇಹವಾದುದು. ಇದನ್ನು ಜನರಲ್ ಬುಲ್ಲರ್ ರವರು ತಮ್ಮ ಯುದ್ಧ ವರದಿಗಳಲ್ಲಿ ಒಪ್ಪಿರುತ್ತಾರೆ.

ನಮಗೆ ಪ್ರಥಮ ಚಿಕಿತ್ಸೆಯಲ್ಲಿ ಶಿಕ್ಷಣ ಕೊಟ್ಟ ಡಾಕ್ಟರ್ ಬೂತ್ ರವರು ವೈದ್ಯಾಧಿಕಾರಿಗಳಾಗಿ ನಮ್ಮ ಪಡೆಯನ್ನು ಸೇರಿದರು. ಅವರು ಬಹಳ ನಿಷ್ಕರಾದ ಕ್ರೈಸ್ತ ಮತ ಬೋಧಕರು. ಅವರ ಕೆಲಸ ಸಾಮಾನ್ಯ ವಾಗಿ ಭಾರತೀಯ ಕ್ರೈಸ್ತರೊಂದಿಗೆ ಇರುತ್ತಿದ್ದರೂ ಅವರು ಎಲ್ಲ ಜಾತಿಯ ಭಾರತೀಯರೊಡನೆ ಭೇದಭಾವವಿಲ್ಲದೆ ಸೇರುತ್ತಿದ್ದರು. ಮೇಲೆ ಹೇಳಿದ ಮೂವತ್ತೇಳು ಜನರಲ್ಲಿ ಅನೇಕ ಮುಖಂಡರು ಅವರ ಕೈಕೆಳಗೆ ಶಿಕ್ಷಣ ಪಡೆದಿದ್ದರು.

ಭಾರತೀಯರ ಪಡೆಯಂತೆ ಯೂರೋಪಿಯನ್ ಚಿಕಿತ್ಸಾ ಪಡೆಯೂ ಒಂದಿತ್ತು. ಎರಡು ಪಡೆಯವರೂ ಒಂದೇ ಸ್ಥಳದಲ್ಲಿ ಒಟ್ಟಿಗೆ ಕೆಲಸ ಮಾಡುತ್ತಿದ್ದೆವು.

ನಮ್ಮ ಮನವಿ ಪತ್ರದಲ್ಲಿ ನಾವು ಸರಕಾರಕ್ಕೆ ಯಾವ ಷರತ್ತನ್ನೂ ವಿಧಿಸಿರಲಿಲ್ಲ. ಆದರೆ ಸರಕಾರದ ಆಜ್ಞಾ ಪತ್ರದಲ್ಲಿ ನಾವು ಯುದ್ಧರಂಗ ಸಮೀಪದಲ್ಲಿ ಕೆಲಸ ಮಾಡಬೇಕಾದ್ದಿಲ್ಲವೆಂಬ ವಿನಾಯಿತಿ ಇತ್ತು. ಅಂದರೆ, ಸೈನ್ಯದ ಅಂಗವಾದ ಕಾಯಂ ಚಿಕಿತ್ಸಾ ಪಡೆಯವರು ಮಾತ್ರ ಯುದ್ಧರಂಗದಲ್ಲಿ ಗಾಯಗೊಂಡವರನ್ನು ತಂದು ಸೈನ್ಯದ ಹಿಂದೆ ಯುದ್ಧ ರಂಗದಿಂದ ದೂರ ಬಿಟ್ಟುಬರಬೇಕಾಗಿತ್ತು. ಕಾಯಂ ಚಿಕಿತ್ಸಾ ಪಡೆ ಯಿಂದ ನಿರ್ವಹಿಸಲು ಸಾಧ್ಯವಾಗದಷ್ಟು ಜನರು ಲೇಡಿಸ್ಮಿತ್ ಪಟ್ಟಣದಲ್ಲಿ ಗಾಯಗೊಂಡಿದ್ದಾರೆಂದು ತಿಳಿದೊಡನೆ, ಅಲ್ಲಿನ ಜನರಲ್ ವೈಟ್‌ರವರಿಗೆ ಕೂಡಲೆ ಸಹಾಯ ಒದಗಿಸಬೇಕೆಂದು ಜನರಲ್ ಬುಲ್ಲರ್‌ರವರು ಬಹಳ ಪ್ರಯತ್ನದಿಂದ ಯೂರೋಪಿಯನರ ತಾತ್ಕಾಲಿಕ ಚಿಕಿತ್ಸಾ ಪಡೆ ಯನ್ನೂ ಭಾರತೀಯರ ಪಡೆಯನ್ನೂ ಸೇರಿಸಿದರು. ಯುದ್ಧ ನಡೆ ಯುತ್ತಿದ್ದ ಒಳಪ್ರದೇಶದಲ್ಲಿ ಯುದ್ಧರಂಗಕ್ಕೂ ಗಾಯಗೊಂಡವರ

ಆಸ್ಪತ್ರೆಗೂ ಮಧ್ಯೆ ತಯಾರಾದ ರಸ್ತೆಗಳು ಇರಲಿಲ್ಲ. ಆದ್ದರಿಂದ ಸಾಮಾನ್ಯ ವಾಹನಗಳ ಮೂಲಕ ಗಾಯಗೊಂಡವರನ್ನು ಸಾಗಿಸುವುದು ಅಸಾಧ್ಯವಾಗಿತ್ತು. ಗಾಯಗೊಂಡವರಿಗೆ ಚಿಕಿತ್ಸೆಮಾಡುವ ಮೂಲ ಆಸ್ಪತ್ರೆ ಯಾವಾಗಲೂ ಯುದ್ಧರಂಗದಿಂದ ಏಳರಿಂದ ಇಪ್ಪತ್ತೈದು ಮೈಲಿಗಳ ದೂರದಲ್ಲಿ, ಸಾಮಾನ್ಯವಾಗಿ ಒಂದು ರೈಲ್ವೆ ಸ್ಟೇಷನ್ ಬಳಿ ಇರುತ್ತಲಿತ್ತು.

ಸ್ವಲ್ಪ ಕಾಲದಲ್ಲಿಯೇ ನಮಗೆ ಕೆಲಸ ದೊರೆಯಿತು, ನಾವು ಯೋಚಿಸಿದ್ದಕ್ಕಿಂತ ಕಠಿಣವಾದ ಕೆಲಸ. ಗಾಯಗೊಂಡವರನ್ನು ಏಳು ಎಂಟು ಮೈಲಿಗಳ ದೂರ ಸಾಗಿಸುವುದು ಸಾಮಾನ್ಯ ಕೆಲಸವಾಯಿತು. ಆದರೆ ಕೆಲವು ವೇಳೆ ಬಹಳವಾಗಿ ಗಾಯಗೊಂಡ ಸೈನಿಕರನ್ನೂ ಅಧಿಕಾರಿಗಳನ್ನು ಇಪ್ಪತ್ತೈದು ಮೈಲಿಗಳ ದೂರ ಸಾಗಿಸಬೇಕಾಗಿತ್ತು. ಬೆಳಗಿನ ಎಂಟು ಗಂಟೆಗೆ ಪ್ರಯಾಣ ಪ್ರಾರಂಭಿಸುತ್ತಿದ್ದೆವು, ಮಧ್ಯೆ ದಾರಿಯಲ್ಲಿ ಔಷಧ ಕೊಡಬೇಕಾಗಿತ್ತು, ಸಂಜೆ ಐದು ಗಂಟೆಗೆ ಆಸ್ಪತ್ರೆಯನ್ನು ಸೇರಬೇಕಿತ್ತು. ಇದು ನಿಜವಾಗಿಯೂ ಕಷ್ಟವಾಗುತ್ತಿತ್ತು. ಒಂದು ಬಾರಿ ಮಾತ್ರ ನಾವು ಒಂದೇ ದಿನದಲ್ಲಿ ಇಪ್ಪತ್ತೈದು ಮೈಲಿಗಳ ದೂರ ಗಾಯಗೊಂಡವರನ್ನು ಸಾಗಿಸಬೇಕಾಯಿತು. ಅಲ್ಲದೆ ಯುದ್ಧಾರಂಭದಲ್ಲಿ ಬ್ರಿಟಿಷ್ ಸೈನ್ಯಕ್ಕೆ ಸೋಲಿನ ಮೇಲೆ ಸೋಲಾಯಿತು ; ಗಾಯಗೊಂಡವರ ಸಂಖ್ಯೆಯೂ ಹೆಚ್ಚಾಗಿತ್ತು. ಆದ್ದರಿಂದ ಅಧಿಕಾರಿಗಳು ರಣರಂಗದ ಹತ್ತಿರ ಬರಕೂಡದೆಂದು ಹಾಕಿದ ನಿರ್ಬಂಧವನ್ನು ಬಿಟ್ಟುಬಿಡಬೇಕಾಯಿತು. ಆದರೆ ಅಂತಹ ಸಂದರ್ಭಗಳಲ್ಲಿ ನಮ್ಮ ಒಪ್ಪಂದದಂತೆ ನಾವು ರಣರಂಗದ ಹತ್ತಿರ ಬರಬೇಕೆಂಬ ಒತ್ತಾಯವಿಲ್ಲವೆಂತಲೂ, ಅಪಾಯಕ್ಕೊಳಗಾಗಲು ನಮಗೆ ಇಷ್ಟವಿಲ್ಲದೆ ಹೋದರೆ, ಗುಂಡಿನೇಟಿನೆದುರಿನಲ್ಲಿ ಕೆಲಸಮಾಡಿಸಲು ಜನರಲ್ ಬುಲ್ಲರ್‌ರವರಿಗೆ ಇಷ್ಟವಿಲ್ಲವೆಂತಲೂ, ಆದರೆ ಸ್ವಂತ ಇಚ್ಛೆಯಿಂದ ಅಪಾಯಕ್ಕೊಳಗಾಗಿ ಕೆಲಸ ಮಾಡಿದರೆ ಬಹಳ ಕೃತಜ್ಞರಾಗಿರುವುದಾಗಿಯೂ ನಮಗೆ ತಿಳಿಸುತ್ತಿದ್ದರು. ಅಪಾಯ ಕ್ಷೇತ್ರದ ಒಳಗೆ ನುಗ್ಗಲು ನಾವು ಸದಾ ಸಿದ್ಧರಿದ್ದೆವು. ಹಿಂದೆ ನಿಲ್ಲುವುದು ನಮಗೆ ಇಷ್ಟ ಇರಲಿಲ್ಲ. ಆದ್ದರಿಂದ ಈ ಅವಕಾಶವನ್ನು ನಾವು

ಆದರದಿಂದ ಸ್ವಾಗತಿಸಿದೆವು. ಆದರೆ ನಮ್ಮಲ್ಲಿ ಯಾರಿಗೂ ಗುಂಡಿನ ಏಟಾಗಲಿ ಇನ್ನಾವ ಗಾಯವಾಗಲಿ ಆಗಲಿಲ್ಲ.

ನಮ್ಮ ಪಡೆಗೆ ಅನೇಕ ಸಂತೋಷಕರವಾದ ಅನುಭವಗಳು ದೊರೆತವು. ಅವುಗಳನ್ನು ಹೇಳಲು ಇಲ್ಲಿ ಅವಕಾಶವಿಲ್ಲ. ಆದರೆ ನಮ್ಮ ಪಡೆಯಲ್ಲಿ ಕೊಳಕು ಜನರೆಂದು ಹೆಸರಾದ ವಾಯಿದೆ ಕೂಲಿಗಳಿದ್ದರೂ ಅನೇಕ ವೇಳೆ ನಾವು ಯೂರೋಪಿಯನರೇ ಇರುವ ಹಂಗಾಮಿ ಚಿಕಿತ್ಸಾ ಪಡೆಯ ಮತ್ತು ಯೂರೋಪಿಯನ್ ಸೈನಿಕರ ಸಂಗಡ ಸೇರುವ ಸನ್ನಿವೇಶಗಳು ಒದಗುತ್ತಿದ್ದುವು. ಯೂರೋಪಿಯನರು ನಮ್ಮನ್ನು ಅಗೌರವದಿಂದಾಗಲಿ, ತಿರಸ್ಕಾರದಿಂದಾಗಲಿ ಕಂಡುದು ನಮ್ಮಲ್ಲಿ ಯಾರಿಗೂ ಅನುಭವಕ್ಕೆ ಬರಲಿಲ್ಲ. ಹಂಗಾಮಿ ಪಡೆಯಲಿದ್ದವರೆಲ್ಲ ಯುದ್ಧಕ್ಕೆ ಮುಂಚೆ ಭಾರತೀಯರ ವಿರುದ್ಧ ಚಳವಳಿ ನಡಸಿದ ದಕ್ಷಿಣ ಆಫ್ರಿಕದ ಯೂರೋಪಿಯನರು. ಆದರೆ ಭಾರತೀಯರು ತಮ್ಮ ತಪ್ಪೆಲ್ಲ ವನ್ನೂ ಮರೆತು, ತಮ್ಮ ಆಪತ್ಕಾಲದಲ್ಲಿ ಸಹಾಯಕ್ಕೆ ಬಂದಿದ್ದಾರೆಂದು ಆಗಿನ ಮಟ್ಟಿಗಾದರೂ ಅವರ ಹೃದಯ ಪರಿವರ್ತನೆಯಾಯಿತು. ನಮ್ಮ ಕೆಲಸದ ವಿಷಯವನ್ನು ಜನರಲ್ ಬುಲ್ಲರ್‌ರವರು ತಮ್ಮ ವರದಿಗಳಲ್ಲಿ ಮೆಚ್ಚಿದ್ದರು ಎಂಬುದನ್ನು ತಿಳಿಸಿದ್ದೇನೆ. ಮೂವತ್ತೇಳು ಜನ ನಾಯಕ ರಿಗೂ ಯುದ್ಧದ ಬಹುಮಾನಗಳು ಬಂದುವು. ಸುಮಾರು ಎರಡು ತಿಂಗಳ ಒಳಗೆ ಲೇಡಿಸ್ಮಿತ್ ಪಟ್ಟಣದ ಸಹಾಯಾರ್ಥವಾಗಿ ಜನರಲ್ ಬುಲ್ಲರ್ ಕೈಗೊಂಡ ಕೆಲಸಗಳು ಮುಗಿದ ಒಡನೆ ನಮ್ಮ ಪಡೆಯನ್ನೂ ಯೂರೋಪಿಯನ್ ಪಡೆಯನ್ನೂ ರದ್ದುಗೊಳಿಸಲಾಗಿತ್ತು. ಇದಾದ ಮೇಲೆ ಯುದ್ಧ ಇನ್ನೂ ಬಹಳ ಕಾಲ ನಡೆಯಿತು. ಪುನಃ ಚಿಕಿತ್ಸಾಪಡೆ ಸೇರಲು ನಾವು ಯಾವಾಗಲೂ ಸಿದ್ಧರಿದ್ದೆವು. ನಮ್ಮ ಪಡೆಯನ್ನು ರದ್ದು ಗೊಳಿಸಿದ ನಿರೂಪದಲ್ಲಿ ಪುನಃ ಯುದ್ಧ ಉಲ್ಬಣವಾಗಿ, ಅವಶ್ಯವೆಂದು ತೋರಿದರೆ ಪುನಃ ನಮ್ಮ ಸಹಾಯ ಕೋರುವುದಾಗಿ ಸರ್ಕಾರದವರು ತಿಳಿಸಿದ್ದರು.

ಯುದ್ಧಕ್ಕೆ ದಕ್ಷಿಣ ಆಫ್ರಿಕದಲ್ಲಿನ ಭಾರತೀಯರು ಮಾಡಿದ ಈ ಸಹಾಯ ಅತ್ಯಲ್ಪವಾದುದು. ಯಾರೂ ಪ್ರಾಣವನ್ನು ಕಳೆದುಕೊಳ್ಳಲಿಲ್ಲ.

ಅದಕ್ಕೂ ಸಹಾಯ ಮಾಡಬೇಕೆಂಬ ನಿಜವಾದ ಅಭಿಲಾಷೆ ಇದ್ದರೆ ಎದುರು ಪಕ್ಷದ ಮೇಲೆ ಪರಿಣಾಮ ಆಗುವುದು ಖಂಡಿತ. ಆ ಸಹಾಯ ಅನಿರೀಕ್ಷಿತವಾದರೆ ಅದರ ಬೆಲೆ ಇಮ್ಮಡಿಯಾಗುತ್ತದೆ. ಭಾರತೀಯರ ಮೇಲಿನ ಈ ಒಳ್ಳೆಯ ಅಭಿಪ್ರಾಯ ಯುದ್ಧ ಮುಗಿಯುವವರೆಗೂ ಇತ್ತು.

ಈ ಪ್ರಕರಣವನ್ನು ಮುಗಿಸುವ ಮುಂಚೆ ಒಂದು ಮುಖ್ಯ ವಿಷಯವನ್ನು ತಿಳಿಸಬೇಕೆಂದಿದ್ದೇನೆ. ಬೋಅರರು ಲೇಡಿಸ್ಮಿತ್ ಮುತ್ತಿದಾಗ ಇಂಗ್ಲಿಷ್ ಜನರಲ್ಲದೆ ಅಲ್ಲಿ ಕೆಲವು ಭಾರತೀಯರೂ ಇದ್ದರು. ಇವರಲ್ಲಿ ಕೆಲವರು ವರ್ತಕರು. ಇನ್ನು ಕೆಲವರು ವಾಯಿದೆ ಕೂಲಿಗಳು. ರೈಲ್ವೆ ಕಂಪೆನಿಗಳಲ್ಲಿ ಯೂರೋಪಿಯನರ ಚಾಕರರಾಗಿ ಕೆಲಸ ಮಾಡುತ್ತಿದ್ದವರು ಕೆಲವರು. ಅವರಲ್ಲಿ ಪರ್ಭುಸಿಂಗ್ ಎಂಬಾತನೊಬ್ಬ. ಲೇಡಿಸ್ಮಿತ್‌ನ ಅಧಿಕಾರಿ ಊರಿನ ಪ್ರತಿಯೊಬ್ಬ ನಿವಾಸಿಗೂ ಒಂದೊಂದು ಕೆಲಸವನ್ನು ನೇಮಿಸಿದನು. ಪರ್ಭುಸಿಂಗ್ ಕೂಲಿಯಾದ್ದರಿಂದ ಬಹಳ ಕಷ್ಟದ ಜವಾಬ್ದಾರಿ ಕೆಲಸ ಅವನ ಪಾಲಿಗೆ ಬಿತ್ತು. ಬೋಅರರು ಲೇಡಿಸ್ಮಿತ್ ಹತ್ತಿರ ಒಂದು ಗುಡ್ಡದ ಮೇಲೆ ಒಂದು ಫಿರಂಗಿಯನ್ನು ಇಟ್ಟಿದ್ದರು. ಅದರ ಹಾವಳಿಯಿಂದ ಅನೇಕ ಮನೆಗಳು ನಾಶವಾದುವಲ್ಲದೆ ಕೆಲವರ ಪ್ರಾಣವೂ ಹೋಯಿತು. ಫಿರಂಗಿಯಿಂದ 'ಷೆಲ್' ಹಾರಿಸಿದ ಮೇಲೆ ಅದು ದೂರದ ಗುರಿಯನ್ನು ಮುಟ್ಟಲು ಒಂದೆರಡು ನಿಮಿಷಗಳಾದರೂ ಬೇಕಿತ್ತು. ಕೋಟೆಯ ಒಳಗೆ ಇರುವವರಿಗೆ ಅಷ್ಟು ಕಾಲಾವಕಾಶ ದೊರೆತರೂ ಆ ಷೆಲ್ ಪಟ್ಟಣದೊಳಗೆ ಬೀಳುವ ಮುಂಚೆ ಅಡಗಿಕೊಂಡು ಏಟು ತಪ್ಪಿಸಿಕೊಳ್ಳಬಹುದಾಗಿತ್ತು. ಪರ್ಭುಸಿಂಗನು ಆ ಫಿರಂಗಿ ಕೆಲಸ ಮಾಡುತ್ತಿದ್ದಾಗಲೆಲ್ಲ ಗುಡ್ಡದ ಕಡೆಗೇ ಕಣ್ಣಿಟ್ಟು ಒಂದು ಮರದ ಮೇಲೆ ಕುಳಿತು, ಗುಂಡು ಹಾರಿಸಿದ ಬೆಂಕಿ ಕಂಡೊಡನೆ ಒಂದು ಗಂಟೆಯನ್ನು ಬಾರಿಸಬೇಕಾಗಿತ್ತು. ಗಂಟೆಯ ಶಬ್ದ ಕೇಳಿದ ಒಡನೆ ಲೇಡಿಸ್ಮಿತ್ ನಿವಾಸಿಗಳು ಮರೆಯಲ್ಲಿ ಅವಿತು ಫಿರಂಗಿಯ ಗುಂಡಿನೇಟಿನಿಂದ ಪಾರಾಗುತ್ತಿದ್ದರು. ಈ ರೀತಿ ಆ ಗುಂಡಿನ ವಿಪತ್ತು ಗೊತ್ತಾಗುತ್ತಿತ್ತು.

ಪರ್ಭುಸಿಂಗನು ಮಾಡಿದ ಈ ಅಮೂಲ್ಯ ಸೇವೆಗೆ ಲೇಡಿಸ್ಮಿತ್‌ನ ಅಧಿಕಾರಿ ವಂದನೆಗಳನ್ನು ಅರ್ಪಿಸುತ್ತ, ಒಂದು ಸಲವೂ ಗಂಟೆಬಾರಿಸಲು

ತಪ್ಪದೆ ಬಹಳ ನಿಷ್ಠೆಯಿಂದ ಕೆಲಸಮಾಡಿದನೆಂದು ಕೊಂಡಾಡಿದನು. ಪರ್ಭುಸಿಂಗನ ಪ್ರಾಣ ಯಾವಾಗಲೂ ಅಪಾಯದಲ್ಲಿತ್ತು. ಆತನ ಕೀರ್ತಿ ನೇಟಾಲನ್ನು ಮುಟ್ಟಿತು. ಆಗ ಹಿಂದೂಸ್ಥಾನದ ವೈಸರಾಯ್ ಆಗಿದ್ದ ಲಾರ್ಡ್ ಕರ್ಜನ್ನರ ಕಿವಿಯನ್ನೂ ಮುಟ್ಟಿತು. ಪರ್ಭುಸಿಂಗನಿಗೆ ಒಂದು ಕಾಶ್ಮೀರದ ಶಾಲನ್ನು ಕಳುಹಿಸಿ ಅದಷ್ಟು ಬಹಿರಂಗವಾಗಿ ಆತನಿಗೆ ಕೊಟ್ಟು ಸನ್ಮಾನಿಸಬೇಕೆಂದು ನೇಟಾಲ್ ಸರಕಾರಕ್ಕೆ ಬರೆದರು. ಈ ಕೆಲಸವನ್ನು ಡರ್ಬಾನಿನ ಮೇಯರು ಅಲ್ಲಿನ ನಗರಭವನದಲ್ಲಿ ದೊಡ್ಡ ಬಹಿರಂಗಸಭೆ ಸೇರಿಸಿ ನೆರವೇರಿಸಿದರು. ಈ ಸಂಗತಿಯಿಂದ ನಾವು ಎರಡು ವಿಷಯಗಳನ್ನು ಕಲಿಯಬೇಕಾಗಿದೆ. ಮನುಷ್ಯನು ಎಷ್ಟೇ ಬಡವನಾಗಿ ಅನಾಮಧೇಯನಾಗಿದ್ದರೂ ಯಾರನ್ನೂ ಕಡೆಗಣಿಸಬಾರ ದೆಂಬುದು ಮೊದಲನೆಯದು. ಮನುಷ್ಯನು ಎಷ್ಟೇ ಹಿಂದೇಟು ಹಾಕು ತ್ತಿದ್ದರೂ, ಪರೀಕ್ಷಾ ಸಮಯ ಬಂದರೆ ಹೇಡಿಯೂ ಹುಲಿಯಾಗಬಲ್ಲ ನೆಂಬುದು ಎರಡನೆಯದು.

## ೧೦. ಯುದ್ಧ ಮುಗಿದ ಮೇಲೆ

ಯುದ್ಧ ಅತ್ಯಂತ ವಿಷಮಾವಸ್ಥೆಗೆ ಬಂದುದು ೧೯೦೦ರಲ್ಲಿ. ಲೇಡಿ ಸ್ಮಿತ್, ಕಿಂಬರ್ಲಿ, ಮ್ಯಾಫೆಕಿಂಗ್ ಪಟ್ಟಣಗಳನ್ನು ಮುತ್ತಿಗೆಯಿಂದ ಪಾರು ಗಾಣಿಸಲಾಗಿತ್ತು. ಪಾರ್ಡಿಬರ್ಗ್‌ನಲ್ಲಿ ಜನರಲ್ ಕ್ರಾನ್ಜಿಯವರು ಶರಣಾಗತರಾದರು. ಬೋಅರರು ಆಕ್ರಮಿಸಿದ್ದ ಬ್ರಿಟಿಷ್ ಪ್ರಾಂತ ಗಳ ಅನೇಕ ಭಾಗಗಳನ್ನು ಪುನಃ ಕಸಿದುಕೊಳ್ಳಲಾಗಿತ್ತು. ಲಾರ್ಡ್ ಕಿಚನರ್‌ನು ಟ್ರಾನ್ಸ್‌ವಾಲಿನಲ್ಲೂ ಆರೆಂಜ್ ಫ್ರೀ ಸ್ಟೇಟ್‌ನಲ್ಲೂ ವಿಜಯಿಯಾಗಿದ್ದನು. ಅಲ್ಲಲ್ಲಿ ಗೆರಿಲ್ಲ ಯುದ್ಧ ಮಾತ್ರ ನಡೆಯುತ್ತಿತ್ತು.

ಈಗ ದಕ್ಷಿಣ ಆಫ್ರಿಕದಲ್ಲಿ ನನ್ನ ಕೆಲಸ ಮುಗಿಯಿತೆಂದುಕೊಂಡೆ. ಮೊದಲು ಯೋಚಿಸಿದ ಒಂದು ತಿಂಗಳಿಗೆ ಬದಲು ಆರು ವರ್ಷಗಳು ಅಲ್ಲಿ ನಿಂತೆ. ನಮ್ಮ ಮುಂದಿನ ಕೆಲಸದ ರೂಪರೇಖೆ ನಿಶ್ಚಿತವಾಗಿತ್ತು. ಆದರೂ ನಮ್ಮ ಜನರ ಮನಃಪೂರ್ವಕ ಒಪ್ಪಿಗೆ ಇಲ್ಲದೆ ನಾನು ದಕ್ಷಿಣ ಆಫ್ರಿಕ ಬಿಟ್ಟುಹೊರಡುವಂತೆ ಇರಲಿಲ್ಲ. ಭಾರತದಲ್ಲಿ ಸಾರ್ವಜನಿಕ ಕಾರ್ಯವನ್ನು

ಕೈಗೊಳ್ಳುವುದಾಗಿ ನಾನು ನಮ್ಮ ಜನರಿಗೆ ತಿಳಿಸಿದೆ. ಸ್ವಾರ್ಥಕ್ಕಿಂತ ಸೇವೆಯ ಮಹತ್ವ ಏನೆಂಬುದನ್ನು ದಕ್ಷಿಣ ಆಫ್ರಿಕದಲ್ಲಿ ಅರಿತುಕೊಂಡು, ಅಂತಹ ಸೇವೆಯನ್ನು ಸಲ್ಲಿಸಲು ಆತುರನಾಗಿದ್ದೆ. ಮನ್ಸುಖಲಾಲ್ ನಾಜರ್ ಅವರು ಮತ್ತು ಖಾನ್‌ರವರು ಅಲ್ಲಿದ್ದರು. ದಕ್ಷಿಣ ಆಫ್ರಿಕದಲ್ಲಿಯೇ ಹುಟ್ಟಿ ಬೆಳೆದ ಭಾರತೀಯ ತರುಣರು ಕೆಲವರು ಇಂಗ್ಲೆಂಡಿಗೆ ಹೋಗಿ ಬ್ಯಾರಿಸ್ಟರ್ ಪದವಿಯನ್ನು ಪಡೆದು ಹಿಂದಿರುಗಿದ್ದರು. ಈ ಸಂದರ್ಭದಲ್ಲಿ ನಾನು ಭಾರತಕ್ಕೆ ಹಿಂದಿರುಗುವುದರಲ್ಲಿ ನಷ್ಟವೇನೂ ಇರಲಿಲ್ಲ. ಈ ಎಲ್ಲ ಕಾರಣಗಳನ್ನು ನಮ್ಮ ಜನರಿಗೆ ತಿಳಿಸಿದ ಮೇಲೆ, ದಕ್ಷಿಣ ಆಫ್ರಿಕದಲ್ಲಿ ನಾನು ಸ್ವತಃ ಇರಬೇಕಾದ ಪ್ರಸಂಗಗಳು ಅನಿರೀಕ್ಷಿತವಾಗಿ ಒದಗಿದರೆ, ನನ್ನನ್ನು ಯಾವಾಗ ಬೇಕಾದರೂ ಹಿಂದಕ್ಕೆ ಕರಸಿಕೊಳ್ಳಬಹುದಾಗಿಯೂ ಒಡನೆಯೇ ದಕ್ಷಿಣ ಆಫ್ರಿಕಕ್ಕೆ ಹಿಂದಿರುಗುವುದಾಗಿಯೂ ಭರವಸೆಕೊಟ್ಟ ಮೇಲೆ ಭಾರತಕ್ಕೆ ಹಿಂದಿರುಗಲು ನನಗೆ ಅಪ್ಪಣೆ ದೊರೆಯಿತು. ಆಗ ನನ್ನ ಪ್ರಯಾಣದ ವೆಚ್ಚವನ್ನೂ ವಹಿಸಿಕೊಳ್ಳುವುದಾಗಿ ಒಪ್ಪಿದರು. ಈ ವ್ಯವಸ್ಥೆಗೆ ಒಪ್ಪಿ ನಾನು ಭಾರತಕ್ಕೆ ಹಿಂದಿರುಗಿದೆ.

ಮುಖ್ಯವಾಗಿ ಗೋಖಲೆಯವರ ಬುದ್ಧಿವಾದ ಮತ್ತು ಮಾರ್ಗದರ್ಶಿತ್ವಗಳಲ್ಲಿ ಸಾರ್ವಜನಿಕ ಸೇವೆಯನ್ನು ಕೈಕೊಳ್ಳಬೇಕೆಂದೂ ಎರಡನೆಯದಾಗಿ ಸಾರ್ವಜನಿಕ ಕೆಲಸದ ಜೊತೆಯಲ್ಲಿ ಜೀವನೋಪಾಯವನ್ನು ದೊರಕಿಸಿಕೊಳ್ಳಬೇಕೆಂದೂ ಬೊಂಬಾಯಿಯಲ್ಲಿ ವಕೀಲಿ ವೃತ್ತಿಯನ್ನು ಮಾಡಲು ನಿಶ್ಚಯಿಸಿ, ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ವೃತ್ತಿ ಜೀವನವನ್ನು ಆರಂಭಿಸಿದೆ. ಸ್ವಲ್ಪ ಕೆಲಸವೂ ದೊರೆಯಿತು. ದಕ್ಷಿಣ ಆಫ್ರಿಕದಲ್ಲಿ ನನಗೆ ಆದ ಪರಿಚಯದಿಂದ, ಅಲ್ಲಿಂದ ಹಿಂದಿರುಗಿದ ಜನರೇ ನನಗೆ ಕೆಲಸ ಕೊಡುತ್ತಿದ್ದರು. ಅಷ್ಟೇ ನನ್ನ ಜೀವನಕ್ಕೆ ಸಾಕಾಗಿತ್ತು. ಆದರೆ ಈ ಜನ್ಮದಲ್ಲಿ ನನಗೆ ಶಾಂತಿ ದೊರೆಯುವಂತೆ ಇರಲಿಲ್ಲ. ಬೊಂಬಾಯಿಯಲ್ಲಿರುತ್ತ ಮೂರು ನಾಲ್ಕು ತಿಂಗಳಾಗುವ ಮುಂಚೆಯೇ ಆಫ್ರಿಕದಲ್ಲಿ ಪರಿಸ್ಥಿತಿ ಬಹಳ ಕ್ರೂರವಾಗಿದೆ ಎಂದೂ ಸದ್ಯದಲ್ಲಿಯೇ ಚೇಂಬರ್ಲಿನರು ಬರಲಿರುವರೆಂದೂ ನಾನು ಅಲ್ಲಿ

ಪ್ರತ್ಯಕ್ಷ ಇರಬೇಕಾದ್ದು ಅತ್ಯವಶ್ಯವೆಂದೂ ಕೇಬಲ್ ಬಂದಿತು. ಬೊಂಬಾಯಿಯಲ್ಲಿ ನನ್ನ ಕಚೇರಿಗೂ ಮನೆಯ ಬಾಗಿಲಿಗೂ ಬೀಗ ಹಾಕಿ ಮೊದಲು ದೊರೆತ ಹಡಗಿನಲ್ಲಿಯೇ ದಕ್ಷಿಣ ಆಫ್ರಿಕಕ್ಕೆ ಹೊರಟೆ. ಇದು ನಡೆದುದು ೧೯೦೨ನೆಯ ಕೊನೆಯ ಹೊತ್ತಿಗೆ. ೧೯೦೧ನೆಯ ಕೊನೆಯ ಹೊತ್ತಿಗೆ ಭಾರತಕ್ಕೆ ಬಂದು, ೧೯೦೨ನೆಯ ಮಾರ್ಚಿ ಸುಮಾರಿನಲ್ಲಿ ಬೊಂಬಾಯಿಯಲ್ಲಿ ನನ್ನ ಕಚೇರಿ ಆರಂಭಿಸಿದ್ದೆ. ಆ ತಂತಿ ವರ್ತಮಾನ ದಲ್ಲಿ ವಿವರಗಳಾವುವೂ ಇರಲಿಲ್ಲ. ಟ್ರಾನ್ಸ್‌ವಾಲಿನಲ್ಲಿ ತೊಂದರೆ ಪ್ರಾರಂಭವಾಗಿರಬೇಕೆಂದು ಊಹಿಸಿದೆ. ಆದರೆ ನಾಲ್ಕಾರು ತಿಂಗಳಲ್ಲಿ ಹಿಂದಿರುಗಬಹುದೆಂದು ನನ್ನ ಮನೆಯವರನ್ನು ಭಾರತದಲ್ಲೇ ಬಿಟ್ಟು ದಕ್ಷಿಣ ಆಫ್ರಿಕಕ್ಕೆ ಹೊರಟೆ. ಡರ್ಬಾನ್ ನಗರವನ್ನು ಮುಟ್ಟಿ ಅಲ್ಲಿನ ವಿಷಯಗಳನ್ನು ಕೇಳಿದೊಡನೆ ನನಗೆ ಸಿಡಿಲು ಹೊಡೆದಂತಾಯಿತು. ಯುದ್ಧ ಮುಗಿದೊಡನೆ ದಕ್ಷಿಣ ಆಫ್ರಿಕದಲ್ಲೆಲ್ಲ ಭಾರತೀಯರ ಸ್ಥಿತಿ ಉತ್ತಮ ಗೊಳ್ಳಬಹುದೆಂದು ನಮ್ಮಲ್ಲಿ ಅನೇಕರು ನಂಬಿದ್ದೆವು. ಲಾರ್ಡ್ ಲ್ಯಾನ್ಸ್‌ಡೌನ್, ಲಾರ್ಡ್ ಸೆಲ್ಬೋರನ್ ಮುಂತಾದ ಮಹಾ ಪ್ರಮುಖರು, ಯುದ್ಧವನ್ನು ಪ್ರಾರಂಭಿಸಿದಾಗ ಬೋಅರರು ಭಾರತೀಯರಿಗೆ ಕೊಟ್ಟ ಹಿಂಸೆಯೂ ಒಂದು ಕಾರಣವೆಂದು ಘೋಷಿಸಿದ್ದರಿಂದ, ಟ್ರಾನ್ಸ್‌ವಾಲ್ ಮತ್ತು ಆರೆಂಜ್ ಫ್ರೀ ಸ್ಟೇಟ್‌ಗಳಲ್ಲಂತೂ ನಾವು ಯಾವ ತೊಂದರೆ ಯನ್ನೂ ನಿರೀಕ್ಷಿಸಿರಲಿಲ್ಲ. ಟ್ರಾನ್ಸ್‌ವಾಲ್ ಬ್ರಿಟಿಷ್ ವಲಸೆರಾಷ್ಟ್ರ ಆದೊಡನೆ ಭಾರತೀಯರ ಕಷ್ಟಗಳೆಲ್ಲವೂ ನಿವಾರಣೆಯಾಗುವುದೆಂದು ಪ್ರಿಟೋರಿಯ ಬ್ರಿಟಿಷ್ ಪ್ರತಿನಿಧಿ ಅನೇಕ ಬಾರಿ ನನಗೆ ತಿಳಿಸಿದ್ದನು. ಟ್ರಾನ್ಸ್‌ವಾಲ್ ಈಗ ಬ್ರಿಟಿಷ್ ಬಾವುಟದ ಅಡಿಯಲ್ಲಿ ಬಂದ ಕಾರಣ, ಭಾರತೀಯ ವಿರುದ್ಧ ಬೋಅರ್ ಸರಕಾರ ಮಾಡಿದ್ದ ಶಾಸನಗಳಾವುವೂ ಈಗ ಅನ್ವಯಿಸುವುದಿಲ್ಲವೆಂದು ಯೂರೋಪಿಯನರೂ ತಿಳಿದಿದ್ದರು. ಈ ಭಾವನೆ ಎಷ್ಟು ಹರಡಿತ್ತೆಂದರೆ, ಸ್ವತ್ತುಗಳ ಹರಾಜಿನಲ್ಲಿ ಮೊದಲು ಭಾರತೀಯರು ಸವಾಲು ಮಾಡಿದರೆ ಅಂಗೀಕರಿಸದಿದ್ದ ಮಾರಾಟಗಾರರು ಈಗ ಭಾರತೀಯರ ಸವಾಲುಗಳನ್ನು ಬಹಿರಂಗವಾಗಿಯೇ ಅಂಗೀಕರಿಸ ಲಾರಂಭಿಸಿದರು. ಈ ರೀತಿ ಅನೇಕ ಭಾರತೀಯರು ಭೂಮಿಯನ್ನು

ಕೊಂಡರು. ಆದರೆ ಆ ಕ್ರಯಪತ್ರಗಳನ್ನು ರಿಜಿಸ್ಟರ್ ಮಾಡಿಸಲು ರಿಜಿಸ್ಟ್ರೇಷನ್ ಅಧಿಕಾರಿಯ ಮುಂದೆ ಹೋದಾಗ ೧೮೮೫ನೆಯ ಇಸವಿಯ ಮೂರನೆಯ ಶಾಸನದಂತೆ ರಿಜಿಸ್ಟರ್ ಮಾಡುವುದಿಲ್ಲವೆಂದು ತಿರಸ್ಕರಿಸಿದನು! ಡರ್ಬಾನ್‌ನಲ್ಲಿ ನಾನು ಇಳಿದೊಡನೆ ಇದೆಲ್ಲವೂ ತಿಳಿಯಿತು. ಚೇಂಬರ್ಲೇನರು ಮೊದಲು ಡರ್ಬಾನಿಗೆ ಬರುವುದಾಗಿಯೂ ನೇಟಾಲಿನ ಎಲ್ಲ ಪರಿಸ್ಥಿತಿಯನ್ನೂ ಅವರಿಗೆ ತಿಳಿಸಿ ಅನಂತರ ನಾನು ಅವರೊಂದಿಗೆ ಟ್ರಾನ್ಸ್‌ವಾಲಿಗೆ ಹೋಗಬೇಕಾಗಿಯೂ ಮುಖಂಡರು ನನಗೆ ತಿಳಿಸಿದರು.

ಚೇಂಬರ್ಲಿನರನ್ನು ನೋಡಲು ಒಂದು ನಿಯೋಗ ಗೋಷ್ಠಿ ಹೋಗಿದ್ದಿತು. ಅವರು ತಾವು ಹೇಳಿದುದನ್ನು ಸಾವಧಾನವಾಗಿ ಕೇಳಿ ಆ ವಿಷಯವಾಗಿ ನಾವು ನೇಟಾಲ್ ಸರಕಾರದೊಂದಿಗೆ ಚರ್ಚಿಸುವುದಾಗಿ ಭರವಸೆ ಕೊಟ್ಟರು. ಯುದ್ಧಕ್ಕೆ ಮುಂಚೆ ನೇಟಾಲ್ ಸರಕಾರದವರು ಜಾರಿಗೆ ತಂದಿದ್ದ ಶಾಸನಗಳನ್ನು ಶೀಘ್ರದಲ್ಲಿಯೇ ತಿದ್ದುಪಡಿ ಮಾಡುವರೆಂಬ ಆಸೆ ನನಗೇನೂ ಇರಲಿಲ್ಲ. ಈ ಶಾಸನ ಸಭೆಗಳ ವಿಷಯ ಹಿಂದಿನ ಅಧ್ಯಾಯದಲ್ಲಿಯೇ ತಿಳಿಸಿದ್ದೇನೆ.

ವಾಚಕರಿಗೆ ತಿಳಿದಿರುವಂತೆ ಯುದ್ಧಕ್ಕೆ ಪೂರ್ವದಲ್ಲಿ ಯಾವ ಭಾರತೀಯನಾದರೂ ಯಾವಾಗಲಾದರೂ ಟ್ರಾನ್ಸ್‌ವಾಲನ್ನು ಪ್ರವೇಶಿಸಬಹುದಾಗಿತ್ತು. ಇನ್ನು ಮುಂದೆ ಅದು ಸಾಧ್ಯವಿರಲಿಲ್ಲ. ಈ ನಿರೋಧ ಭಾರತೀಯರಿಗೆ ಹೇಗೋ ಹಾಗೆ ಯೂರೋಪಿಯನರಿಗೂ ಅನ್ವಯಿಸುತ್ತಿದ್ದಿತು. ಯುದ್ಧ ಮುಗಿದ ಮೇಲೆ ಎಲ್ಲ ಅಂಗಡಿಗಳೂ ಇನ್ನೂ ತೆರೆದಿರಲಿಲ್ಲವಾದ್ದರಿಂದ ಒಟ್ಟಿಗೆ ಬಹಳ ಜನರು ಟ್ರಾನ್ಸ್‌ವಾಲಿಗೆ ಹೋಗಿದ್ದರೆ ಆಗಿನ ಸ್ಥಿತಿಯಲ್ಲಿ ಸಾಕಾದಷ್ಟು ಆಹಾರವೂ ಬಟ್ಟೆಯೂ ಸಿಕ್ಕುವಂತೆ ಇರಲಿಲ್ಲ. ಅಂಗಡಿಗಳಲ್ಲಿ ದಾಸ್ತಾನು ಇದ್ದ ಸಾಮಾನುಗಳೆಲ್ಲವನ್ನೂ ಬೋಅರ್ ಸರಕಾರ ನಿರ್ದಾಕ್ಷಿಣ್ಯವಾಗಿ ಮುಟ್ಟುಗೋಲು ಹಾಕಿಕೊಂಡಿತ್ತು. ಆದ್ದರಿಂದ ಈ ನಿರೋಧ ತಾತ್ಕಾಲಿಕವಾದರೆ ಯಾವ ಭಯಕ್ಕೂ ಕಾರಣವಿಲ್ಲವೆಂದು ಭಾವಿಸಿದೆ. ಆದರೆ ರಹದಾರಿಗಳನ್ನು ಪಡೆಯುವುದರಲ್ಲಿ ಯೂರೋಪಿಯನರು ಅನುಸರಿಸಬೇಕಾಗಿದ್ದ ನಿಯಮಗಳಿಗೂ ಭಾರತಿಯರು ಅನುಸರಿಸಬೇಕಾಗಿದ್ದ ನಿಯಮಗಳಿಗೂ ವ್ಯತ್ಯಾಸ ತೋರಿದ್ದರಿಂದ ನಮಗೆ ಅನು

ಮಾನವೂ ಭಯವೂ ಹುಟ್ಟಿದುವು. ದಕ್ಷಿಣ ಆಫ್ರಿಕದ ಬಂದರುಗಳಲ್ಲಿ ಅಲ್ಲಲ್ಲಿ ರಹದಾರಿ ಕಚೇರಿಗಳನ್ನಿಟ್ಟರು. ಯೂರೋಪಿಯನರಿಗೆ ಕೇಳಿದೊಡನೆ ರಹದಾರಿ ದೊರೆಯುತ್ತಿತ್ತು. ಆದರೆ ಟ್ರಾನ್ಸ್‌ವಾಲಿನಲ್ಲಿ ಭಾರತೀಯರ ಪ್ರಶ್ನೆಯ ಪರಿಶೀಲನೆಗಾಗಿಯೇ 'ಏಷ್ಯಾಟಿಕ್ ಡಿಪಾರ್ಟ್‌ಮೆಂಟ್' ಎಂಬ ಶಾಖೆಯನ್ನು ಪ್ರಾರಂಭಿಸಿದರು. ಈ ರೀತಿ ಮಾಡಿದ್ದು ಒಂದು ಹೊಸ ಮಾರ್ಗ. ಭಾರತೀಯರು ಮೊದಲು ಈ ಇಲಾಖೆಯ ಮುಖ್ಯಾಧಿಕಾರಿಗೆ ಅರ್ಜಿಯನ್ನು ಕೊಡಬೇಕಾಗಿತ್ತು. ಆತನು ಅವರ ಅರ್ಜಿಯನ್ನು ಅಂಗೀಕರಿಸಿದ ಮೇಲೆ ಡರ್ಬಾನಿನಲ್ಲೊ ಅಥವಾ ಬೇರೆ ಯಾವ ಬಂದರಿನಲ್ಲೊ ರಹದಾರಿಯನ್ನು ಪಡೆಯಬೇಕಾಗಿತ್ತು. ಈ ಎಲ್ಲ ವಿಧಿಗಳನ್ನನುಸರಿಸಿ ರಹದಾರಿಯನ್ನು ಪಡೆಯಬೇಕಾದರೆ ಚೇಂಬರ್ಲಿನರು ಟ್ರಾನ್ಸ್‌ವಾಲ್ ಬಿಡುವ ಮುಂಚೆ ನನಗೆ ಅಪ್ಪಣೆ ದೊರೆಯುವ ಆಸೆಯೇ ಇರಲಿಲ್ಲ. ಟ್ರಾನ್ಸ್‌ವಾಲಿನ ಭಾರತೀಯರು ನನಗೆ ರಹದಾರಿ ಕೊಡಿಸಲು ಸಾಧ್ಯವಿರಲಿಲ್ಲ. ಅದು ಅವರ ಶಕ್ತಿಯನ್ನು ಮೀರಿತ್ತು. ಡರ್ಬಾನಿನಲ್ಲಿ ನನಗೆ ಇದ್ದ ಪರಿಚಯ ಮತ್ತು ಸಹಾಯದಿಂದ ನಾನು ಅಪ್ಪಣೆ ಪಡೆಯಬಹುದೆಂದು ಅವರು ನಂಬಿದ್ದರು. ನನಗೆ ರಹದಾರಿ ಅಧಿಕಾರಿಯ ಪರಿಚಯವಿರಲಿಲ್ಲ. ಆದರೆ ಪೊಲೀಸ್ ಸೂಪರಿಂಟೆಂಡೆಂಟರ ಪರಿಚಯ ಇದ್ದುದರಿಂದ ಅವರನ್ನು ನನ್ನೊಂದಿಗೆ ರಹದಾರಿ ಕಚೇರಿಗೆ ಬರಬೇಕೆಂದು ಕೇಳಿದ್ದಕ್ಕೆ ಒಪ್ಪಿ, ಬೇಕಾದ ಭರವಸೆಯನ್ನೂ ಕೊಟ್ಟರು. ೧೮೯೩ರಲ್ಲಿ ಪ್ರಿಟೋರಿಯಾದಲ್ಲಿ ಒಂದು ವರ್ಷ ವಾಸವಾಗಿದ್ದೆನೆಂಬ ಆಧಾರದ ಮೇಲೆ ರಹದಾರಿಯನ್ನು ಪಡೆದು ಪ್ರಿಟೋರಿಯಾ ಸೇರಿದೆ.

ಪ್ರಿಟೋರಿಯಾ ವಾತಾವರಣ ನಿಜವಾಗಿಯೂ ಪ್ರಕ್ಷುಬ್ಧವಾಗಿತ್ತು. ಏಷ್ಯಾಟಿಕ್ ಇಲಾಖೆ ಭಾರತೀಯರ ಮೇಲೆ ದಬ್ಬಾಳಿಕೆ ನಡಸುವ ಒಂದು ಭೀಕರ ಯಂತ್ರವಾಗಿತ್ತು. ಯುದ್ಧ ಕಾಲದಲ್ಲಿ ಇಂಡಿಯದಿಂದ ದಕ್ಷಿಣ ಆಫ್ರಿಕಕ್ಕೆ ಬಂದ ಸೈನ್ಯದೊಂದಿಗೆ ಬಂದು ತಮ್ಮ ಅದೃಷ್ಟ ಪರೀಕ್ಷೆಗೆಂದು ಅಲ್ಲಿಯೇ ನೆಲಸಿದ್ದ ಜೂಜುಕೋರರೇ ಅಲ್ಲಿನ ಅಧಿಕಾರಿಗಳು. ಅವರಲ್ಲಿ ಕೆಲವರು ಲಂಚಕೋರರು. ಇಬ್ಬರು ಅಧಿಕಾರಿಗಳನ್ನು ಲಂಚ ತೆಗೆದುಕೊಂಡರೆಂದು ಮೊಕದ್ದಮೆಗೆ ಸಹ ಗುರಿಪಡಿಸಲಾಗಿತ್ತು. ಅವರು ತಪ್ಪಿತಸ್ಥ

ರಲ್ಲವೆಂದು ನ್ಯಾಯಸ್ಥಾನದಲ್ಲಿ ಪಂಚಾಯಿತರು ಅಭಿಪ್ರಾಯಪಟ್ಟರೂ, ಅವರು ತಪ್ಪಿತಸ್ಥರೆಂಬ ವಿಷಯದಲ್ಲಿ ಸರಕಾರಕ್ಕೆ ಯಾವ ಅನುಮಾನವೂ ಇರಲಿಲ್ಲವಾದ್ದರಿಂದ ಅವರನ್ನು ಕೆಲಸದಿಂದ ನಿವೃತ್ತಿಮಾಡಲಾಯಿತು. ಎಲ್ಲೆಲ್ಲೂ ಪಕ್ಷಪಾತ ತುಂಬಿತ್ತು. ಒಂದು ಪ್ರತ್ಯೇಕ ಶಾಖೆಯ ಸ್ಥಾಪನೆಗೆ ಮತ್ತು ಸಾರ್ಥಕತೆಗೆ ಪ್ರಜೆಗಳ ಹಕ್ಕು ಬಾಧ್ಯತೆಗಳನ್ನು ಮೊಟಕು ಮಾಡುವುದೇ ಮುಖ್ಯ ಕಾರಣವಾದಾಗ, ಆ ಇಲಾಖೆಯ ಅಧಿಕಾರಿಗಳು ತಮ್ಮ ಸ್ಥಾನಭದ್ರತೆಗೂ ತಮ್ಮ ಕಾರ್ಯನಿರ್ವಹಣ ಶಕ್ತಿಪ್ರದರ್ಶನಕ್ಕೂ ಪ್ರಜೆಗಳ ಮೇಲೆ ಪದೇಪದೇ ಹೊಸ ನಿರ್ಬಂಧಗಳನ್ನು ನಿರ್ಮಿಸುವ ಮನೋವೃತ್ತಿ ತೋರುವುದು ಸ್ವಾಭಾವಿಕ. ಇಲ್ಲಿಯೂ ಅದೇರೀತಿ ಆಯಿತು.

ನನ್ನ ಕೆಲಸವನ್ನು ಮೊದಲಿಂದ ಪ್ರಾರಂಭಿಸಬೇಕಾಗಿ ಕಂಡು ಬಂದಿತು. ಟ್ರಾನ್ಸ್‌ವಾಲಿಗೆ ನಾನು ಹೇಗೆ ಬಂದೆನೆಂಬುದು ಏಷ್ಯಾಟಿಕ್ ಇಲಾಖೆಯವರಿಗೆ ಅರ್ಥವಾಗಲಿಲ್ಲ. ನನ್ನನ್ನೇ ಕೇಳುವಷ್ಟು ಧೈರ್ಯ ಅವರಿಗೆ ಇರಲಿಲ್ಲ. ಎಲ್ಲಿಯೋ ಕಳ್ಳತನದಿಂದ ತಪ್ಪಿಸಿಕೊಂಡು ಬಂದೆ ನೆಂದು ಅವರು ತಿಳಿದುಕೊಂಡಿರಬೇಕು. ನನಗೆ ರಹದಾರಿ ಪತ್ರ ಸಿಕ್ಕಿದ ರೀತಿಯನ್ನು ಹಿಂದಿನಿಂದ ಪರೋಕ್ಷವಾಗಿ ತಿಳಿದುಕೊಂಡರು. ಪ್ರೆಟೋ ರಿಯಾದ ಒಂದು ನಿಯೋಗಗೋಷ್ಠಿ ಚೇಂಬರ್ಲೀನರನ್ನು ಕಂಡಿತು. ಅವರಿಗೆ ಕೊಡಬೇಕೆಂದಿದ್ದ ನಮ್ಮ ವಿಜ್ಞಾಪನಾ ಪತ್ರವನ್ನು ನಾನೇ ಖರಡು ಬರೆದೆನು. ಆದರೆ ನಿಯೋಗ ಗೋಷ್ಠಿಯಲ್ಲಿರಲು ನನಗೆ ಏಷ್ಯಾ ಟಿಕ್ ಇಲಾಖೆಯವರು ಅವಕಾಶ ಕೊಡಲಿಲ್ಲ. ತಮ್ಮೊಂದಿಗೆ ನಿಯೋಗ ಹೋಗಲು ನನಗೆ ಅವಕಾಶ ದೊರೆಯುದಿದ್ದರೆ ಚೇಂಬರ್ಲೀನರನ್ನು ನೋಡುವುದನ್ನೇ ಬಿಟ್ಟುಬಿಡಬೇಕೆಂದು ಭಾರತೀಯರು ತೀರ್ಮಾನಿಸಿ ದರು. ಆದರೆ ನಾನು ಇದಕ್ಕೆ ಒಪ್ಪಲಿಲ್ಲ. ನನಗಾದ ಈ ಅಗೌರವವನ್ನು ನಾನು ಮನಸ್ಸಿಗೆ ತಂದುಕೊಳ್ಳುವುದಿಲ್ಲವಾಗಿಯೂ, ಅವರೂ ಅದೇ ರೀತಿ ಗಮನಿಸಕೂಡದಾಗಿಯೂ ಹೇಳಿದೆ. ನನ್ನ ಬಿನ್ನವತ್ತಳೆ ಸಿದ್ಧವಾಗಿತ್ತು; ಅದನ್ನು ಚೇಂಬರ್ಲೀನರಿಗೆ ಕೊಡಬೇಕಾದ್ದು ಮುಖ್ಯ ಕೆಲಸ. ಅಲ್ಲಿನ ಭಾರತೀಯ ಬ್ಯಾರಿಸ್ಟರಾದ ಜಾರ್ಜ್ ಗಾಡ್‌ಫ್ರೆ ಅವರು ಬಿನ್ನವತ್ತಳೆ ಯನ್ನು ಓದಬೇಕೆಂದು ತೀರ್ಮಾನಿಸಿದರು. ನಿಯೋಗ ಗೋಷ್ಠಿ

ಚೇಂಬರ್ಲೀನರನ್ನು ನೋಡಿದಾಗ, ಪ್ರಾಸಂಗಿಕವಾಗಿ ನನ್ನ ಹೆಸರು ಬಂದಾಗ, "ನಾನು ಗಾಂಧಿಯವರನ್ನು ಡರ್ಬಾನಿನಲ್ಲಿ ನೋಡಿದ್ದೆ. ಟ್ರಾನ್ಸ್‌ವಾಲ್ ನಿವಾಸಿಗಳಾದ ಭಾರತೀಯರಿಂದಲೇ ಇಲ್ಲಿನ ಸ್ಥಿತಿಗತಿಗಳನ್ನು ತಿಳಿಯೋಣವೆಂದು ಗಾಂಧಿಯವರನ್ನು ನೋಡುವುದಿಲ್ಲವೆಂದು ಹೇಳಿದೆ" ಎಂದರಂತೆ. ನನ್ನ ದೃಷ್ಟಿಯಿಂದ ಹಾಗೆ ಹೇಳಿದ್ದು ಬೆಂಕಿಗೆ ತುಪ್ಪ ಸುರಿದಂತಾಯಿತು. ಏಷ್ಯಾಟಿಕ್ ಇಲಾಖೆಯವರು ಹೇಳಿಕೊಟ್ಟ ಪಾಠದಂತೆ ಚೇಂಬರ್ಲೀನರು ಉತ್ತರ ಹೇಳಿ, ಭಾರತದಲ್ಲಿನ ವಾತಾವರಣವನ್ನೇ ಟ್ರಾನ್ಸ್‌ವಾಲಿಗೂ ಅನ್ವಯಿಸಲು ಪ್ರಯತ್ನಿಸಿದರು. ಬ್ರಿಟಿಷ್ ಅಧಿಕಾರಿಗಳು ಬೊಂಬಾಯಿಯವರನ್ನು ಚಂಪಾರಣ್ಯದಲ್ಲಿ ವಿದೇಶೀಯರೆಂದು ಭಾವಿಸುವುದು ಎಲ್ಲರಿಗೂ ತಿಳಿದಿದೆ. ಅದೇ ವಾದದಂತೆ ಡರ್ಬಾನಿನಲ್ಲಿದ್ದ ನನಗೆ ಟ್ರಾನ್ಸ್‌ವಾಲ್ ಜನರ ಸ್ಥಿತಿ ಹೇಗೆ ತಿಳಿಯಬೇಕು? ಇದೇ ಏಷ್ಯಾಟಿಕ್ ಇಲಾಖೆಯವರು ಚೇಂಬರ್ಲೀನರಿಗೆ ಹೇಳಿಕೊಟ್ಟದ್ದು. ನಾನೂ ಟ್ರಾನ್ಸ್‌ವಾಲಿನಲ್ಲಿ ವಾಸವಾಗಿದ್ದೆನೆಂಬುದೂ ಒಂದು ವೇಳೆ ವಾಸವಾಗಿಲ್ಲದಿದ್ದರೂ ಅಲ್ಲಿನ ಸ್ಥಿತಿಗಳೆಲ್ಲವೂ ನನಗೆ ಸಂಪೂರ್ಣ ತಿಳಿದಿದ್ದುವೆಂಬುದೂ ಅವರಿಗೆ ಗೊತ್ತಿರಲಿಲ್ಲ. ಸದ್ಯದ ಮುಖ್ಯ ಪ್ರಶ್ನೆ ಎಂದರೆ ಟ್ರಾನ್ಸ್‌ವಾಲಿನ ಪರಿಸ್ಥಿತಿ ಯಾರಿಗೆ ಚೆನ್ನಾಗಿ ತಿಳಿದಿತ್ತೆಂಬುದು. ಅಷ್ಟು ದೂರದಿಂದ, ಭಾರತದಿಂದ ನನ್ನನ್ನು ಕರೆಯಿಸಿ, ಭಾರತೀಯರು ಆಗಲೆ ಆ ಪ್ರಶ್ನೆಗೆ ಉತ್ತರ ಕೊಟ್ಟಿದ್ದರು. ಆದರೆ ಅಧಿಕಾರದಲ್ಲಿರುವವರಿಗೆ ಸಕಾರಣ ವಾದ ರುಚಿಸಲಿಲ್ಲ. ಇದು ಹೊಸ ಅನುಭವವೇನಲ್ಲ. ಚೇಂಬರ್ಲೀನರು ಆಗ ಸಂಪೂರ್ಣ ಸ್ಥಳೀಯ ಅಧಿಕಾರಿಗಳ ಪ್ರಭಾವಕ್ಕೆ ಒಳಗಾಗಿದ್ದುದರಿಂದಲೂ ಯೂರೋಪಿಯನರನ್ನು ತೃಪ್ತಿಗೊಳಿಸುವುದೇ ಅವರ ಮುಖ್ಯ ಉದ್ದೇಶವಾಗಿದ್ದುದರಿಂದಲೂ ಅವರಿಂದ ನಮಗೆ ನ್ಯಾಯ ದೊರೆಯುವುದೆಂಬ ಆಸೆ ಸ್ವಲ್ಪವೂ ಇರಲಿಲ್ಲ. ಆದರೂ, ಅಜಾಗರೂಕತೆಯಿಂದಾಗಲಿ ನಮ್ಮ ಪ್ರತಿಷ್ಠೆಗೆ ಕುಂದು ಬಂದೀತೆಂಬ ನೆಪದಿಂದಾಗಲಿ ಪರಿಹಾರ ಪಡೆಯಲು ನಮಗಿದ್ದ ಯಾವ ನ್ಯಾಯಮಾರ್ಗವನ್ನೂ ಬಿಟ್ಟಿಲ್ಲವೆಂದು ತೋರಿಸಲು ನಿಯೋಗ ಗೋಷ್ಠಿ ಚೇಂಬರ್ಲೀನರನ್ನು ನೋಡಿತು.

೧೮೯೩ರಲ್ಲಿ ನನಗೆ ಒದಗಿದ್ದ ಪರಿಸ್ಥಿತಿಗಿಂತ ಈಗ ಇನ್ನೂ ಕಠಿಣ ಸಂದಿಗ್ಧ ಪರಿಸ್ಥಿತಿ ಒದಗಿತು. ಚೇಂಬರ್ಲಿನರು ದಕ್ಷಿಣ ಆಫ್ರಿಕದಿಂದ ಹಿಂದಿರುಗಿದೊಡನೆ ನಾನು ಭಾರತಕ್ಕೆ ಹಿಂದಿರುಗಬಹುದೆಂದು ಒಂದು ದೃಷ್ಟಿಯಿಂದ ಯೋಚಿಸಿದೆ. ಆದರೆ ದಕ್ಷಿಣ ಆಫ್ರಿಕದಲ್ಲಿ ಭಾರತೀಯರಿಗೆ ಒದಗಿದ್ದ ಕ್ರೂರ ಪರಿಸ್ಥಿತಿಯನ್ನು ತಿಳಿದೂತಿಳಿದೂ, ಅದಕ್ಕೂ ದೊಡ್ಡ ಕಾರ್ಯಕ್ಷೇತ್ರದಲ್ಲಿ ಸಾರ್ವಜನಿಕ ಸೇವೆ ಮಾಡಬಹುದೆಂದು ನಾನು ಭಾರತಕ್ಕೆ ಹಿಂದಿರುಗಿದರೆ, ನನ್ನ ಸಾರ್ವಜನಿಕ ಸೇವಾಕಾಂಕ್ಷೆಗೆ ಕಳಂಕ ತಂದಂತೆ ಆಗುತ್ತದೆಯೆಂದು ಇನ್ನೊಂದು ದೃಷ್ಟಿಯಿಂದ ಯೋಚಿಸಿದೆ. ನಮ್ಮ ಜನರಿಗೆ ಅದೇ ವಿಷಯ ವಿವರಿಸಿದೆ. ೧೮೯೩ರಲ್ಲಿ ತೀರ್ಮಾನಿಸಿದಂತೆ ವಕೀಲಿ ವೃತ್ತಿಯಿಂದ ನಾನು ಜೀವನ ನಡಸುವುದಾಗಿ ತಿಳಿಸಿದೆ. ನಮ್ಮ ಜನರಿಗೂ ಅದೇ ಬೇಕಿತ್ತು. ಟ್ರಾನ್ಸ್ವಾಲಿನಲ್ಲಿ ನ್ಯಾಯವಾದಿಯಾಗಿರಲು ಅವಕಾಶ ಕೊಡಬೇಕೆಂದು ನಾನು ಅರ್ಜಿ ಹಾಕಿದೆ. ನ್ಯಾಯವಾದಿ ಸಂಘದವರು ಇಲ್ಲಿಯೂ ನನ್ನ ಅರ್ಜಿಯನ್ನು ವಿರೋಧಿಸುವರೆಂಬ ಭಯವಿತ್ತು; ಆದರೆ ಅದಕ್ಕೆ ಬುಡವಿಲ್ಲದಾಯಿತು. ಸುಪ್ರೀಂ ಕೋರ್ಟಿನ ನ್ಯಾಯವಾದಿಯಾಗಿ ಜೋಹನೆಸ್‌ಬರ್ಗಿನಲ್ಲಿ ನನ್ನ ಕಚೇರಿಯನ್ನು ಪ್ರಾರಂಭಿಸಿದೆ. ಟ್ರಾನ್ಸ್ವಾಲಿನ ಎಲ್ಲ ಸ್ಥಳಗಳಿಗಿಂತ ಜೋಹನೆಸ್‌ಬರ್ಗಿನಲ್ಲಿಯೇ ಭಾರತೀಯರ ಸಂಖ್ಯೆ ಹೆಚ್ಚು ಇದ್ದುದರಿಂದ ನನ್ನ ಜೀವನಕ್ಕೂ ಸಾರ್ವಜನಿಕ ಕೆಲಸಗಳಿಗೂ ಹೆಚ್ಚು ಅನುಕೂಲವೆಂದು ಆ ಪಟ್ಟಣವನ್ನು ಆರಿಸಿದೆ. ಏಷ್ಯಾಟಿಕ್ ಇಲಾಖೆಯ ಲಂಚಕೋರ ತನದ ವಿಷಮಯ ವಾತಾವರಣ ನನಗೆ ದಿನೇದಿನೇ ಹೆಚ್ಚು ಅನುಭವಕ್ಕೆ ಬರಲಾರಂಭವಾಯಿತು. ಟ್ರಾನ್ಸ್ವಾಲ್ ಬ್ರಿಟಿಷ್ ಭಾರತೀಯ ಸಂಸ್ಥೆಯ ಪ್ರಯತ್ನವೆಲ್ಲ ಈ ರೋಗಕ್ಕೆ ಮದ್ದು ಹುಡುಕುವುದರಲ್ಲಾಯಿತು. ೧೮೮೫ನೆಯ ಮೂರನೆಯ ಶಾಸನವನ್ನು ರದ್ದುಗೊಳಿಸುವ ಪ್ರಯತ್ನ ದೂರ ಸರಿಯಿತು. ಏಷ್ಯಾಟಿಕ್ ಇಲಾಖೆಯ ಹಾವಳಿಯನ್ನು ಎದುರಿಸಿ ನಮ್ಮ ಬಚಾವಣೆ ನೋಡಿಕೊಳ್ಳುವುದೇ ನಮಗೆ ಮುಖ್ಯ ಕೆಲಸವಾಯಿತು. ಅಲ್ಲಿಗೆ ಬಂದಿದ್ದ ಲಾರ್ಡ್ ಮಿಲ್ನರ್, ಲಾರ್ಡ್ ಸೆಲ್ಬೋರನ್, ಮುಂದೆ ಮದರಾಸ್ ಗವರ್ನರ್ ಆದ, ಆಗ ಟ್ರಾನ್ಸ್ವಾಲ್ ಲೆಫ್ಟಿನೆಂಟ್

ಗವರ್ನರಾಗಿದ್ದ ಸರ್ ಆರ್ಥರ್ ಲಾಲಿ ಮತ್ತು ಇತರ ಸಣ್ಣ ಪುಟ್ಟ ಅಧಿಕಾರಿಗಳ ಬಳಿಗೆ ಭಾರತೀಯರು ನಿಯೋಗ ಗೋಷ್ಠಿಗಳನ್ನು ಕಳುಹಿಸಿದರು. ಅಲ್ಲಲ್ಲಿ ಸ್ವಲ್ಪ ಅನುಕೂಲವಾದರೂ ಎಲ್ಲವೂ ತೇಪೆ ಕೆಲಸ ಆಗಿತ್ತು. ಎಲ್ಲವನ್ನೂ ದೋಚಿಕೊಂಡ ಕಳ್ಳರಿಗೆ ಮೊರೆಯಿಟ್ಟು, ಅವರು ಕೊಟ್ಟ ಅಲ್ಪ ವಸ್ತುಗಳಿಂದ ಸಮಾಧಾನ ಹೊಂದುವವನಂತೆ ಆಗ ನಮ್ಮ ಪರಿಸ್ಥಿತಿ ಇತ್ತು. ಈ ಚಳವಳಿಯ ಪರಿಣಾಮವಾಗಿಯೇ ನಾನು ಹಿಂದೆ ತಿಳಿಸಿರುವಂತೆ ಅಧಿಕಾರಿಗಳನ್ನು ಲಂಚಕೋರತನಕ್ಕಾಗಿ ವಿಚಾರಣೆಗೆ ಗುರಿಪಡಿಸಿದ್ದು. ಈ ನಿರ್ಬಂಧಗಳೆಲ್ಲ ಭಾರತೀಯರು ವಲಸೆ ಬಾರದಂತೆ ತಡೆಗಟ್ಟುವುದಕ್ಕೆ ಎಂದು ಮಾಡಿದ್ದ ನಮ್ಮ ಊಹೆ ನಿಜವಾಯಿತು. ಯೂರೋಪಿಯನರಿಂದ ಯಾವ ರಹದಾರಿಗಳನ್ನೂ ಕೇಳುತ್ತ ಇರಲಿಲ್ಲ; ಆದರೆ ಭಾರತೀಯರಿಗೆ ಮಾತ್ರ ರಹದಾರಿ ಅನಿವಾರ್ಯವಾಯಿತು. ಹಿಂದಿನ ಬೋಅರ್ ಸರಕಾರ ಭಾರತೀಯ ವಿರುದ್ಧ ಶಾಸನಗಳನ್ನು ನಿರ್ಬಂಧದಿಂದ ಆಚರಣೆಗೆ ತರುತ್ತಿರಲಿಲ್ಲ. ಇದಕ್ಕೆ ಮುಖ್ಯ ಕಾರಣ ಅವರ ಔದಾರ್ಯವಲ್ಲ, ಆದರೆ ಸಡಿಲವಾದ ಅವರ ಆಡಳಿತ ಪದ್ಧತಿ. ಉಪಕಾರಿಯಾದ ಅಧಿಕಾರಿಗೆ ಉಪಕಾರ ಮಾಡಲು ಬೋಅರ್ ಆಡಳಿತದಲ್ಲಿದ್ದ ಅವಕಾಶ ಬ್ರಿಟಿಷ್ ಸರಕಾರ ಪದ್ಧತಿಯಲ್ಲಿಲ್ಲ. ಇದು ಶುಷ್ಕ ಕಂದಾಚಾರದ ಪದ್ಧತಿ. ಅಧಿಕಾರಿಗಳು ನಿರ್ಜೀವ ಯಂತ್ರಗಳಂತೆ ಕೆಲಸ ಮಾಡಬೇಕು. ಅವರ ಕಾರ್ಯನಿರ್ವಾಹಕ ಶಕ್ತಿಗೆ ಹೆಜ್ಜೆಹೆಜ್ಜೆಗೂ ನಿರ್ಬಂಧಗಳಿವೆ. ಆದ್ದರಿಂದ ಬ್ರಿಟಿಷ್ ರಾಜ್ಯ ಪದ್ಧತಿಯಲ್ಲಿ ಸರಕಾರದ ಆಡಳಿತ ನೀತಿ ಉದಾರವಾದರೆ ಅದರಿಂದ ಪ್ರಜೆಗಳಿಗೆ ಹೆಚ್ಚಿನ ಪ್ರಯೋಜನ ಉಂಟು. ಆದರೆ ಆಡಳಿತ ನೀತಿ ದಬ್ಬಾಳಿಕೆಯಿಂದ ಕಠಿಣವಾದರೆ ಆಡಳಿತಗಾರರ ಕ್ರೌರ್ಯದ ಹೊರೆ ಎಲ್ಲವೂ ಪ್ರಜೆಗಳ ಮೇಲೆ ಬೀಳುತ್ತದೆ. ಬೋಅರ್ ರಿಪಬ್ಲಿಕ್ ಆಡಳಿತದಲ್ಲಿ ಈ ರೀತಿ ಇರಲಿಲ್ಲ. ಶಾಸನದ ಔದಾರ್ಯದ ಪೂರ್ಣಫಲವನ್ನು ಪಡೆಯುವುದು ಬಿಡುವುದು ಆಡಳಿತ ನಡಸುತ್ತಿದ್ದ ಅಧಿಕಾರಿಗಳನ್ನು ಅವಲಂಬಿಸಿತ್ತು. ಆದ್ದರಿಂದ ಟ್ರಾನ್ಸ್ವಾಲಿನಲ್ಲಿ ಬ್ರಿಟಿಷ್ ರಾಜ್ಯಾಧಿಕಾರ ಏರ್ಪಟ್ಟ ಒಡನೆ ಭಾರತೀಯ ವಿರೋಧಶಾಸನಗಳಿಗೆ ಜೀವಕಳೆ ತುಂಬಿದಂತಾಗಿ ದಿನದಿನಕ್ಕೂ ಅವುಗಳ

ಕಾಠಿಣ್ಯ ಹೆಚ್ಚಾಯಿತು. ಅವುಗಳಲ್ಲಿ ಎಲ್ಲಾದರೂ ಸಂದು ಇದ್ದರೆ ಮುಚ್ಚಲಾಯಿತು. ಈ ಶಾಸನಗಳ ಚಲಾವಣೆಯಲ್ಲಿ ಏಷ್ಯಾಟಿಕ್ ಇಲಾಖೆಯ ಅಧಿಕಾರಿಗಳು ನಿಷ್ಕರುಣಿಗಳಾಗಿದ್ದರೆಂಬುದನ್ನು ಹಿಂದೆಯೇ ನೋಡಿದ್ದೇವೆ. ಹಳೆಯ ಶಾಸನಗಳನ್ನು ರದ್ದುಗೊಳಿಸುವುದು ಅಸಾಧ್ಯವಾಯಿತು. ಆದ್ದರಿಂದ ಅವುಗಳ ಆಚರಣೆಯಲ್ಲಿನ ದಾರುಣತೆಯನ್ನು ನಿವಾರಿಸುವುದೊಂದೇ ಭಾರತೀಯರ ಕೆಲಸವಾಯಿತು.

ಈಗಲೊ ಮುಂದೆಯೊ ಒಂದು ತತ್ವವನ್ನು ವಿಚಾರ ಮಾಡುವುದು ಆವಶ್ಯಕ. ಈಗಲೇ ಅದನ್ನು ವಿಮರ್ಶೆ ಮಾಡಿದರೆ ಭಾರತೀಯರ ಮನೋಭಾವ ಮತ್ತು ಪರಿಸ್ಥಿತಿ ಬದಲಾಯಿಸಿದ ರೀತಿಯನ್ನು ತಿಳಿದುಕೊಳ್ಳಲು ಅನುಕೂಲವಾಗುತ್ತದೆ. ಟ್ರಾನ್ಸ್‌ವಾಲ್ ಮತ್ತು ಫ್ರೀ ಸ್ಟೇಟ್ ಎರಡೂ ಬ್ರಿಟಿಷ್ ರಾಜ್ಯಾಡಳಿತದಲ್ಲಿ ಸೇರಿದೊಡನೆ, ಪ್ರಜೆಗಳ ಸ್ವಾತಂತ್ರ್ಯಕ್ಕೆ ನಿರ್ಬಂಧವನ್ನುಂಟುಮಾಡುವ ಮತ್ತು ಬ್ರಿಟಿಷ್ ರಾಜ್ಯ ಪದ್ಧತಿಗೆ ವಿರೋಧವಾದ ಹಿಂದಿನ ರಿಪಬ್ಲಿಕ್‌ಗಳ ಶಾಸನಗಳ ಪಟ್ಟಿಯೊಂದನ್ನು ತಯಾರಿಸಲು ಲಾರ್ಡ್ ಮಿಲ್ನರ್ ಒಂದು ಸಮಿತಿಯನ್ನು ನೇಮಿಸಿದನು. ಭಾರತೀಯರಿಗೆ ವಿರುದ್ಧವಾದ ಎಲ್ಲ ಶಾಸನಗಳನ್ನೂ ಈ ಪಟ್ಟಿಯಲ್ಲಿ ಸೇರಿಸಬೇಕಾದ್ದು ಅವನ ಕರ್ತವ್ಯವಾಗಿತ್ತು. ಆದರೆ ಈ ಸಮಿತಿಯನ್ನು ನೇಮಿಸುವುದರಲ್ಲಿ ಲಾರ್ಡ್ ಮಿಲ್ನರ್‌ನ ಇಷ್ಟ ಭಾರತೀಯರ ಕೊರತೆಗಳ ನಿವಾರಣೆಯಾಗಿರಲಿಲ್ಲ; ಬ್ರಿಟಿಷರ ಕುಂದು ಕೊರತೆಗಳ ನಿವಾರಣೆಯಾಗಿತ್ತು. ಬ್ರಿಟಿಷರಿಗೆ ತೊಂದರೆ ಕೊಡುತ್ತಿದ್ದ ಎಲ್ಲ ಶಾಸನಗಳನ್ನೂ ಆದಷ್ಟು ಜಾಗ್ರತೆ ರದ್ದುಮಾಡುವುದೇ ಆತನ ಉದ್ದೇಶ. ಆ ಸಮಿತಿ ಅತ್ಯಲ್ಪ ಕಾಲದಲ್ಲಿ ತನ್ನ ವರದಿಯನ್ನೊಪ್ಪಿಸಿತು. ಬ್ರಿಟಿಷರಿಗೆ ವಿರೋಧವಾಗಿದ್ದ ಸಣ್ಣ ದೊಡ್ಡ ಅನೇಕ ಶಾಸನಗಳನ್ನು ಒಂದೇ ಏಟಿಗೆ ರದ್ದುಗೊಳಿಸಲಾಯಿತು.

ಇದೇ ಸಮಿತಿ ಭಾರತೀಯ ವಿರುದ್ಧ ಶಾಸನಗಳ ಪಟ್ಟಿಯೊಂದನ್ನು ಗ್ರಂಥರೂಪದಲ್ಲಿ ತಯಾರಿಸಿತು. ಏಷ್ಯಾಟಿಕ್ ಇಲಾಖೆಯವರು ಈ ಪುಸ್ತಕವನ್ನು ಇಟ್ಟುಕೊಂಡು ದುರುಪಯೋಗಪಡಿಸಿಕೊಳ್ಳಲು ಬಹಳ ಅನುಕೂಲವಾಯಿತು.

ಭಾರತೀಯ ವಿರುದ್ಧ ಶಾಸನಗಳಲ್ಲಿ ಭಾರತೀಯರೆಂದು ಹೆಸರಿಲ್ಲದೆ, ಅವರಿಗೆ ಮಾತ್ರ ಅನ್ವಯಿಸುವಂತಿರದೆ ಎಲ್ಲ ಪ್ರಜೆಗಳಿಗೂ ಅನ್ವಯಿಸುವಂತೆ ಇದ್ದು, ಆ ಶಾಸನಗಳ ಚಲಾವಣೆಯನ್ನು ಸ್ಥಳೀಯ ಅಧಿಕಾರಿಗಳ ವಿವೇಚನೆಗೆ ಬಿಟ್ಟರೆ, ಅಥವಾ ಆ ಶಾಸನಗಳಲ್ಲಿ ಸಾರ್ವತ್ರಿಕವಾದ ನಿರ್ಬಂಧಗಳಿದ್ದು ಆಚರಣೆಯಲ್ಲಿ ಮಾತ್ರ ಭಾರತೀಯರ ಮೇಲೆ ವಿಶೇಷ ಕಾಠಿಣ್ಯದಿಂದ ಪ್ರಯೋಗಿಸಲು ಅವಕಾಶವಿದ್ದರೆ, ಅಂತಹ ಶಾಸನಗಳಿಂದಲೇ ಶಾಸನಸಭಾಸದಸ್ಯರ ಉದ್ದೇಶವನ್ನು ಈಡೇರಿಸಿಕೊಳ್ಳಬಹುದಾಗಿತ್ತು; ಆದರೂ ಶಾಸನಗಳು ಸಾಮಾನ್ಯ ಶಾಸನಗಳಾಗಿರುತ್ತಿದ್ದುವು. ಅಂತಹ ಶಾಸನಗಳಿಂದ ಯಾರ ಮನಸ್ಸಿಗೂ ನೋವಾಗುತ್ತಿರಲಿಲ್ಲ. ಕಾಲ ಕಳೆದಂತೆ ತಾತ್ಕಾಲಿಕ ವೈಷಮ್ಯ ಮಾಯವಾದ ಮೇಲೆ ಈ ಶಾಸನಗಳನ್ನು ತಿದ್ದುಪಡಿ ಮಾಡುವ ಆವಶ್ಯಕತೆಯೇ ಬರುವುದಿಲ್ಲ. ಯಾವ ಪಂಗಡಕ್ಕಾದರೂ ತೊಂದರೆಯಾಗುವಂತೆ ಇದ್ದರೆ ಆ ಶಾಸನಗಳನ್ನು ಉದಾರವಾಗಿ ಪ್ರಯೋಗಿಸುವ ಅವಕಾಶವಿದ್ದಿದ್ದರೆ ತೊಂದರೆಗಳನ್ನು ನಿವಾರಿಸಬಹುದು. ಈ ಎರಡನೆಯ ಮಾದರಿಯ ಶಾಸನಗಳನ್ನು ಸಾಮಾನ್ಯ ಶಾಸನಗಳೆಂದು ನಾನು ಕರೆದಿರುವಂತೆ ಮೊದಲನೆಯ ಜಾತಿಯ ಶಾಸನಗಳನ್ನು ಯೂರೋಪಿಯನರಲ್ಲದವರನ್ನು ಕಪ್ಪು, ಕಂದು ಎಂಬ ವರ್ಣಭೇದ ಕಲ್ಪಿಸಿ, ವಿಶೇಷ ನಿರ್ಬಂಧಗಳನ್ನು ವಿಧಿಸುವ ಶಾಸನಗಳನ್ನು ಜಾತೀಯ ಅಥವಾ ಏಕಪಕ್ಷೀಯ ಶಾಸನಗಳೆಂದು ಕರೆಯಬಹುದು.

ಆಗ ಜಾರಿಯಲ್ಲಿದ್ದ ಒಂದು ಶಾಸನವನ್ನು ಉದಾಹರಣೆಗೆ ತೆಗೆದುಕೊಳ್ಳೋಣ. ನೇಟಾಲಿನಲ್ಲಿ ಶಾಸನವಾಗಿ ಕೊನೆಗೆ ಬ್ರಿಟಿಷ್ ಸಾಮ್ರಾಜ್ಯ ಸರಕಾರದಿಂದ ರದ್ದುಮಾಡಲಾದ ಮೊದಲನೆಯ ವೋಟು ಕಸಿದುಕೊಳ್ಳುವ ಶಾಸನದಲ್ಲಿ ಏಷ್ಯಾಖಂಡದವರನ್ನೆಲ್ಲ ವೋಟು ಮಾಡಲು ಅನರ್ಹರೆಂದು ವಿಧಿಸಲಾಗಿತ್ತು. ಇಂತಹ ಒಂದು ಶಾಸನವನ್ನು ಜನಾಭಿಪ್ರಾಯದಿಂದ ರದ್ದುಗೊಳಿಸಬೇಕಾದರೆ, ಬಹುಸಂಖ್ಯಾತರು ಏಷ್ಯದವರಿಗೆ ವಿರೋಧವಾಗಿರದಂತೆ ಮಾತ್ರ ಅಲ್ಲದೆ, ಏಷ್ಯಾ ಜನರಿಗೆ ಸ್ನೇಹಭಾವದಿಂದಿರುವಂತೆ ಸಹ ಜನಾಭಿಪ್ರಾಯವನ್ನು ಬದಲಾಯಿಸ

ಬೇಕಾಗುವುದು. ಒಂದು ಬಾರಿ ವರ್ಣಭೇದವನ್ನು ಕಲ್ಪಿಸಲಾಯಿತೆಂದರೆ ಪರಸ್ಪರ ಮನೋಭಾವ ಸ್ನೇಹಪೂರಿತವಾದರೆ ಮಾತ್ರ ಆ ಶಾಸನವನ್ನು ಬದಲಾಯಿಸಲು ಶಕ್ಯವಾಗುತ್ತದೆ. ಜಾತೀಯ ಶಾಸನಕ್ಕೆ ಇದೇ ಒಂದು ನಿದರ್ಶನ. ಆ ಶಾಸನವನ್ನು ಹಿಂದಕ್ಕೆ ತೆಗೆದುಕೊಂಡು, ಅದೇ ಧ್ಯೇಯವನ್ನು ಸಾಧಿಸಲು ಶಕ್ಯವಿರುವ ಸಾರ್ವತ್ರಿಕ ಸ್ವಭಾವದ ಮತ್ತೊಂದು ಶಾಸನವನ್ನು ಮಾಡಿದರು. ಅದರ ಒಂದು ನಿಯಮದ ಸಾರಾಂಶ ಈ ರೀತಿ ಇತ್ತು: "ಪಾರ್ಲಿಮೆಂಟರಿ ವೋಟು ಪದ್ಧತಿಯಂತೆ ಇದು ವರೆಗೆ ಯಾವ ಯಾವ ದೇಶಗಳಲ್ಲಿ ಚುನಾಯಿತ ಪ್ರಜಾಪ್ರತಿನಿಧಿ ಸಂಸ್ಥೆಗಳು ಇಲ್ಲವೊ ಆ ದೇಶಗಳ ಜನರಿಗೆ ನೇಟಾಲಿನಲ್ಲಿ ವೋಟರುಗಳ ಪಟ್ಟಿಯಲ್ಲಿ ಸೇರಲು ಅಧಿಕಾರವಿಲ್ಲ." ಇದರಲ್ಲಿ ಭಾರತೀಯರು ಅಥವಾ ಏಷ್ಯದವರು ಎಂಬ ಹೆಸರೇ ಇರುವುದಿಲ್ಲ. ಪಾರ್ಲಿಮೆಂಟರಿ ಪದ್ಧತಿಯಂತೆ ಇಂಡಿಯದಲ್ಲಿ ಚುನಾಯಿತ ಪ್ರತಿನಿಧಿ ಶಾಸನ ಸಭೆಗಳು ಇವೆಯೆ ಇಲ್ಲವೆ ಎಂಬ ವಿಷಯದಲ್ಲಿ ನ್ಯಾಯಸಲಹೆಗಾರರ ಅಭಿಪ್ರಾಯ ವ್ಯತ್ಯಾಸವಾಗಬಹುದು. ಆದರೆ ೧೮೯೪ರಲ್ಲೇ ಆಗಲಿ, ಈಗ ಆಗಲಿ ಇಂಡಿಯದಲ್ಲಿ ಚುನಾಯಿತ ಪ್ರತಿನಿಧಿಸಭೆಗಳು ಇಲ್ಲವೆಂದು ವಾದಕ್ಕಾಗಿ ಇಟ್ಟುಕೊಂಡರೂ ನೇಟಾಲಿನ ವೋಟರುಗಳ ಪಟ್ಟಿಯನ್ನು ತಯಾರಿಸುವ ಅಧಿಕಾರಿ ಭಾರತೀಯರ ಹೆಸರನ್ನು ಓಟರುಗಳ ಪಟ್ಟಿಯಲ್ಲಿ ಸೇರಿಸಿದರೆ ಅದು ಕಾನೂನಿಗೆ ವಿರುದ್ಧವೆಂದು ಏಕಾಏಕಿ ಯಾರೂ ಹೇಳುವ ಹಾಗಿರಲಿಲ್ಲ. ಯಾವಾಗಲೂ ಪ್ರಜೆಗಳ ಹಕ್ಕುಗಳ ಪರವಾಗಿ ಶಾಸನವಿದೆ ಎಂದು ನಂಬಿಕೆ. ಅಧಿಕಾರದಲ್ಲಿರುವ ಸರಕಾರ ಎಲ್ಲಿಯ ವರೆಗೆ ಪ್ರಜೆಗಳಿಗೆ ವಿರೋಧವಾಗಿರುವುದಿಲ್ಲವೋ ಅಲ್ಲಿಯವರೆಗೂ ಮೇಲ್ಕಂಡಂತೆ ಶಾಸನವಿದ್ದರೂ ಭಾರತೀಯರ ಮತ್ತು ಇತರರ ಹೆಸರನ್ನು ವೋಟರುಗಳ ಪಟ್ಟಿಗೆ ಸೇರಿಸಲು ಅವಕಾಶವಿದೆ. ಅಂದರೆ ಭಾರತೀಯರ ಮೇಲಿನ ವಿರೋಧಭಾವನೆ ಕಡಮೆಯಾಗಿ, ಸ್ಥಳೀಯ ಸರಕಾರ ಭಾರತೀಯರಿಗೆ ಕೆಡಕು ಮಾಡಲು ಇಷ್ಟವಿಲ್ಲದಿದ್ದರೆ, ಶಾಸನವನ್ನು ಸ್ವಲ್ಪವೂ ತಿದ್ದುಪಡಿ ಮಾಡದೆ ಭಾರತೀಯರ ಹೆಸರನ್ನು ಓಟರುಗಳ ಪಟ್ಟಿಯಲ್ಲಿ ಸೇರಿಸಬಹುದು. ಇದೇ ಸರ್ವತ್ರ ಶಾಸನಗಳ ಅನುಕೂಲ. ಹಿಂದಿನ ಅಧ್ಯಾಯಗಳಲ್ಲಿ ವಿವರಿಸಿದ

ದಕ್ಷಿಣ ಆಫ್ರಿಕದ ಇತರ ಶಾಸನಗಳಿಂದ ಇಂತಹ ಅನೇಕ ಉದಾಹರಣೆಗಳನ್ನು ಇನ್ನೂ ಕೊಡಬಹುದು. ಆದ್ದರಿಂದ ವಿಶೇಷ ಶಾಸನಗಳನ್ನು ಆದಷ್ಟು ನಿರ್ಮಾಣ ಮಾಡದಿರುವುದೇ ಬುದ್ಧಿವಂತಿಕೆಯ ನೀತಿ; ಅಂತಹ ಶಾಸನಗಳನ್ನೇ ಮಾಡದಿರುವುದು ಇನ್ನೂ ಒಳ್ಳೆಯದು. ಒಂದು ಸಲ ಶಾಸನವಾದ ಮೇಲೆ ಅದನ್ನು ರದ್ದುಗೊಳಿಸಲು ಅನೇಕ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ವಿದ್ಯೆಯಲ್ಲಿ ಬಹಳ ಮುಂದುವರಿದಿರುವ ದೇಶದಲ್ಲಿ ಮಾತ್ರ ಪ್ರಜಾಭಿಪ್ರಾಯ ಅಲ್ಲಿನ ಶಾಸನಗಳನ್ನು ಬದಲಾಯಿಸಲು ಸಾಧ್ಯ. ಅದೂ ಅಲ್ಲದೆ ಪದೇಪದೇ ದೇಶದ ಶಾಸನಗಳು ಬದಲಾವಣೆ ಅಥವಾ ರದ್ದು ಆಗುತ್ತಿದ್ದರೆ ದೇಶದ ರಾಜ್ಯಪದ್ಧತಿಯ ಭದ್ರತೆಗೆ ಅಥವಾ ಸುವ್ಯವಸ್ಥೆಗೆ ಅದು ಒಂದು ಲೋಪ.

ಆದ್ದರಿಂದ ಟ್ರಾನ್ಸ್ವಾಲಿನ ಭಾರತೀಯ ವಿರುದ್ಧ ಶಾಸನಗಳಲ್ಲಿದ್ದ ವಿಷದ ಬೀಜವನ್ನು ಈಗ ನಾವು ಚೆನ್ನಾಗಿ ಗ್ರಹಿಸಬಹುದು. ಅವೆಲ್ಲವೂ ವರ್ಣದ್ವೇಷ ಶಾಸನಗಳು. ಏಷ್ಯದವರಾದ್ದರಿಂದಲೇ ವೋಟುಮಾಡುವ ಹಕ್ಕು ಇರಲಿಲ್ಲ; ಸರಕಾರದವರು ಗೊತ್ತುಮಾಡಿದ ಪ್ರದೇಶಗಳ ಹೊರಗೆ ಭೂಮಿಯನ್ನು ಕೊಳ್ಳುವ ಹಾಗಿರಲಿಲ್ಲ. ಶಾಸನ ಕಡತದಿಂದ ಈ ಶಾಸನಗಳನ್ನು ತೆಗೆಯುವವರೆಗೂ ಅಧಿಕಾರಿಗಳು ಭಾರತೀಯರಿಗೆ ಯಾವ ಪರಿಹಾರವನ್ನು ಕೊಡುವ ಹಾಗಿರಲಿಲ್ಲ. ಮಿಲ್ನರ್ ಸಮಿಯವರು ಸರ್ವತ್ರ ನಿರ್ಬಂಧಮಾಡುವ ಶಾಸನಗಳ ಪ್ರತ್ಯೇಕ ಪಟ್ಟಿಯನ್ನು ಮಾತ್ರ ಮಾಡಿದರು. ಇವುಗಳು ಸಹ ಸರ್ವತ್ರ ಅನ್ವಯಿಸುವಂತಿದ್ದು, ಭಾರತೀಯರ ಮೇಲೆ ಉಪಯೋಗಿಸಲ್ಪಡದಿದ್ದರೆ ಸಹ ಉಳಿದವುಗಳೊಂದಿಗೆ ಅವೂ ರದ್ದಾಗುತ್ತಿದ್ದುವು. ಅಧಿಕಾರಿಗಳು ತಾವು ನಿಸ್ಸಹಾಯಕರೆಂದೂ, ಹೊಸ ಶಾಸನ ಸಭೆ ರದ್ದುಗೊಳಿಸಿದ ಹೊರತು ಶಾಸನಗಳನ್ನು ಜಾರಿಮಾಡದೆ ಗತ್ಯಂತರವಿಲ್ಲವೆಂದೂ ಹೇಳಲು ಅವಕಾಶವಿರುತ್ತ ಇರಲಿಲ್ಲ.

ಈ ಶಾಸನಗಳು ಏಷ್ಯಾಟಿಕ್ ಇಲಾಖೆಯ ಅಧಿಕಾರಿಗಳ ಕೈಗೆ ದೊರೆತೊಡನೆ ಅವುಗಳನ್ನು ಚಾಚೂ ತಪ್ಪದೆ ಚಲಾಯಿಸತೊಡಗಿದರು. ಅಲ್ಲದೆ ಚಲಾವಣೆಗೆ ಯೋಗ್ಯವೆನಿಸಬೇಕಾದರೆ, ಮನಃಪೂರ್ವಕವಾಗಿಯೋ ಅಜಾಗರೂಕತೆಯಿಂದಲೊ ಶಾಸನ ವಿಧಿಗಳಲ್ಲಿದ್ದ, ಏಷ್ಯನರ

ಪರವಾಗಿ ಅರ್ಥಮಾಡಬಹುದಾದ ಸಂದುಗಳಿಲ್ಲವನ್ನೂ ಮುಚ್ಚುವ ಹೆಚ್ಚಿನ ಅಧಿಕಾರ ಸರಕಾರಕ್ಕೆ ಇರಬೇಕು. ಈ ನೀತಿಯಲ್ಲಿ ತಪ್ಪು ಏನೂ ಇಲ್ಲ. ಶಾಸನಗಳು ತಪ್ಪಾಗಿದ್ದರೆ ರದ್ದುಗೊಳಿಸಬೇಕು; ಸರಿಯಾಗಿದ್ದರೆ ಅವುಗಳಲ್ಲಿನ ನ್ಯೂನತೆಗಳನ್ನು ಸರಿಪಡಿಸಬೇಕು. ಮಂತ್ರಿಗಳು ಈ ಶಾಸನಗಳನ್ನು ಜಾರಿಗೆ ತರಬೇಕೆಂದು ನಿಶ್ಚಯಿಸಿದರು. ಯುದ್ಧ ಕಾಲದಲ್ಲಿ ಭಾರತೀಯರು ಬ್ರಿಟಿಷರೊಂದಿಗೆ ಹೆಗಲುಕೊಟ್ಟು, ತಮ್ಮ ಪ್ರಾಣವನ್ನು ಅಪಾಯಕ್ಕೀಡುಮಾಡಿಕೊಂಡಿದ್ದರು. ಆದರೆ ಆಗಲೇ ಅದು ಮೂರು ನಾಲ್ಕು ವರ್ಷಗಳ ಹಿಂದಿನ ಕಥೆಯಾಗಿತ್ತು. ಹಿಂದಿನ ಆಡಳಿತದಲ್ಲಿ ಪ್ರೆಟೋರಿಯಾದ ಬ್ರಿಟಿಷ್ ಪ್ರತಿನಿಧಿ ಭಾರತೀಯರ ಪರವಹಿಸಿ ಕಾದಾಡಿದ್ದನು. ಭಾರತೀಯರ ಕಷ್ಟಗಳು ಯುದ್ಧಘೋಷಣೆಗೆ ಒಂದು ಕಾರಣವಾಗಿತ್ತು; ಆದರೆ ಸ್ಥಳವಿದ್ಯಮಾನವರಿಯದ, ಮುಂದಾಲೋಚನೆ ಇಲ್ಲದ ರಾಜಕಾರಣಿಗಳು ಆ ಘೋಷಣೆ ಮಾಡಿದ್ದರು. ಹಿಂದಿನ ಬೋಅರ್ ಸರಕಾರದವರು ವಿಧಾಯಕಮಾಡಿದ್ದ ಭಾರತೀಯ ವಿರುದ್ಧ ಶಾಸನಗಳು ಅಷ್ಟೇನೂ ಕಷ್ಟತಮವಲ್ಲವೆಂದೂ, ಉದ್ದೇಶಪೂರ್ವಕವಲ್ಲವೆಂದೂ ಸ್ಥಳೀಯ ಅಧಿಕಾರಿಗಳು ಹೇಳತೊಡಗಿದರು. ಭಾರತೀಯರು ಯಾವಾಗ ಬೇಕಾದರೆ ಆಗ ಟ್ರಾನ್ಸ್‌ವಾಲಿಗೆ ಬಂದು, ಎಲ್ಲಿ ಬೇಕಾದರೆ ಅಲ್ಲಿ ವ್ಯಾಪಾರ ಮಾಡತೊಡಗಿದರೆ ಯೂರೋಪಿಯನ್ ವ್ಯಾಪಾರಿಗಳು ಬಹಳ ನಷ್ಟವನ್ನು ಅನುಭವಿಸಬೇಕಾಗುತ್ತದೆ. ಇವು ಮತ್ತು ಇದೇ ಮಾದರಿಯ ವಾದಗಳು ಯೂರೋಪಿಯನರಿಗೂ ಮಂತ್ರಿಮಂಡಲದಲ್ಲಿನ ಅವರ ಪ್ರತಿನಿಧಿಗಳಿಗೂ ಬಹಳ ಆಪ್ಯಾಯಮಾನವಾದುವು. ಆದಷ್ಟು ಅಲ್ಪಾವಧಿಯಲ್ಲಿ ದೊರೆತಷ್ಟು ಧನವನ್ನು ಗಳಿಸುವುದೇ ವ್ಯಾಪಾರಿಗಳ ಗುರಿಯಾಗಿತ್ತು. ಭಾರತೀಯರು ಅದರಲ್ಲಿ ಪಾಲಿಗೆ ಬಂದರೆ ಸಹಿಸುವುದಾದರೂ ಹೇಗೆ? ಬೂಟಾಟಿಕೆ ರಾಜಕೀಯ ನೀತಿಯನ್ನು ದುರುಪಯೋಗಪಡಿಸಿಕೊಂಡು ಕಣ್ಣಿಗೆ ಮಣ್ಣೆರಚುವ ಕಾರಣವನ್ನು ಹುಡುಕಿತು. ಸ್ವಾರ್ಥ ವ್ಯಾಪಾರ ಧರ್ಮವನ್ನು ಸ್ಪಷ್ಟವಾಗಿ ವರ್ಣಿಸಿದ್ದರೆ ದಕ್ಷಿಣ ಆಫ್ರಿಕದ ಯೂರೋಪಿಯನ್ ಬುದ್ಧಿವಂತರು ಒಪ್ಪುತ್ತಿರಲಿಲ್ಲ. ಅನ್ಯಾಯವನ್ನು ಸಮರ್ಥಿಸಲು ಹೂಡುವ ವಾದಕ್ಕೆ ಬಣ್ಣದ ಮೆರುಗನ್ನು ಕೊಡಲು

ಮನುಷ್ಯನ ಬುದ್ಧಿ ಹಾತೊರೆಯುತ್ತಿರುತ್ತದೆ. ದಕ್ಷಿಣ ಆಫ್ರಿಕದ ಯೂರೋಪಿಯನರು ಈ ಸಾಮಾನ್ಯ ನಿಯಮಕ್ಕೆ ಹೊರತಾಗಿರಲಿಲ್ಲ. ಜನರಲ್ ಸ್ಮಟ್ಸ್ ಮುಂತಾದವರು ಹೂಡಿದ ವಾದ ಹೀಗಿತ್ತು :

"ದಕ್ಷಿಣ ಆಫ್ರಿಕ ಪಾಶ್ಚಾತ್ಯ ಸಂಸ್ಕೃತಿಯ ಪ್ರತಿನಿಧಿ ಕೇಂದ್ರ; ಭಾರತ ಪೌರ್ವಾತ್ಯ ಸಂಸ್ಕೃತಿಯ ಕೇಂದ್ರ. ಈ ಎರಡು ಸಂಸ್ಕೃತಿಗಳೂ ಒಂದುಗೂಡಲಾರವೆಂದು ಇಂದಿನ ಶಾಸ್ತ್ರವೇತ್ತರ ಅಭಿಪ್ರಾಯ. ಈ ವಿರೋಧ ಸಂಸ್ಕೃತಿಗಳ ಪ್ರತಿನಿಧಿಗಳು ಸಣ್ಣ ಸಣ್ಣ ಗುಂಪುಗಳಾಗಿ ಸಂಧಿಸಿದರೂ ಪರಿಣಾಮ ಹಾನಿಕರ. ಪಾಶ್ಚಾತ್ಯರಿಗೆ ಸರಳ ಜೀವನ ವಿರೋಧ, ಪೌರ್ವಾತ್ಯರು ಅದಕ್ಕೆ ಮಾನವ ಪ್ರಧಾನ ಗುಣಗಳಲ್ಲಿ ಪ್ರಥಮ ಸ್ಥಾನವನ್ನು ಕೊಡುತ್ತಾರೆ. ಈ ಎರಡು ಪರಸ್ಪರ ವಿರೋಧ ದೃಷ್ಟಿಗಳು ಸೇರುವುದೆಂತು? ಇವುಗಳ ಗುಣಾವಗುಣಗಳನ್ನು ತೀರ್ಮಾನಿಸುವುದು ವ್ಯವಹಾರ ವ್ಯಕ್ತಿಗಳಾದ ರಾಜಕಾರಣಿಗಳ ಕೆಲಸವಲ್ಲ. ಪಾಶ್ಚಾತ್ಯ ಸಂಸ್ಕೃತಿ ಒಳ್ಳೆಯದಿರಬಹುದು ಅಥವಾ ಕೆಟ್ಟದಿರಬಹುದು, ಆದರೆ ಪಾಶ್ಚಾತ್ಯರು ಅದನ್ನೇ ಅನುಸರಿಸಲು ಇಷ್ಟಪಡುತ್ತಾರೆ. ಆ ಸಂಸ್ಕೃತಿಯ ಉಳಿವಿಗಾಗಿ ಅಪಾರ ತ್ಯಾಗಮಾಡಿದ್ದಾರೆ. ಅದಕ್ಕಾಗಿ ರಕ್ತದ ಕಾಲುವೆಗಳನ್ನು ಹರಿಸಿದ್ದಾರೆ. ಆ ಸಂಸ್ಕೃತಿಯ ರಕ್ಷಣೆಗಾಗಿ ಪಡಬಾರದ ಕಷ್ಟಗಳನ್ನು ಅನುಭವಿಸಿದ್ದಾರೆ. ಆದ್ದರಿಂದ ಈಗ ಅವರು ಹೊಸ ಮಾರ್ಗವನ್ನು ಅವಲಂಬಿಸುವುದು ಆಗಹೋಗದ ಕೆಲಸ. ಈ ದೃಷ್ಟಿಯಿಂದ ಯೋಚಿಸಿದರೆ ಭಾರತೀಯ ಪ್ರಶ್ನೆ ವ್ಯಾಪಾರ ದ್ವೇಷ ಅಥವಾ ವರ್ಣ ದ್ವೇಷದ ಪ್ರಶ್ನೆಯಾವುದಿಲ್ಲ. ಅದು ಸಂಸ್ಕೃತಿಯ ಪ್ರಶ್ನೆ, ಅಂದರೆ ಸ್ವಸಂರಕ್ಷಣೆಯ ಶ್ರೇಷ್ಠ ಅಧಿಕಾರದ, ಅನುಭವದ ಮತ್ತು ತತ್ಸಂಬಂಧವಾದ ಕರ್ತವ್ಯ ನಿರ್ವಹಣೆಯ ಪ್ರಶ್ನೆಯಾಗುತ್ತದೆ. ಕೆಲವು ಸಾರ್ವಜನಿಕ ಭಾಷಣಕಾರರು ಭಾರತೀಯರಲ್ಲಿ ತಪ್ಪು ಹುಡುಕಿ ಯೂರೋಪಿಯನರನ್ನು ಉದ್ರೇಕಗೊಳಿಸಲು ಪ್ರಯತ್ನಿಸಬಹುದು; ಆದರೆ ಭಾರತೀಯರ ಸದ್ಗುಣಗಳೇ ದಕ್ಷಿಣ ಆಫ್ರಿಕದ ದುರ್ಗುಣಗಳೆಂದು ರಾಜಕೀಯವೇತ್ತರು ನಂಬಿ, ಹೇಳುತ್ತಲಿದ್ದಾರೆ. ಭಾರತೀಯರ ಸರಳ ಜೀವನ, ತಾಳ್ಮೆ, ಕಷ್ಟಸಹಿಷ್ಣುತೆ, ಮಿತವ್ಯಯ, ಮತ್ತು ಪಾರಮಾರ್ಥಿಕ ದೃಷ್ಟಿ– ಇವುಗಳಿ

ಗಾಗಿಯೇ ದಕ್ಷಿಣ ಆಫ್ರಿಕದ ಜನರು ಭಾರತೀಯರನ್ನು ದ್ವೇಷಿಸುತ್ತಾರೆ. ಪಾಶ್ಚಾತ್ಯರು ಮುಂದೋಡುವವರು, ಆತುರರು, ತಮ್ಮ ಪ್ರಾಪಂಚಿಕ ಭೋಗ್ಯವಸ್ತುಗಳ ಆಸೆಯನ್ನು ಹೆಚ್ಚಿಸುವುದರಲ್ಲಿ ಮತ್ತು ಆ ಆಸೆಯನ್ನು ತೃಪ್ತಿಗೊಳಿಸುವುದರಲ್ಲಿ ಮಗ್ನರಾದವರು, ಹರ್ಷಚಿತ್ತರು, ದೇಹಶ್ರಮ ಕಡಮೆ ಮಾಡಲು ಆಸಕ್ತರು, ದುಂದುಗಾರರು. ಆದ್ದರಿಂದ ಸಾವಿರಾರು ಜನ ಪೌರ್ವಾತ್ಯರು ದಕ್ಷಿಣ ಆಫ್ರಿಕದಲ್ಲಿ ಬಂದು ನೆಲಸಿದರೆ ತಮ್ಮ ಅವಸ್ಥೆ ಮುಗಿಯಿತೆಂದು ಪಾಶ್ಚಾತ್ಯರು ಭೀತರಾಗಿದ್ದಾರೆ. ದಕ್ಷಿಣ ಆಫ್ರಿಕದ ಯೂರೋಪಿಯನರು ಆತ್ಮಹತ್ಯ ಮಾಡಿಕೊಳ್ಳಲು ಸಿದ್ಧರಿಲ್ಲ ಮತ್ತು ಆ ಸ್ಥಿತಿ ಬರಲು ಅವರ ಮುಖಂಡರು ಆಸ್ಪದ ಕೊಡುವುದಿಲ್ಲ."

ಯೂರೋಪಿಯನರಲ್ಲಿ ಅತ್ಯಂತ ಗಣ್ಯರೆಂದು ಹೆಸರಾದವರು ಮುಂದಿಡುತ್ತಿದ್ದ ವಾದವನ್ನು ನಿಷ್ಪಕ್ಷಪಾತವಾಗಿ ತಿಳಿಸಿದ್ದೇನೆಂದು ನನ್ನ ನಂಬಿಕೆ. ಅವರ ವಾದ ಮಿಥ್ಯಾದರ್ಶನವೆಂದು ನನ್ನ ಅಭಿಪ್ರಾಯ. ಆದರೆ ನಿರಾಧಾರವೆಂದು ನಾನು ಹೇಳಬಯಸುವುದಿಲ್ಲ. ವ್ಯವಹಾರ ದೃಷ್ಟಿಯಿಂದ ಅಂದರೆ ಸ್ವಾರ್ಥದೃಷ್ಟಿಯಿಂದ ನೋಡಿದರೆ ಈ ವಾದವನ್ನು ಅರ್ಥ ಮಾಡಿಕೊಳ್ಳಬಹುದು ; ಆದರೆ ದಾರ್ಶನಿಕ ದೃಷ್ಟಿಯಿಂದ ನೋಡಿದರೆ ಅದೆಲ್ಲವೂ ತಾಜಾ ತಕ್ಕುತನ. ನನ್ನ ಅಭಿಪ್ರಾಯದಲ್ಲಿ ಯಾವ ನಿಷ್ಪಕ್ಷಪಾತಿಯಾದ ಮನುಷ್ಯನೂ ಈ ಅಭಿಪ್ರಾಯವನ್ನು ಸಮರ್ಥಿಸಲಾರ. ಯಾವ ಸುಧಾರಕನೂ ತನ್ನ ಸಂಸ್ಕೃತಿಯನ್ನು, ಈ ವಾದ ಹೂಡಿರುವವರು ತಮ್ಮ ಸಂಸ್ಕೃತಿಗೆ ಒದಗಿದೆ ಎಂದು ಹೇಳುವ ನಿಸ್ಸಹಾಯಕ ಸ್ಥಿತಿಗೆ ಇಳಿಸಲು ಒಪ್ಪಲಾರನು. ಪಾಶ್ಚಾತ್ಯ ಜನಾಂಗಗಳು ಪೌರ್ವಾತ್ಯ ಜನಾಂಗಗಳೊಡನೆ ಸ್ವತಂತ್ರ ಸಂಬಂಧ ಬೆಳಸಿದರೆ ಪಾಶ್ಚಾತ್ಯ ಸಂಸ್ಕೃತಿಯ ಪ್ರವಾಹದೆದುರಿನಲ್ಲಿ ಪೌರ್ವಾತ್ಯ ಸಂಸ್ಕೃತಿ ಕೊಚ್ಚಿ ಹೋಗುವುದೆಂದು ಹೇಳಿರುವ ಪೌರ್ವಾತ್ಯ ಜ್ಞಾನಿ ಯಾರನ್ನೂ ಇದುವರೆಗೆ ನಾನು ಕಂಡಿಲ್ಲ. ನನಗೆ ತಿಳಿದಿರುವ ಮಟ್ಟಿಗೆ ಪೌರ್ವಾತ್ಯ ಸಂಸ್ಕೃತಿ ಪಾಶ್ಚಾತ್ಯ ಸಂಸ್ಕೃತಿಯೊಂದಿಗೆ ಸಂಬಂಧ ಬೆಳಸಲು ಹೆದರುವುದಿಲ್ಲ ; ಅಲ್ಲದೆ ಅಂತಹ ಸಂಬಂಧವನ್ನು ಅತ್ಯಾದರದಿಂದ ಬರಮಾಡಿಕೊಳ್ಳುತ್ತದೆ. ಪೌರ್ವಾತ್ಯ ದೇಶಗಳಲ್ಲಿ ಎಲ್ಲಿಯಾದರೂ ವಿರೋಧ ನಿದರ್ಶನಗಳಿದ್ದರೆ ಅವು ನಾನು ಹೇಳಿದ ತತ್ವಕ್ಕೆ

ಅನ್ವಯಿಸುವುದಿಲ್ಲ. ಏಕೆಂದರೆ, ಆ ತತ್ವದ ಸಮರ್ಥನೆಗೆ ಅನೇಕ ನಿದರ್ಶನಗಳನ್ನು ಕೊಡಬಹುದು. ಅದು ಏನೇ ಇರಲಿ, ಪಾಶ್ಚಾತ್ಯ ನೀತಿಜ್ಞರು ನ್ಯಾಯಕ್ಕಿಂತ ಪಾಶವೀಬಲವೇ ಪಾಶ್ಚಾತ್ಯ ಸಂಸ್ಕೃತಿಯ ಮುಖ್ಯ ತಳಹದಿ ಎಂದು ಹೇಳುತ್ತಾರೆ. ಆದ್ದರಿಂದ ಆ ಸಂಸ್ಕೃತಿಯ ಆರಾಧಕರು ತಮ್ಮ ಬಹುಮಟ್ಟಿನ ಕಾಲವನ್ನು ಪಾಶವೀಬಲದ ಪೋಷಣೆಗಾಗಿ ಉಪಯೋಗಿಸುತ್ತಾರೆ. ಯಾವ ಜನಾಂಗಗಳು ತಮ್ಮ ಭೋಗ್ಯ ವಸ್ತುಗಳ ಆವಶ್ಯಕತೆಯನ್ನು ಹೆಚ್ಚಿಸುವುದಿಲ್ಲವೋ ಅವು ನಾಶವಾಗುವುದೇ ಖಂಡಿತವೆಂದು ಸಹ ಈ ನೀತಿಜ್ಞರು ಹೇಳುತ್ತಾರೆ. ಈ ನೀತಿಗನುಸಾರವಾಗಿಯೇ ಪಾಶ್ಚಾತ್ಯ ಜನಾಂಗಗಳು ದಕ್ಷಿಣ ಆಫ್ರಿಕದಲ್ಲಿ ನೆಲಸಿ ತಮಗಿಂತಲೂ ಬಹು ಸಂಖ್ಯಾತರಾದ ದಕ್ಷಿಣ ಆಫ್ರಿಕದ ನಿವಾಸಿಗಳನ್ನು ಗೆದ್ದು ಇರುವುದು. ಸಾಧು ಪ್ರಕೃತಿಯ ಭಾರತೀಯರಿಗೆ ಅವರು ಹೆದರುತ್ತಾರೆಂದು ಯೋಚಿಸುವುದು ಶುದ್ಧ ಮೂಢತನ. ಭಾರತೀಯರು ಎಂದೆಂದಿಗೂ ಕೂಲಿಗಳಾಗಿಯೇ ಬಂದು ಕೆಲಸ ಮಾಡಲು ಒಪ್ಪಿ ಇರಬಯಸಿದ್ದರೆ, ಭಾರತೀಯ ವಲಸೆಗಾರರ ಮೇಲೆ ಯಾವ ಚಳವಳಿಯೂ ಹುಟ್ಟುತ್ತಿರಲಿಲ್ಲವೆಂಬುದೇ ಯೂರೋಪಿಯನರು ಏಷ್ಯನರಿಗೆ ಹೆದರಬೇಕಾಗಿರಲಿಲ್ಲವೆಂಬುದಕ್ಕೆ ಮುಖ್ಯ ಸಾಕ್ಷಿಯಾಗಿತ್ತು.

ಇನ್ನುಳಿದ ಕಾರಣಗಳೆಂದರೆ ವ್ಯಾಪಾರ ಮತ್ತು ವರ್ಣ. ಭಾರತೀಯರ ವ್ಯಾಪಾರದಿಂದ ಯೂರೋಪಿಯನರಿಗೆ ಬಹಳ ನಷ್ಟವಾಗುವುದೆಂದೂ ಕಂದು ಬಣ್ಣದ ಜನರ ದ್ವೇಷದ ಯೂರೋಪಿಯನರ ಸಾಮಾನ್ಯ ಮನೋಭಾವನೆಯಾಗಿದೆ ಎಂದೂ ಸಾವಿರಾರು ಯೂರೋಪಿಯನರು ಒಪ್ಪಿದ್ದಾರೆ. ಶಾಸನ ರೀತ್ಯಾ ಸಮಾನಾಧಿಕಾರವಿದ್ದರೂ ಅತ್ಯಂತ ಉಚ್ಚ ಪಾಶ್ಚಾತ್ಯ ವಿದ್ಯೆಯನ್ನು ಪಡೆದು, ಗುಣಾಢ್ಯ ಕ್ರಿಶ್ಚಿಯನ್ ಎಂದು ಹೆಸರಾದ, ಪಾಶ್ಚಾತ್ಯ ಸಂಸ್ಕೃತಿಯನ್ನು ಸಂಪೂರ್ಣ ರಕ್ತಗತ ಮಾಡಿಕೊಂಡ ಬುಕರ್ ಟಿ. ವಾಷಿಂಗ್‌ಟನ್‌ನಂಥ ಮನುಷ್ಯನು ಅಮೆರಿಕ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ ರೂಸ್‌ವೆಲ್ಟನ ಆಸ್ಥಾನಕ್ಕೆ ಹೋಗಲು ಅಪ್ಪಣೆ ಪಡೆಯಲು ಯೋಗ್ಯನೆಂದು ಯೂರೋಪಿಯನರು ಭಾವಿಸಲಿಲ್ಲ, ಪ್ರಾಯಶಃ ಇಂದಿಗೂ ಭಾವಿಸುವುದಿಲ್ಲ. ಅಮೆರಿಕದ

ನೀಗ್ರೊ ಜನರು ಪಾಶ್ಚಾತ್ಯ ಸಂಸ್ಕೃತಿಯನ್ನು ಒಪ್ಪಿಕೊಂಡಿದ್ದಾರೆ; ಕ್ರೈಸ್ತ ಮತವನ್ನು ಅವಲಂಬಿಸಿದ್ದಾರೆ. ಆದರೆ ಅವರ ಚರ್ಮ ಕಪ್ಪು ಬಣ್ಣವಾದುದಕ್ಕೆ ಅವರದೇ ತಪ್ಪು ? ಉತ್ತರದ ಸಂಸ್ಥಾನಗಳಲ್ಲಿ ಯೂರೋಪಿಯನರು ಅವರನ್ನು ಸಹವಾಸಕ್ಕೆ ಅಯೋಗ್ಯರೆಂದು ಹೀಯಾಳಿಸಿದರೆ, ದಕ್ಷಿಣದ ಸಂಸ್ಥಾನಗಳಲ್ಲಿ ತಪ್ಪಿತಸ್ಥರೆಂದು ಸ್ವಲ್ಪ ಅನುಮಾನ ದೊರೆತರೆ ಅವರನ್ನು ಜೀವಸಹಿತ ಸುಲಿದುಬಿಡುತ್ತಾರೆ.

ಆದ್ದರಿಂದ ಮೇಲಿನ ವಾದದ 'ತತ್ವ'ದಲ್ಲಿ ಯಾವ ಹುರುಳೂ ಇಲ್ಲವೆಂಬುದು ಶತಃಸಿದ್ಧ. ಆದರೆ ಆ ರೀತಿ ವಾದ ಮಾಡಿದವರೆಲ್ಲರೂ ಬೂಟಾಟಿಕೆಗಾಗಿ ಮಾಡಿದರೆಂದು ಮಾತ್ರ ತಿಳಿಯಬಾರದು. ಅವರಲ್ಲಿ ಅನೇಕರು ಈ ವಾದವೇ ಸರಿಯೆಂದು ಪ್ರಾಮಾಣಿಕವಾಗಿ ನಂಬುತ್ತಾರೆ. ನಾವು ಅವರ ಸ್ಥಾನದಲ್ಲಿದ್ದಿದ್ದರೆ ಪ್ರಾಯಶಃ ಅದೇ ವಾದವನ್ನು ಹೂಡುತ್ತಿದ್ದೆವೋ ಏನೋ! ನಮ್ಮಲ್ಲಿ 'ನಡೆ ಇದ್ದಂತೆ ನುಡಿ' ಎಂದು ಒಂದು ಗಾದೆ ಇದೆ. 'ಮನವಿದ್ದಂತೆ ಮಾತು' ಎಂದೂ ನಮ್ಮ ಮಾತು ಇತರರಿಗೆ ರುಚಿಸದಿದ್ದರೆ ನಮಗೆ ಅಸಮಾಧಾನ, ಅಶಾಂತಿ, ಕೋಪ ಸಹ ಉಂಟಾಗುತ್ತೆಂದೂ ತಿಳಿಯದವರು ಯಾರಿದ್ದಾರೆ?

ವಾಚಕರು ಬೇರೆ ಬೇರೆ ದೃಷ್ಟಿಗಳನ್ನು ಅರ್ಥಮಾಡಿಕೊಳ್ಳಬೇಕೆಂದೂ ಇದುವರೆಗೂ ಆ ರೀತಿ ಮಾಡದೆ ಇದ್ದರೆ ಬೇರೆ ಬೇರೆ ಅಭಿಪ್ರಾಯಗಳಿಗೆ ಮನ್ನಣೆ ಕೊಟ್ಟು ಬೆಲೆಕೊಡತಕ್ಕ ಅಭ್ಯಾಸವನ್ನು ಕಲಿಯಲೆಂದೂ ಈ ಪ್ರಶ್ನೆಯನ್ನು ಇಲ್ಲಿ ಇಷ್ಟು ಸೂಕ್ಷ್ಮವಾಗಿ ಉದ್ದಿಶ್ಯಪೂರ್ವಕವಾಗಿ ನಾನು ಚರ್ಚೆ ಮಾಡಿದ್ದೇನೆ. ಸತ್ಯಾಗ್ರಹವನ್ನು ಅರ್ಥಮಾಡಿಕೊಳ್ಳಲು ಅಷ್ಟು ಉದಾರ ಮನಸ್ಸೂ ತಾಳ್ಮೆಯೂ ಅತ್ಯಾವಶ್ಯಕ; ಸತ್ಯಾಗ್ರಹದ ಅನುಷ್ಠಾನಕ್ಕಂತೂ ಅವು ಅನಿವಾರ್ಯವಾಗಿರಬೇಕಾದ ಗುಣಗಳು. ಈ ಗುಣಗಳಿಲ್ಲದೆ ಸತ್ಯಾಗ್ರಹ ಅಸಾಧ್ಯ. ಪುಸ್ತಕ ಬರೆಯಬೇಕೆಂದು ಮಾತ್ರ ನಾನು ಇದನ್ನು ಬರೆಯುತ್ತಿಲ್ಲ. ದಕ್ಷಿಣ ಆಫ್ರಿಕದ ಚರಿತ್ರೆಯ ಒಂದು ನೋಟವನ್ನು ಸಾರ್ವಜನಿಕರ ಮುಂದಿಡಬೇಕೆಂದೂ ಬರೆಯುತ್ತಿಲ್ಲ. ಯಾವ ಸತ್ಯಾಗ್ರಹಕ್ಕಾಗಿ ಜೀವಿಸುತ್ತಿದ್ದೇನೆಯೊ,

ಯಾವ ಸತ್ಯಾಗ್ರಹಕ್ಕಾಗಿ ಜೀವಿಸಲು ಇಷ್ಟಪಡುತ್ತೇನೆಯೊ ಮತ್ತು ಯಾವುದಕ್ಕಾಗಿ ಪ್ರಾಣವನ್ನಾದರೂ ಅರ್ಪಿಸಲು ಸಿದ್ಧನಿದ್ದೇನೆಯೊ ಆ ಸತ್ಯಾಗ್ರಹ ಪ್ರಾರಂಭವಾದ ಬಗೆ, ದೊಡ್ಡ ಪ್ರಮಾಣದಲ್ಲಿ ಅದನ್ನು ಅನುಸರಿಸಿದ ರೀತಿ–ಇವನ್ನು ಜನತೆ ತಿಳಿಯಲೆಂದೂ ತಿಳಿದು ಅರ್ಥ ಮಾಡಿಕೊಂಡು, ಇಷ್ಟಬಂದರೆ ಶಕ್ತಿ ಇರುವಮಟ್ಟಿಗೆ ಅನುಷ್ಠಾನಕ್ಕೆ ತರಲೆಂದೂ ಈ ಪುಸ್ತಕವನ್ನು ಬರೆಯುತ್ತಿದ್ದೇನೆ.

ಇನ್ನು ಕಥೆಯನ್ನು ಮುಂದುವರಿಸುತ್ತೇನೆ. ಹೊಸದಾಗಿ ಭಾರತೀಯ ವಲಸೆಗಾರರು ಯಾರೂ ಟ್ರಾನ್ಸ್‌ವಾಲ್ ಪ್ರವೇಶಿಸದಂತೆ ತಡೆಯಬೇಕೆಂದೂ, ಅಲ್ಲಿದ್ದ ಭಾರತೀಯರು ಕೇವಲ ಜುಗುಪ್ಸೆಯಿಂದಲೇ ದೇಶಭ್ರಷ್ಟರಾಗಿ ಹೋಗುವಂತೆ ಸಹಿಸಲಸಾಧ್ಯವಾದ ಕಷ್ಟ ಕೊಡಬೇಕೆಂದೂ, ಒಂದುವೇಳೆ ದೇಶವನ್ನು ಬಿಟ್ಟುಹೋಗದಿದ್ದರೆ ಅವರ ಸ್ಥಿತಿ ಗುಲಾಮಗಿರಿಗೆ ಸಮಾನವಾಗಿರಬೇಕೆಂದೂ ಬ್ರಿಟಿಷ್ ಅಧಿಕಾರಿಗಳು ತೀರ್ಮಾನಿಸಿದುದನ್ನು ನೋಡಿದ್ದೇವೆ. ದಕ್ಷಿಣ ಆಫ್ರಿಕದ ಪ್ರಸಿದ್ಧ ರಾಜಕೀಯ ವ್ಯಕ್ತಿಗಳೆಂದು ಹೆಸರಾದ ಕೆಲವರು, ಭಾರತೀಯರಿಗೆ ಸೌದೆ ಒಡೆಯಲು ಮತ್ತು ನೀರು ಎಳೆಯಲು ಮಾತ್ರ ಅವಕಾಶ ಕೊಡುವುದಾಗಿ ಅನೇಕ ಬಾರಿ ಹೇಳಿದ್ದಾರೆ. ದ್ವಂದ್ವಾಧಿಕಾರಿದ ಪ್ರಪಾದಕನೆಂದು ಈಗ ಭಾರತದಲ್ಲಿ ಹೆಸರಾದ ಲಯೊನಲ್ ಕರ್ಟಿಸ್ ಎಂಬಾತನು ಆಗ ಏಷ್ಯಾಟಿಕ್ ಇಲಾಖೆಯ ಅಧಿಕಾರಿಗಳಲ್ಲೊಬ್ಬನಾಗಿದ್ದನು. ಯುವಕನಾಗಿದ್ದ ಈತನಲ್ಲಿ ಲಾರ್ಡ್ ಮಿಲ್ನರ್‌ಗೆ ಬಹಳ ವಿಶ್ವಾಸವಿತ್ತು. ಎಲ್ಲವನ್ನೂ ಶಾಸ್ತ್ರೀಯವಾಗಿ ಮಾಡಬಲ್ಲೆನೆಂಬ ಹೆಮ್ಮೆ ಕರ್ಟಿಸ್‌ಗೆ ಇತ್ತು; ಆದರೆ ಒಂದೊಂದುವೇಳೆ ಅವನು ಮಹಾಪರಾಧಗಳನ್ನು ಮಾಡುತ್ತಿದ್ದನು. ಅಂಥ ಒಂದು ತಪ್ಪಿನಿಂದ ಜೋಹನೆಸ್‌ಬರ್ಗ್ ನಗರಸಭೆಗೆ ೧೪,೦೦೦ ಪೌಂಡು ನಷ್ಟವಾಯಿತು. ಹೊಸದಾಗಿ ಭಾರತೀಯರು ವಲಸೆ ಬರುವುದನ್ನು ನಿಲ್ಲಿಸಬೇಕಾದರೆ ದಕ್ಷಿಣ ಆಫ್ರಿಕಕ್ಕೆ ಮೊದಲೆ ಬಂದು ನೆಲಸಿದ ಭಾರತೀಯರೆಲ್ಲರೂ ರಿಜಸ್ಟರ್ ಮಾಡಿಸಿಕೊಳ್ಳಬೇಕಾದ್ದು ಪ್ರಥಮೋಪಾಯವೆಂದು ಸಲಹೆ ಕೊಟ್ಟನು. ಆ ರೀತಿ ರಿಜಿಸ್ಟರ್ ಮಾಡಿಸಿದರೆ ಮರೆಮಾಚಿ ಯಾರೂ ಕದ್ದುಬರುವಂತೆ ಇರಲಿಲ್ಲ. ಒಂದುವೇಳೆ ಬಂದರೂ ಅವರನ್ನು ಪತ್ತೆ

ಹೆಚ್ಚುವುದು ಸುಲಭವಾಗುವುದು. ಟ್ರಾನ್ಸ್‌ವಾಲಿನಲ್ಲಿ ಬ್ರಿಟಿಷ್ ಆಡಳಿತ ಏರ್ಪಟ್ಟಮೇಲೆ ಕೊಟ್ಟ ಎಲ್ಲ ರಹದಾರಿ ಪತ್ರಗಳಲ್ಲೂ ರಹದಾರಿ ಪಡೆದವನ ರುಜು ಆಗಲಿ ಅಕ್ಷರಸ್ಥನಲ್ಲದಿದ್ದರೆ ಹೆಬ್ಬೆಟ್ಟಿನ ಗುರುತಾಗಲಿ ಇರುತ್ತಿತ್ತು. ಅನಂತರ, ರಹದಾರಿ ಪಡೆದವನ ಭಾವಚಿತ್ರವಿರಬೇಕೆಂದು ಯಾರೋ ಸಲಹೆ ಕೊಟ್ಟರು. ಅದಕ್ಕೆ ಶಾಸನದ ಬದಲಾವಣೆ ಅನವಶ್ಯವಾದ್ದರಿಂದ ಅಧಿಕಾರಿಗಳು ಅದನ್ನೂ ಜಾರಿಗೆ ತಂದರು. ಈ ಹೊಸ ಪದ್ಧತಿ ಭಾರತೀಯ ಮುಖಂಡರಿಗೆ ಒಡನೆ ಗೊತ್ತಾಗಲಿಲ್ಲ. ಕ್ರಮೇಣ ಈ ಹೊಸ ಪದ್ಧತಿಗಳು ನಮಗೆ ತಿಳಿದಾಗ ಅಧಿಕಾರಿಗೆ ಬಿನ್ನವತ್ತಳೆಗಳನ್ನು ಒಪ್ಪಿಸಿದೆವು; ನಿಯೋಗಗೋಷ್ಠಿಗಳನ್ನು ಕಳುಹಿಸಿ ಮುಖತಃ ಅರಿಕೆಮಾಡಿದೆವು. ಯಾವುದಾದರೂ ಒಂದು ವಿಧಿಪೂರ್ವಕವಾಗಿ ಹೊರತು ಭಾರತೀಯರನ್ನು ದೇಶದೊಳಕ್ಕೆ ಬಿಡುನಂತೆ ಇಲ್ಲವೆಂದೂ ಆದ್ದರಿಂದ ರಹದಾರಿ ಪಡೆದವರ ಹೊರತು ಬೇರೆ ಯಾರೂ ದೇಶದೊಳಕ್ಕೆ ಬರದಂತೆ ಅವಶ್ಯವಾದ ವಿವರಗಳಿರುವ ಒಂದೇ ಮಾದರಿಯ ರಹದಾರಿಗಳನ್ನು ಎಲ್ಲ ಭಾರತೀಯರೂ ಪಡೆಯಬೇಕಾದ್ದು ಅವಶ್ಯವೆಂದೂ ಅಧಿಕಾರಿಗಳು ವಾದಿಸಿದರು. ಕಾನೂನು ಪ್ರಕಾರ ಅಂತಹ ರಹದಾರಿಗಳನ್ನು ನಾವು ಪಡೆಯಬೇಕಾದ ಆವಶ್ಯಕತೆ ಇಲ್ಲದಿದ್ದರೂ ಶಾಂತಿರಕ್ಷಣಾ ಕಾನೂನು ಜಾರಿಯಲ್ಲಿ ಇರುವವರೆಗೂ ಅಂತಹ ರಹದಾರಿಗಳನ್ನು ಪಡೆಯಲು ಸರಕಾರದವರು ಒತ್ತಾಯಪಡಿಸಬಹುದೆಂದು ನನ್ನ ಅಭಿಪ್ರಾಯವಾಗಿತ್ತು. ದಕ್ಷಿಣ ಆಫ್ರಿಕದ ಶಾಂತಿರಕ್ಷಣಾಶಾಸನ ಭಾರತದ ರಕ್ಷಣಾಶಾಸನದಂತೆ ಇತ್ತು. ಜನರಿಗೆ ಹಿಂಸೆ ಕೊಡಲು ಭಾರತದ ರಕ್ಷಣಾಶಾಸನವನ್ನು ಯಾವ ರೀತಿ ಅವಶ್ಯ ಪರಿಮಿತಿಗಿಂತ ಹೆಚ್ಚುಕಾಲ ಶಾಸನ ಕಡತದಲ್ಲಿಡಲಾಯಿತೊ, ಅದರಂತೆ ದಕ್ಷಿಣ ಆಫ್ರಿಕದಲ್ಲಿ ಸಹ, ಭಾರತೀಯರಿಗೆ ಹಿಂಸೆ ಕೊಡಲು, ಆವಶ್ಯಕತೆ ಇಲ್ಲದಿದ್ದರೂ ಈ ಶಾಸನವನ್ನು ಕಡತದಲ್ಲಿಡಲಾಗಿತ್ತು. ಯೂರೋಪಿಯನರಿಗೆ ಕಾರ್ಯತಃ ಅದು ನಿರ್ಜೀವ ಶಾಸನವಾಗಿತ್ತು. ರಹದಾರಿಗಳನ್ನು ಪಡೆಯಬೇಕಾದರೆ ಅದರಲ್ಲಿ ಏನಾದರೂ ಗುರುತಿನ ಚಿಹ್ನೆ ಇರಬೇಕು. ಆದ್ದರಿಂದ ಅಕ್ಷರಸ್ಥರಲ್ಲದವರು ಹೆಬ್ಬೆಟ್ಟಿನ ಗುರುತು ಹಾಕಬೇಕೆಂದು ಒತ್ತಾಯ ಮಾಡುವುದರಲ್ಲಿ

ತಪ್ಪೇನೂ ಇರಲಿಲ್ಲ. ಆದರೆ ಭಾವಚಿತ್ರಗಳನ್ನು ಇಡುವ ಪದ್ಧತಿಯನ್ನು ನಾನು ಒಪ್ಪಲಿಲ್ಲ. ಅಲ್ಲದೆ ಮುಸಲ್ಮಾನರ ಧರ್ಮಕ್ಕೆ ಅದು ವಿರುದ್ಧವಿತ್ತು.

ಭಾರತೀಯರಿಗೂ ಅಧಿಕಾರಿಗಳಿಗೂ ನಡೆದ ಈ ಸಂಧಾನದಲ್ಲಿ ಕೊನೆಗೆ, ಭಾರತೀಯರು ಹಳೆಯ ರಹದಾರಿಗಳಿಗೆ ಪ್ರತಿಯಾಗಿ ಹೊಸ ರಹದಾರಿಗಳನ್ನು ಪಡೆಯಬೇಕೆಂದೂ ಹೊಸದಾಗಿ ವಲಸೆ ಬರುವವರು ಹೊಸ ನಮೂನೆಯಲ್ಲಿ ರಹದಾರಿ ಪಡೆಯಬೇಕೆಂದೂ ತೀರ್ಮಾನಕ್ಕೆ ಬಂದೆವು. ಕಾನೂನು ಪ್ರಕಾರ ಭಾರತೀಯರು ಬದ್ಧರಲ್ಲದೆ ಹೋದರೂ, ಹೊಸ ನಿರ್ಬಂಧಗಳನ್ನೂ ತಮ್ಮ ಮೇಲೆ ಹೊರಿಸಲಾರರೆಂದೂ ಅನ್ಯಾಯವಾದ ಮಾರ್ಗಗಳಿಂದ ಹೊಸ ವಲಸೆಗಾರರನ್ನು ತಂದು ತುಂಬುವುದು ಭಾರತೀಯರ ಇಷ್ಟವಾಗಿರಲಿಲ್ಲವೆಂದೂ ಹೊಸದಾಗಿ ಬರುವವರಿಗೆ ತೊಂದರೆ ಕೊಡಲು ಶಾಂತಿರಕ್ಷಣಾಕಾನೂನನ್ನು ಉಪಯೋಗಿಸುವುದು ತರವಲ್ಲವೆಂಬುದು ಸಂಬಂಧಪಟ್ಟವರಿಗೆಲ್ಲ ಸ್ಪಷ್ಟವಾಗಲೆಂದೂ ಭಾರತೀಯರು ರಿಜಿಸ್ಟರ್ ಮಾಡಿಸಿಕೊಳ್ಳಲು ತಾವೇ ಮುಂದೆ ಬಂದರು. ಮುಕ್ಕಾಲು ಪಾಲು ಎಲ್ಲ ಭಾರತೀಯರೂ ತಮ್ಮ ರಹದಾರಿಗಳನ್ನು ಬದಲಾಯಿಸಿ ಹೊಸ ರಹದಾರಿಗಳನ್ನು ಪಡೆದರು. ಇದು ಅಲ್ಪ ವಿಷಯವಲ್ಲ. ಕಾನೂನು ಪ್ರಕಾರ ಬದ್ಧರಲ್ಲದೆ ಹೋದರೂ ನಮ್ಮ ಜನರು ಎಲ್ಲರೂ ಒಬ್ಬ ಮನುಷ್ಯನಂತೆ ಕಾಲವಿಳಂಬವಿಲ್ಲದೆ ರಿಜಿಸ್ಟ್ರೇಷನ್ ಕಾರ್ಯವನ್ನು ಮುಗಿಸಿದರು. ಅವರ ಸತ್ಯಶೀಲತೆ, ಬುದ್ಧಿವಂತಿಕೆ, ಉದಾರ ಮನಸ್ಸು, ವ್ಯವಹಾರನೀತಿ, ತಾಳ್ಮೆಗಳಿಗೆ ಇದೊಂದೇ ಸಾಕ್ಷಿ. ಅಲ್ಲದೆ ಟ್ರಾನ್ಸ್‌ವಾಲಿನಲ್ಲಿ ಜಾರಿಯಲ್ಲಿದ್ದ ಯಾವ ಶಾಸನವನ್ನೂ ಉಲ್ಲಂಘಿಸಲು ನಮ್ಮ ಜನರಿಗೆ ಇಷ್ಟವಿರಲಿಲ್ಲವೆಂಬುದನ್ನೂ ತೋರಿಸುತ್ತದೆ. ಸರಕಾರದೊಡನೆ ಅನುನಯದಿಂದ ನಡೆದರೆ ತಮ್ಮನ್ನು ಸರಕಾರವೂ ಗೌರವಿಸುವುದೆಂದೂ ಹೊಸ ಹಕ್ಕುಗಳು ದೊರೆಯಬಹುದೆಂದೂ ಭಾರತೀಯರು ನಂಬಿದರು. ಈ ಅನುನಯಪೂರ್ವಕವಾದ ಮಹತ್ಕಾರ್ಯಕ್ಕಾಗಿ ಭಾರತೀಯರಿಗೆ ಟ್ರಾನ್ಸ್‌ವಾಲಿನ ಬ್ರಿಟಿಷ್ ಸರಕಾರ ಯಾವ ಬಹುಮಾನ ಕೊಟ್ಟಿತು ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ತಿಳಿಸುತ್ತೇನೆ.

# ೧೧. ಸಭ್ಯತೆಗೆ ಬಹುಮಾನ - ಕರಾಳಶಾಸನ

೧೯೦೭ರ ಮಧ್ಯ ಭಾಗದ ಹೊತ್ತಿಗೆ ಪುನಃ ರಿಜಿಸ್ಟರ್ ಮಾಡಿಸಿ ಕೊಳ್ಳುವ ಈ ಕಾರ್ಯ ಮುಗಿಯಿತು. ಟ್ರಾನ್ಸ್ವಾಲಿಗೆ ನಾನು ಮತ್ತೆ ಬಂದು ಜೋಹನೆಸ್‌ಬರ್ಗ್‌ನಲ್ಲಿ ನನ್ನ ಕಚೇರಿಯನ್ನು ಪ್ರಾರಂಭಿಸಿದ್ದು ೧೯೦೫ರ ಮಧ್ಯಭಾಗದಲ್ಲಿ. ಏಷ್ಯಾಟಿಕ್ ಇಲಾಖೆಯವರ ಆಕ್ರಮಣ ವನ್ನು ತಡೆಗಟ್ಟುವುದರಲ್ಲಿಯೇ ಈ ರೀತಿ ಎರಡು ವರ್ಷಗಳು ಕಳೆದು ಹೋಗಿದ್ದುವು. ಈ ರೀತಿ ರಿಜಿಸ್ಟರ್ ಮಾಡಿಸಿದ್ದರಿಂದ ಸರಕಾರಕ್ಕೆ ಸಮಾಧಾನವಾಗುವುದಾಗಿಯೂ ಇನ್ನು ಮುಂದೆ ನಮ್ಮ ಜನರು ನೆಮ್ಮದಿ ಯಿಂದ ಜೀವನ ನಡಸಬಹುದಾಗಿಯೂ ನಂಬಿದ್ದೆವು. ಆದರೆ ಅದು ಎಲ್ಲಿ ಸಾಧ್ಯ? ಲಯೊನೆಲ್ ಕರ್ಟಿಸ್‌ನ ಪರಿಚಯವನ್ನು ಆಗಲೇ ಮಾಡಿಕೊಟ್ಟಿದ್ದೇನೆ. ಭಾರತೀಯರು ತಮ್ಮ ರಹದಾರಿಗಳನ್ನು ಬದಲಾಯಿಸಿದ ಮಾತ್ರದಿಂದ ಯೂರೋಪಿಯನರು ತಮ್ಮ ಧ್ಯೇಯವನ್ನು ಸಾಧಿಸಿದಂತಾಗಲಿಲ್ಲವೆಂದು ಆತನ ಅಭಿಪ್ರಾಯ. ಪರಸ್ಪರ ಒಪ್ಪಂದ ದಿಂದ ಉತ್ತಮ ಕಾರ್ಯಸಾಧನೆಯಾಗುವುದು ಆತನ ದೃಷ್ಟಿಗೆ ಒಪ್ಪಿಗೆ ಆಗಲಿಲ್ಲ. ಈ ಆಚರಣೆಗೆ ಶಾಸನದ ಮುದ್ರೆ ಇದ್ದರೇನೆ ಅದರ ಹಿಂದಿರುವ ತತ್ವ ಎಲ್ಲ ಕಾಲಕ್ಕೂ ಉಪಯುಕ್ತವಾಗುವುದೆಂದು ಆತನು ಭಾವಿಸಿದನು. ದಕ್ಷಿಣ ಆಫ್ರಿಕದಲ್ಲೆಲ್ಲ ಅದ್ಭುತ ಪರಿಣಾಮ ವನ್ನುಂಟುಮಾಡಿ, ಸಾಮ್ರಾಜ್ಯದ ಇತರ ಡೊಮಿನಿಯನ್ ರಾಷ್ಟ್ರಗಳೂ ಅನುಕರಿಸಲು ಮಾದರಿಯಾಗಿರುವಂತೆ ಭಾರತೀಯರ ಮೇಲೆ ನಿರ್ಬಂಧ ಗಳನ್ನು ಹಾಕಬೇಕೆಂದು ಯೋಚಿಸಿದನು. ದಕ್ಷಿಣ ಆಫ್ರಿಕದಲ್ಲಿ ಯಾವ ಒಂದು ಸ್ಥಳದಲ್ಲಿ ಭಾರತೀಯರಿಗೆ ಅವಕಾಶ ದೊರೆತರೂ ಟ್ರಾನ್ಸ್ವಾಲ್ ಸುರಕ್ಷಿತವಾಗಿರುವುದಿಲ್ಲವೆಂದು ಆತನು ಭಾವಿಸಿದನು. ಅದೂ ಅಲ್ಲದೆ ಪರಸ್ಪರ ರಾಜಿಯಿಂದ ಪುನಃ ರಿಜಿಸ್ಟ್ರೇಷನ್ ಆದರೆ ಭಾರತೀಯರ ಗೌರವ ಹೆಚ್ಚುತ್ತಿತ್ತು; ಆದರೆ ಭಾರತೀಯರಿಗೆ ಆದಷ್ಟು ಮುಖಭಂಗ ಮಾಡುವುದೇ ಆತನ ಉದ್ದೇಶವಾಗಿತ್ತು. ಆತನಿಗೆ ಭಾರತೀಯರ ಸಹಕಾರ ಬೇಕಿರಲಿಲ್ಲ. ಕ್ರೂರ ಶಾಸನಗಳನ್ನು ವಿಧಿಸಿ, ಅಷ್ಟದಿಗ್ಬಂಧನ

ಗಳನ್ನು ಹಾಕಿ ಬೆದರಿಕೆಯಿಂದ ಭಾರತೀಯರನ್ನು ಬಗ್ಗಿಸಬೇಕೆಂದಿದ್ದನು. ಆದ್ದರಿಂದ 'ಏಷ್ಯಾಟಿಕ್ ಬಿಲ್' ಎಂಬ ಒಂದು ಮಸೂದೆಯನ್ನು ರಚಿಸಿ ಆ ಮಸೂದೆಯನ್ನು ಶಾಸನವಾಗಿ ಮಾಡದಿದ್ದರೆ ಇರುವ ಶಾಸನಗಳ ಆಧಾರದ ಮೇಲೆ ಟ್ರಾನ್ಸ್‌ವಾಲಿಗೆ ಕದ್ದು ಮರೆಯಿಂದ ಬರುವ ಭಾರತೀಯರನ್ನು ತಡೆಗಟ್ಟುವುದಕ್ಕೂ ರಹದಾರಿ ಇಲ್ಲದ ನಿವಾಸಿಗಳನ್ನು ಹೊರಗೆ ಕಳುಹಿಸುವುದಕ್ಕೂ ಸಾಧ್ಯವಿಲ್ಲವೆಂದು ಸರಕಾರಕ್ಕೆ ತಿಳಿಸಿದನು. ಕರ್ಟಿಸ್‌ನ ಆಲೋಚನೆಗೆ ಸರಕಾರ ತಲೆದೂಗಿ, ಏಷ್ಯಾಟಿಕ್ ಶಾಸನದ ತಿದ್ದುಪಡೆ ಮಸೂದೆಯೊಂದನ್ನು ಶಾಸನಸಭೆಯ ಮುಂದೆ ತರುವುದಾಗಿ ಟ್ರಾನ್ಸ್‌ವಾಲ್ ಗೆಜೆಟ್‌ನಲ್ಲಿ ಪ್ರಸಿದ್ಧಪಡಿಸಿದರು.

ಈ ಮಸೂದೆಯ ವಿವರಗಳನ್ನು ಪ್ರಸ್ತಾಪಿಸುವ ಮುಂಚೆ ಒಂದು ಮುಖ್ಯಸಂಗತಿಯನ್ನು ಇಲ್ಲಿಯೇ ತಿಳಿಸಬಯಸುತ್ತೇನೆ. ಸತ್ಯಾಗ್ರಹ ಚಳವಳಿಗೆ ನಾನೇ ಕಾರಣನಾದ್ದರಿಂದ ನನ್ನ ಜೀವನದ ಕೆಲವು ವಿಷಯಗಳನ್ನು ಚೆನ್ನಾಗಿ ಗ್ರಹಿಸುವುದು ಅವಶ್ಯ. ಟ್ರಾನ್ಸ್‌ವಾಲಿನಲ್ಲಿ ಭಾರತೀಯರ ಮೇಲೆ ವಿಶೇಷ ನಿರ್ಬಂಧಗಳನ್ನು ವಿಧಿಸುವ ಪ್ರಯತ್ನ ನಡೆಯುತ್ತಿರುವಾಗಲೇ ನೇಟಾಲಿನಲ್ಲಿ ಜುಲು ದಂಗೆ ಎದ್ದಿತು. ಅದನ್ನು ದಂಗೆ ಎಂದು ಕರೆಯಲು ಆಗಲೂ ಅನುಮಾನಪಡುತ್ತಿದ್ದೆ, ಈಗಲೂ ಅನುಮಾನ ಪಡುತ್ತೇನೆ; ಆದರೆ ಯಾವಾಗಲೂ ಅದನ್ನು ದಂಗೆ ಎಂದೇ ಕರೆದಿದ್ದಾರೆ. ಬೋಅರ್ ಯುದ್ಧಕಾಲದಲ್ಲಿ ಮಾಡಿದಂತೆ ಈಗಲೂ ಅನೇಕ ಯೂರೋಪಿಯನ್ ನಿವಾಸಿಗಳು ಸ್ವಯಂಸೇವಕರಾಗಿ ಸೇರಿದರು. ನಾನು ನೇಟಾಲ್ ನಿವಾಸಿಯಾಗಿದ್ದುದರಿಂದ ಯುದ್ಧದಲ್ಲಿ ನಾನೂ ನನ್ನ ಸೇವೆ ಮಾಡಬಯಸಿದೆ. ನಮ್ಮ ಜನರ ಅಪ್ಪಣೆ ಪಡೆದು, ಸೈನ್ಯದ ಸಹಾಯಕ್ಕಾಗಿ ಗಾಯಗೊಂಡವರನ್ನು ಸಾಗಿಸುವ 'ಸ್ಟ್ರೆಚರ್ ಬೇರರ್' ಪಡೆಯೊಂದನ್ನು ರಚಿಸಲು ಸರಕಾರದ ಅಪ್ಪಣೆ ಬೇಡಿದೆ. ಸರಕಾರದವರು ನನ್ನ ಕೋರಿಕೆಯನ್ನು ನೆರವೇರಿಸಿದರು. ಜೋಹನೆಸ್‌ಬರ್ಗಿನ ನನ್ನ ಮನೆಯನ್ನು ಬಿಟ್ಟು ನೇಟಾಲಿನಲ್ಲಿರುವ ಫೀನಿಕ್ಸ್‌ಗೆ ನನ್ನ ಮನೆಯವರನ್ನು ಕಳುಹಿಸಿದೆ. ನನ್ನ ಸಹೋದ್ಯೋಗಿಗಳು ಅಲ್ಲಿಗೆ ಹೋಗಿ ನೆಲಸಿ, 'ಇಂಡಿಯನ್ ಒಪಿನಿಯನ್' ಎಂಬ ಪತ್ರಿಕೆಯನ್ನು ನಡಸುತ್ತಿದ್ದರು. ಹಿಂದಿರುಗುವುದು

ಬಹಳ ಕಾಲವಾಗಲಾರದೆಂದು ಜೋಹನೆಸ್‌ಬರ್ಗಿನಲ್ಲಿಯ ನನ್ನ ಕಚೇರಿಯನ್ನು ಮಾತ್ರ ಮುಚ್ಚಲಿಲ್ಲ.

ಇಪ್ಪತ್ತು ಇಪ್ಪತ್ತೈದು ಜನರ ಸಣ್ಣ ಪಡೆಯೊಂದಿಗೆ ನಾನು ಸೈನ್ಯವನ್ನು ಸೇರಿದೆ. ಈ ಸಣ್ಣ ಪಡೆಯಲ್ಲಿ ಸಹ ಭಾರತದ ಎಲ್ಲ ಪ್ರಾಂತಗಳ ಪ್ರತಿನಿಧಿಗಳೂ ಇದ್ದರು. ಒಂದು ತಿಂಗಳ ಕಾಲ ಈ ಪಡೆ ಯುದ್ಧದಲ್ಲಿ ಕೆಲಸಮಾಡಿತು. ಆಗ ಸೇವೆ ಸಲ್ಲಿಸಲು ನಮಗೆ ದೊರೆತ ಅವಕಾಶ ಭಾಗ್ಯಕ್ಕೆ ನಾನು ಯಾವಾಗಲೂ ದೇವರನ್ನು ವಂದಿಸುತ್ತೇನೆ. ನಾವು ಶುಶ್ರೂಷೆಮಾಡದೆ ಇದ್ದರೆ ಗಾಯಗೊಂಡ ಜುಲು ಜನರನ್ನು ಕೇಳುವವರೇ ಇರುತ್ತಿರಲಿಲ್ಲ. ಅವರ ಗಾಯಗಳಿಗೆ ಔಷಧಿ ಹಾಕಲು ಯೂರೋಪಿಯನ್ ಡಾಕ್ಟರುಗಳು ಯಾರೂ ಬರುತ್ತಿರಲಿಲ್ಲ. ಚಿಕಿತ್ಸಾ ಪಡೆಯೊಂದಿಗೆ ಇದ್ದ ಡಾಕ್ಟರ್ ಸ್ಯಾವೇಜರೇನೋ ಬಹಳ ದಯಾಳುಗಳು. ಗಾಯಗೊಂಡವರನ್ನು ಆಸ್ಪತ್ರೆಗೆ ಕರೆದೊಯ್ದ ಮೇಲೆ ಅವರ ಶುಶ್ರೂಷೆ ನಮ್ಮ ಕೆಲಸವಾಗಿರಲಿಲ್ಲ. ಆದರೆ ನಮ್ಮ ಕೆಲಸವಾಗಿರಲಿ ಇಲ್ಲದಿರಲಿ, ನಮ್ಮ ಕೈಯಲ್ಲಾದ ಎಲ್ಲ ಸಹಾಯವನ್ನೂ ಮಾಡಬೇಕೆಂದೇ ನಾವು ಯುದ್ಧಕ್ಕೆ ಸೇರಿದ್ದೆವು. ಜುಲುಗಳಿಗೆ ಆರೈಕೆಮಾಡಲು ಯೂರೋಪಿಯನರನ್ನು ಒಪ್ಪಿಸಲು ತಮ್ಮಿಂದ ಆಗಲಿಲ್ಲವಾಗಿಯೂ, ಅವರನ್ನು ಬಲಾತ್ಕರಿಸಲು ಸಾಧ್ಯವಿಲ್ಲವಾಗಿಯೂ, ನಮ್ಮ ಪೈಕಿ ಯಾರಾದರೂ ಕರುಣೆಯಿಟ್ಟು ಕೆಲಸಕ್ಕೆ ಒಪ್ಪಿದರೆ ಉಪಕಾರಮಾಡಿದಂತಾಗುವುದಾಗಿಯೂ ಡಾಕ್ಟರ್ ಸ್ಯಾವೇಜರು ತಿಳಿಸಿದರು. ಆ ರೀತಿ ಮಾಡಲು ಬಹಳ ಸಂತೋಷದಿಂದ ಒಪ್ಪಿದೆವು. ಐದಾರು ದಿನಗಳಾದರೂ ಚಿಕಿತ್ಸೆ ಇಲ್ಲದೆ ಕೊಳೆತು ದುರ್ವಾಸನೆಯಾಗಿದ್ದ ಗಾಯಗಳನ್ನು ತೊಳೆದು ಜುಲುಗಳಿಗೆ ಶುಶ್ರೂಷೆ ಮಾಡಬೇಕಾಯಿತು. ಆದರದಿಂದ ಕೆಲಸಮಾಡಿದೆವು. ಜುಲುಗಳು ನಮ್ಮೊಂದಿಗೆ ಮಾತನಾಡುವಂತೆ ಇರಲಿಲ್ಲ; ಆದರೆ ದೇವರೇ ನಮ್ಮನ್ನು ಶುಶ್ರೂಷೆಗೆ ಕಳುಹಿಸಿದನೆಂಬಂತೆ ಅವರ ಕಣ್ಣುಗಳು ಹೇಳುತ್ತಿದ್ದುವು.

ನಮ್ಮ ಕೆಲಸ ತೆರಪಿಲ್ಲದೆ ಬಹು ಕಷ್ಟವಾದ ಕಾರ್ಯವಾಗಿತ್ತು. ಒಂದೊಂದು ಸಮಯ ದಿನಕ್ಕೆ ನಲವತ್ತು ಮೈಲುಗಳ ದೂರ ನಡೆದು ಹೋಗಬೇಕಾಗುತ್ತಿತ್ತು.

ಒಂದು ತಿಂಗಳಲ್ಲಿ ನಮ್ಮ ಪಡೆಯನ್ನು ರದ್ದುಗೊಳಿಸಲಾಯಿತು. ನಮ್ಮ ಪಡೆಯ ಕಾರ್ಯಭಾಗವನ್ನು ಯುದ್ಧ ವರದಿಗಳಲ್ಲಿ ಸೇರಿಸಲಾಗಿತ್ತು. ನಮ್ಮ ಪಡೆಯ ಪ್ರತಿ ಸದಸ್ಯನಿಗೂ, ಆ ಸಮಯಕ್ಕೆಂದೇ ತಯಾರಿಸಿದ ಬಹುಮಾನ ಪದಕಗಳನ್ನು ಕೊಟ್ಟರು. ಗವರ್ನರು ವಂದನಾ ಪತ್ರ ಬರೆದರು. ಆ ಪಡೆಯ ಮೂರು ಜನ ಸಾರ್ಜೆಂಟ್‌ಗಳು ಉಮಿಯ ಶಂಕರ್ ಮಂಚಾರಾಮ್ ಷೆಲತ್, ಸುರೇಂದ್ರರಾಯ್ ಬಾಪುಭಾಯ್ ಮೇಧ್, ಹರಿಶಂಕರ್ ಈಶ್ವರ ಜೋಶಿ ಎಂಬ ಗುಜರಾತಿಗಳು. ಈ ಮೂವರೂ ಆಜಾನುಬಾಹುಗಳಾಗಿ ಕಷ್ಟಪಟ್ಟು ಕೆಲಸಮಾಡುತ್ತಿದ್ದರು. ಇತರ ಭಾರತೀಯರ ಹೆಸರುಗಳು ನನಗೆ ಜ್ಞಾಪಕವಿಲ್ಲ; ಆದರೆ ಅವರಲ್ಲಿ ಒಬ್ಬ ಪಠಾಣನಿದ್ದನು; ನಾವೂ ಆತನಂತೆ ಭಾರವನ್ನು ಹೊತ್ತು ಆತನ ಜೊತೆಯಲ್ಲೇ ನಡೆಯುತ್ತಲಿದ್ದುದನ್ನು ನೋಡಿ ಆತನು ಬಹಳ ಆಶ್ಚರ್ಯ ಪಡುತ್ತಿದ್ದನು.

ಆ ಪಡೆಯೊಂದಿಗೆ ನಾನು ಕೆಲಸಮಾಡುತ್ತಿದ್ದಾಗ ನನ್ನ ಮನಸ್ಸಿನಲ್ಲಿ ಬಹಳ ದಿನಗಳಿಂದ ಹೊಳೆದು ಅಲೆಯುತ್ತಿದ್ದ ಎರಡು ಯೋಚನೆಗಳು ಸ್ಥಿರವಾಗಿ ರೂಪಗೊಂಡುವು. ತನ್ನ ಜೀವಮಾನವನ್ನು ಸಾರ್ವಜನಿಕ ಸೇವೆಗೆ ಮೀಸಲಾಗಿಟ್ಟವನು ಬ್ರಹ್ಮಚರ್ಯವನ್ನು ಪಾಲಿಸಬೇಕೆಂಬುದು ಮೊದಲನೆಯದು; ಜೀವಮಾನ ಪರ್ಯಂತ ಬಡತನವನ್ನು ಅವಲಂಬಿಸ ಬೇಕೆಂಬುದು ಎರಡನೆಯದು. ಅತ್ಯಂತ ನೀಚಕಾರ್ಯ ಮಾಡುವುದಕ್ಕೆ ಆಗಲಿ ಎಷ್ಟೇ ದೊಡ್ಡ ಅಪಾಯವನ್ನು ಎದುರಿಸುವುದಕ್ಕಾಗಲಿ ಹಿಂಜರಿಯುವಂತೆ ಮಾಡುವಂಥ ಅಥವಾ ತಡಗಟ್ಟುವಂಥ ಯಾವ ವೃತ್ತಿಯನ್ನೂ ಅವಲಂಬಿಸಬಾರದು.

ಈ ಪಡೆಯೊಂದಿಗೆ ಕೆಲಸ ಮಾಡುವಾಗಲೇ ನಾನು ಟ್ರಾನ್ಸ್‌ವಾಲಿಗೆ ಕೂಡಲೆ ಬರಬೇಕೆಂದು ಕಾಗದಗಳೂ ಟೆಲಿಗ್ರಾಂಗಳೂ ಬಂದು ಸುರಿದಿದ್ದುವು. ಯುದ್ಧ ಮುಗಿದ ಒಡನೆ ಫೀನಿಕ್ಸ್‌ನಲ್ಲಿ ನನ್ನ ಸ್ನೇಹಿತರನ್ನು ನೋಡಿ ತತ್‌ಕ್ಷಣವೇ ಜೋಹನೆಸ್‌ಬರ್ಗ್‌ಗೆ ಹೊರಟೆ. ಅಲ್ಲಿ ಮೇಲೆ ಹೇಳಿದ ಕರಡು ಮಸೂದೆಯನ್ನು ಓದಿದೆನು. ೧೯೦೬ನೆಯ ಆಗಸ್ಟ್ ೨೨ನೆಯ ತಾರೀಖಿನ ಮಸೂದೆಯನ್ನು ಪ್ರಸಿದ್ಧಪಡಿಸಿದ್ದ ಟ್ರಾನ್ಸ್‌ವಾಲ್

ಸರಕಾರದ ವಿಶೇಷ ಗೆಜೆಟ್ಟಿನ ಪ್ರತಿಯನ್ನು ನನ್ನ ಕಚೇರಿಯಿಂದ ಮನೆಗೆ ತೆಗೆದುಕೊಂಡು ಬಂದೆ. ಒಬ್ಬ ಸ್ನೇಹಿತನೊಂದಿಗೆ ನನ್ನ ಮನೆ ಹತ್ತಿರ ಇದ್ದ ಗುಡ್ಡದಮೇಲೆ ಏರಿ, 'ಇಂಡಿಯನ್ ಒಪಿನಿಯನ್'ನಲ್ಲಿ ಪ್ರಕಟಿಸಲು ಆ ಶಾಸನವನ್ನು ಗುಜರಾತಿಗೆ ಭಾಷಾಂತರ ಮಾಡಲು ಪ್ರಾರಂಭಿಸಿದೆ. ಆ ಮಸೂದೆಯ ವಿಧಿಗಳನ್ನು ಒಂದಾಗುತ್ತಲೊಂದನ್ನು ಓದುತ್ತ ನನ್ನ ಮೈನಡುಗಿತು. ಭಾರತೀಯ ದ್ವೇಷ ಹೊರತು ಅದರಲ್ಲಿ ಇನ್ನೇನೂ ನನಗೆ ತೋರಲಿಲ್ಲ. ಈ ಮಸೂದೆ ಶಾಸನವಾದರೆ ಭಾರತೀಯರು ಹೇಡಿಗಳಾಗಿ ಅದಕ್ಕೆ ಸುಮ್ಮನೆ ತಲೆಬಾಗಿದರೆ, ಅದರಿಂದ ದಕ್ಷಿಣ ಆಫ್ರಿಕದಲ್ಲಿ ಅವರಿಗೆ ಸರ್ವನಾಶವೆಂದು ನನಗೆ ತೋರಿತು. ಅವರ ಅಳಿವು ಉಳಿವಿನ ಪ್ರಶ್ನೆ ಇದೆಂದು ನನಗೆ ತೋರಿತು. ಬಿನ್ನವತ್ತಳೆ ಬೇಡಿಕೆಗಳಿಂದ ಪರಿಹಾರ ದೊರೆಯದಿದ್ದರೆ ಭಾರತೀಯರು ಕೈಕಟ್ಟಿಕೊಂಡು ಕುಳಿತುಕೊಳ್ಳಲಾಗದೆಂದು ಕಂಡಿತು. ಅಂತಹ ಶಾಸನಕ್ಕೆ ತಲೆಬಾಗುವುದಕ್ಕಿಂತಲೂ ಸಾಯುವುದು ಮೇಲು. ಆದರೆ ನಾವು ಸಾಯುವುದೆಂತು? ಗೆಲ್ಲಬೇಕು ಇಲ್ಲವೆ ಸಾಯಬೇಕು ಎಂಬ ಸ್ಥಿತಿಗೆ ಬರಬೇಕಾದರೆ ನಾವು ಮಾಡಬೇಕಾದ ಕಾರ್ಯವಾವುದು, ಎದುರಿಸಬೇಕಾದ ಸ್ಥಿತಿ ಏನು? ನನ್ನ ಎದುರಿಗೆ ಒಂದು ಗೋಡೆ ಅಡ್ಡ ನಿಂತಂತೆ ಇತ್ತು; ನನಗೆ ದಾರಿಯೆ ಕಾಣಲಿಲ್ಲ. ಓದಿದಾಗ ಮೈಯನ್ನು ನಡುಗಿಸಿಬಿಟ್ಟ ಆ ಮಸೂದೆಯ ವಿಧಿನಿಯಮಗಳನ್ನು ವಿವರಿಸುವುದು ಆವಶ್ಯಕ. ಅದರ ಸಾರಾಂಶವನ್ನು ಮುಂದೆ ತಿಳಿಸಿದ್ದೇನೆ.

ಟ್ರಾನ್ಸ್ವಾಲಿನಲ್ಲಿ ವಾಸಮಾಡಲು ಅಧಿಕಾರವಿರುವ ಎಂಟು ವರ್ಷಕ್ಕೆ ಮೀರಿದ ಪ್ರತಿಯೊಬ್ಬ ಭಾರತೀಯ ಹೆಂಗಸು, ಗಂಡಸು ಅಥವಾ ಮಗು, ಆಕೆಯ ಅಥವಾ ಆತನ ಹೆಸರನ್ನು ಏಷ್ಯಾಟಿಕ್ ರಿಜಿಸ್ಟರ್‌ನಲ್ಲಿ ರಿಜಿಸ್ಟರ್ ಮಾಡಿಸಿ ರಿಜಿಸ್ಟ್ರೇಷನ್ ಪತ್ರವನ್ನು ಪಡೆಯತಕ್ಕದ್ದು.

ರಿಜಿಸ್ಟ್ರೇಷನ್‌ಗೆ ಬರುವ ಅರ್ಜಿದಾರರು ತಮ್ಮ ಹಳೆಯ ರಹದಾರಿಗಳನ್ನು ರಿಜಿಸ್ಟ್ರಾರರಲ್ಲಿ ಕೊಟ್ಟು ತಮ್ಮ ಅರ್ಜಿಯಲ್ಲಿ ಹೆಸರು, ವಾಸಸ್ಥಾನ, ಜಾತಿ, ವಯಸ್ಸು ಮುಂತಾದ ವಿವರಗಳನ್ನು ತಿಳಿಸಬೇಕು. ರಿಜಿಸ್ಟ್ರಾರರು ಅರ್ಜಿದಾರನ ಮೈಮೇಲಿನ ಗುರುತಿನ ಮುಖ್ಯ ಚಿಹ್ನೆಗಳನ್ನು ಗುರುತು

ಮಾಡಿ ಆತನ ಕೈಬೆರಳುಗಳ ಮತ್ತು ಹೆಬ್ಬೆಟ್ಟಿನ ಗುರುತುಗಳನ್ನು ತೆಗೆದು ಕೊಳ್ಳಬೇಕು. ನಿಗದಿಯಾದ ತಾರೀಖಿನೊಳಗೆ ರಿಜಿಸ್ಟ್ರೇಷನ್‌ಗೆ ಅರ್ಜಿ ಕೊಡದ ಪ್ರತಿಯೊಬ್ಬ ಭಾರತೀಯನಿಗೂ ಟ್ರಾನ್ಸ್‌ವಾಲಿನಲ್ಲಿ ವಾಸ ಮಾಡುವ ಹಕ್ಕು ತಪ್ಪುವುದು. ಅರ್ಜಿ ಕೊಡದೆ ಹೋದರೆ ಕಾನೂನು ಪ್ರಕಾರ ಅಪರಾಧವೆಂದು ಪರಿಗಣಿಸಿ, ಅಪರಾಧಿಗೆ ಜುಲ್ಮಾನೆ, ಸಜ ಅಥವಾ ಕೋರ್ಟಿನವರು ಇಷ್ಟಪಟ್ಟರೆ ಗಡೀಪಾರು ಸಹ ಮಾಡಬಹುದು. ಸಣ್ಣಮಕ್ಕಳ ಪರವಾಗಿ ತಾಯಿತಂದೆಗಳು ಅರ್ಜಿ ಹಾಕಿ ಅವರ ಬೆರಳ ಗುರುತುಗಳು ಮುಂತಾದುವನ್ನು ಕೊಡಲು ರಿಜಿಸ್ಟ್ರಾರರ ಮುಂದೆ ಕರೆದು ಕೊಂಡು ಬರಬೇಕು. ಒಂದುವೇಳೆ ತಾಯಿತಂದೆಗಳು ತಮ್ಮ ಈ ಜವಾಬ್ದಾರಿಯನ್ನು ನಿರ್ವಹಿಸದಿದ್ದರೆ ಮೈನರ್‌ಗೆ ಹದಿನಾರು ವರ್ಷ ತುಂಬುತ್ತಲೆ ಆತನೇ ಆ ಕೆಲಸ ಮಾಡಬೇಕು; ತಪ್ಪಿದರೆ ತಂದೆತಾಯಿ ಗಳಿಗೆ ಯಾವ ಶಿಕ್ಷೆ ವಿಧಿಸಲಾಗಿದೆಯೋ ಅದೇ ಶಿಕ್ಷೆಗೆ ಗುರಿಯಾಗಬೇಕು. ರಿಜಿಸ್ಟ್ರೇಷನ್ ರಹದಾರಿಯನ್ನು ಪೋಲೀಸ್ ಅಧಿಕಾರಿ ಎಲ್ಲಿ ಯಾವಾಗ ಕೇಳಿದರೂ ತೋರಿಸಬೇಕು. ಆ ರೀತಿ ತೋರಿಸದಿದ್ದರೆ ತಪ್ಪೆಂದು ಭಾವಿಸಿ ತಪ್ಪಿತಸ್ಥನಿಗೆ ಜುಲ್ಮಾನೆಯನ್ನೊ ಸಜವನ್ನೊ ವಿಧಿಸಬಹುದು. ರಹದಾರಿ ಪರೀಕ್ಷೆಗೆಂದು ಯಾರ ಮನೆಯೊಳಗಾದರೂ ಪ್ರವೇಶ ಮಾಡಲು ಪೋಲೀಸ್ ಅಧಿಕಾರಿಗಳಿಗೆ ಅಧಿಕಾರವಿರತಕ್ಕದ್ದು. ಟ್ರಾನ್ಸ್‌ವಾಲ್ ಹೊರಗಿನಿಂದ ಎಲ್ಲಿಂದ ಬಂದರೂ ಭಾರತೀಯರು ಕೆಲಸದ ಮೇಲಿದ್ದ ಪೋಲೀಸ್ ಅಧಿಕಾರಿಗೆ ತಮ್ಮ ರಹದಾರಿಯನ್ನು ತೋರಿಸಬೇಕು. ಕೆಲಸಕ್ಕಾಗಿ ಕೋರ್ಟುಗಳಿಗೆ ಹೋಗಿರಲಿ, ವ್ಯಾಪಾರ ಅಥವಾ ಬೈಸಿಕಲ್ ಲೈಸೆನ್ಸ್ ಪಡೆಯಲು ರೆವಿನ್ಯೂ ಕಚೇರಿಗೆ ಹೋಗಿರಲಿ ಕೇಳಿದ ಕೂಡಲೆ ರಹದಾರಿಗಳನ್ನು ತೋರಿಸಬೇಕು. ಅಂದರೆ ಸರಕಾರದ ಯಾವುದಾದರೂ ಕಚೇರಿಗೆ ಹೋಗಿ, ತಮ್ಮ ಅಧಿಕಾರದೊಳಗಿನ ಕೆಲಸ ಮಾಡಿಕೊಡಲು ಭಾರತೀಯನು ಕೇಳಿದರೆ, ಆ ರೀತಿ ಮಾಡುವ ಮೊದಲು ರಹದಾರಿ ಯನ್ನು ತೋರಿಸೆಂದು ಯಾವ ಅಧಿಕಾರಿಯಾದರೂ ಒತ್ತಾಯ ಮಾಡ ಬಹುದಿತ್ತು. ಆ ರೀತಿ ರಹದಾರಿಯನ್ನು ತೋರಿಸದೆ ಇದ್ದರಾಗಲೀ, ಕಾನೂನು ಪ್ರಕಾರ ವಿಧಾಯಕವಾದ ಗುರುತಿನ ಚಿಹ್ನೆಗಳನ್ನು ಅಥವಾ

ವಿವರಗಳನ್ನು ತಿಳಿಸದೆ ಇದ್ದರಾಗಲಿ ತಪ್ಪಿತಸ್ಥನೆಂದು ಭಾವಿಸಿ ತಪ್ಪಿತಸ್ಥ ನಿಗೆ ಜುಲ್ಮಾನೆ ಅಥವಾ ಸಜ ವಿಧಿಸಬಹುದು.

ಪ್ರಪಂಚದ ಯಾವ ಭಾಗದಲ್ಲೂ ಸ್ವತಂತ್ರ ಪ್ರಜೆಗಳ ಮೇಲೆ ಇಂತಹ ಶಾಸನ ಮಾಡಿರುವುದನ್ನು ಎಲ್ಲಿಯೂ ನಾನು ನೋಡಿಲ್ಲ. ನೇಟಾಲಿನಲ್ಲಿ ಕರಾರು ಮಾಡಿಕೊಂಡ ಕೆಲಸಗಾರರಿಗೆ ಈ ವಿಧವಾದ ರಹದಾರಿ ನಿರ್ಬಂಧವಿತ್ತು, ಆದರೆ ಆ ಬಡಪಾಯಿಗಳನ್ನು ಸ್ವತಂತ್ರ ರೆಂದು ಹೇಳಲಾಗುವುದಿಲ್ಲ. ಆದಾಗ್ಯೂ ಅವರ ಮೇಲಿನ ಶಾಸನ ವಿಧಿ ಗಳು ಸಹ, ಈ ಹೊಸ ಮಸೂದೆಯ ವಿಧಿಗಳಷ್ಟು ಕ್ರೂರವಾಗಿರಲಿಲ್ಲ. ಲಕ್ಷಾಂತರ ರೂಪಾಯಿ ಆಸ್ತಿವಂತ ವರ್ತಕನನ್ನು ಗಡೀಪಾರು ಮಾಡಿ ಈ ಶಾಸನದ ಸಹಾಯದಿಂದ ನಿರ್ಗತಿಕನನ್ನಾಗಿ ಮಾಡಬಹುದಾಗಿತ್ತು. ಈ ಶಾಸನದ ವಿಧಿಗಳನ್ನು ಭಂಗಮಾಡಿದ್ದಕ್ಕೆ ಹೇಗೆ ಗಡೀಪಾರು ಮಾಡ ಲಾಯಿತೆಂಬುದು ಮುಂದೆ ತಿಳಿಯುತ್ತದೆ. ಇಂಡಿಯದಲ್ಲಿ ಕಳ್ಳತನ ದರೋಡೆ ಮಾಡತಕ್ಕ ಕೆಲವು ಜನರ ಮೇಲೆ ಉಪಯೋಗಿಸಲು ಕೆಲವು ಕ್ರೂರ ಶಾಸನಗಳಿವೆ. ಈ ಮಸೂದೆ ಅಂತಹ ಶಾಸನಗಳನ್ನು ಹೋಲು ತ್ತಿದ್ದಿತಲ್ಲದೆ, ಅವಕ್ಕೆ ಸರಿತೂಗುವಂತಿತ್ತು. ಈ ಮಸೂದೆಯ ಪ್ರಕಾರ ಹೆಬ್ಬೆಟ್ಟಿನ ಗುರುತನ್ನು ಕೊಡುವುದು ದಕ್ಷಿಣ ಆಫ್ರಿಕದಲ್ಲಿ ಹೊಸ ಪದ್ಧತಿ ಯಾಗಿತ್ತು. ಆ ವಿಷಯ ಸ್ವಲ್ಪ ಪರಿಚಯ ಮಾಡಿಕೊಳ್ಳಲು ಒಬ್ಬ ಪೊಲೀಸ್ ಅಧಿಕಾರಿ ಹೆನ್ರಿ ಎಂಬವನು ಬರೆದಿದ್ದ ಬೆರಳು ಗುರುತಿನ ಒಂದು ಪುಸ್ತಕವನ್ನು ಓದಿದೆ. ಬೆರಳಿನ ಗುರುತುಗಳನ್ನು ಸಾಮಾನ್ಯ ವಾಗಿ ಅಪರಾಧಿಗಳಿಂದ ತೆಗೆದುಕೊಳ್ಳುತ್ತಾರೆಂದು ಅದರಿಂದ ತಿಳಿಯಿತು. ಆದ್ದರಿಂದ ಬಲಾತ್ಕಾರವಾಗಿ ಬೆರಳು ಗುರುತುಗಳನ್ನು ಪಡೆಯುವ ಈ ವಿಧಿಯನ್ನು ನೋಡಿ ನನಗೆ ಸಿಡಿಲು ಬಡಿದಂತಾಯಿತು. ಅದೂ ಅಲ್ಲದೆ ಹದಿನಾರು ವರ್ಷದೊಳಗಿಡ ಹೆಂಗಸರು ಮಕ್ಕಳು ರಿಜಿಸ್ಟರ್ ಮಾಡಿಸ ಬೇಕೆಂದು ವಿಧಿಸಿದ ಕಾನೂನುಗಳಲ್ಲಿ ಇದೇ ಮೊದಲನೆಯದಾಗಿತ್ತು.

ಮಾರನೆಯ ದಿನ ಭಾರತೀಯ ಮುಖಂಡರ ಒಂದು ಸಣ್ಣ ಸಭೆ ಯನ್ನು ಸೇರಿಸಿ ಅಲ್ಲಿ ಈ ಮಸೂದೆಯನ್ನು ಶಬ್ದಶಃ ಅರ್ಥಮಾಡಿ ಹೇಳಿದೆ. ನನಗೆ ದಿಗಿಲು ಬಡಿದಂತೆ ಅವರಿಗೂ ಗಾಬರಿಯಾಯಿತು. ಅವರಲ್ಲಿ

ಒಬ್ಬರು ಉದ್ರೇಕಭರದಲ್ಲಿ "ನನ್ನ ಹೆಂಡತಿಯಿಂದ ಯಾರಾದರೂ ರಹದಾರಿಯನ್ನು ಕೇಳಲು ಬಂದರೆ ಅಲ್ಲಿಯೇ ಆತನನ್ನು ಗುಂಡಿನಿಂದ ಸುಟ್ಟು ಆಮೇಲೆ ಬಂದದ್ದನ್ನು ಅನುಭವಿಸುತ್ತೇನೆ" ಎಂದನು. ನಾನು ಆತನನ್ನು ಸಮಾಧಾನಗೊಳಿಸಿ ಸಭೆಗೆ ಈ ರೀತಿ ಹೇಳಿದೆ: "ಇದು ಬಹಳ ವಿಷಮ ಘಳಿಗೆ. ಈ ಮಸೂದೆ ಶಾಸನವಾಗಿ, ಅದಕ್ಕೆ ನಾವು ಒಪ್ಪಿದರೆ, ದಕ್ಷಿಣ ಆಫ್ರಿಕದಲ್ಲೆಲ್ಲ ಅದೇ ರೀತಿ ಶಾಸನಗಳಾಗುತ್ತವೆ. ನನಗೆ ತೋರುವ ಮಟ್ಟಿಗೆ ಈ ಶಾಸನದಿಂದ ದಕ್ಷಿಣ ಆಫ್ರಿಕದಲ್ಲಿ ಭಾರತೀಯರ ಜೀವನ ಮೂಲಕ್ಕೇನೆ ಏಟ್ಟು ಬಿದ್ದಿದೆ. ನಮ್ಮನ್ನು ಈ ದೇಶದಿಂದ ಹೊಡೆದೋಡಿಸಲು ಇದೇ ಕೊನೆಯ ಹೆಜ್ಜೆಯಲ್ಲ. ಆದರೆ ಮೊದಲನೆಯದು. ಆದ್ದರಿಂದ ಟ್ರಾನ್ಸ್‌ವಾಲಿನ ಹತ್ತು ಹದಿನೈದು ಸಾವಿರ ಭಾರತೀಯರ ಹಿತ ಒಂದೇ ಅಲ್ಲ; ದಕ್ಷಿಣ ಆಫ್ರಿಕದ ಸಮಸ್ತ ಭಾರತೀಯರ ಹಿತ ಸಂರಕ್ಷಣೆಯ ಜವಾಬ್ದಾರಿಯ ಹೊರೆ ನಮ್ಮ ಮೇಲೆ ಬಿದ್ದಿದೆ. ಅಲ್ಲದೆ ಈ ಶಾಸನದ ವಿಧಿಗಳ ಅರ್ಥವನ್ನು ನೀವು ಪೂರ್ಣ ಗ್ರಹಿಸುವುದಾದರೆ, ಭಾರತದ ಗೌರವ ರಕ್ಷಣೆಯ ಭಾರವೂ ನಮ್ಮ ಪಾಲಿಗೆ ಬಂದಿದೆ. ಏಕೆಂದರೆ, ಈ ಶಾಸನ ನಮ್ಮನ್ನು ಮಾತ್ರವಲ್ಲ, ನಮ್ಮ ಮಾತೃಭೂಮಿಯನ್ನೂ ಅವಹೇಳನ ಮಾಡಲು ಪ್ರಯತ್ನಿಸಿದೆ. ನಿರಪರಾಧಿಗಳಾದ ಜನರನ್ನು ಅಪಮಾನಗೊಳಿಸುವುದು ನಮ್ಮ ದೇಶಕ್ಕೇ ಅಪಮಾನ. ಈ ಶಾಸನವನ್ನು ನಮ್ಮ ಮೇಲೆ ಹೊರಿಸಲು ನಾವು ಯಾವ ಅಪರಾಧವನ್ನೂ ಮಾಡಿಲ್ಲ. ನಾವು ನಿರಪರಾಧಿಗಳು. ಒಂದು ಜನಾಂಗಕ್ಕೆ ಸೇರಿದ ಒಬ್ಬ ನಿರಪರಾಧಿಗೆ ಅಗೌರವಮಾಡಿದರೂ ಇಡಿಯ ಜನಾಂಗವನ್ನೇ ಅಗೌರವಪಡಿಸಿದಂತೆ ಆಗುತ್ತದೆ. ಆದ್ದರಿಂದ ನಾವು ಆತುರಪಡಬಾರದು, ತಾಳ್ಮೆಗುಂದಬಾರದು, ಸಿಟ್ಟುಮಾಡಬಾರದು. ಆ ರೀತಿ ಮಾಡಿದರೆ ಈ ದಾಳಿಯಿಂದ ನಾವು ಪಾರಾಗುವುದಿಲ್ಲ. ಆದರೆ ನಾವು ತಾಳ್ಮೆಯಿಂದ ಯೋಚಿಸಿ, ಎಲ್ಲರೂ ಒಬ್ಬನಂತೆ ನಿಂತು, ಶಾಸನವನ್ನೆ ವಿರೋಧಿಸಲು ಕಾರ್ಯಕ್ರಮವನ್ನು ಕೈಗೊಂಡರೆ ಮತ್ತು ಆ ರೀತಿ ವಿರೋಧಿಸುವಾಗ ಬರುವ ಕಷ್ಟವನ್ನೂ ಸಹಿಸಲು ಸಿದ್ಧರಾದರೆ ದೇವರು ನಮಗೆ ಸಹಾಯಕನಾಗುತ್ತಾನೆ." ಎಲ್ಲರೂ ಪರಿಸ್ಥಿತಿ ಕ್ರೂರವಾಗಿದೆ

ಎಂಬುದನ್ನು ಅರಿತುಕೊಂಡರು. ಕೆಲವು ನಿರ್ಣಯಗಳನ್ನು ರಚಿಸಿ ಒಪ್ಪಿಗೆ ಪಡೆಯಲು ಒಂದು ಸಾರ್ವಜನಿಕ ಸಭೆ ಸೇರಿಸಲು ತೀರ್ಮಾನಿಸಿದೆವು. ಅದಕ್ಕೋಸ್ಕರ ಯೆಹೂದ್ಯರ ಒಂದು ನಾಟ್ಯಶಾಲೆಯನ್ನು ಬಾಡಿಗೆಗೆ ಪಡೆದೆವು.

# ೧೨. ಸತ್ಯಾಗ್ರಹದ ಹುಟ್ಟು

೧೯೦೬ನೆಯ ಸೆಪ್ಟಂಬರ್ ೧೧ನೆಯ ದಿನ ಈ ಸಭೆ ಸೇರಿತು. ಟ್ರಾನ್ಸ್‌ವಾಲಿನ ಅನೇಕ ಸ್ಥಳಗಳಿಂದ ಪ್ರತಿನಿಧಿಗಳು ಬಂದಿದ್ದರು. ಆದರೆ ಆಗ ನನ್ನ ಸಹಾಯದಿಂದ ರಚಿಸಿದ ನಿರ್ಣಯಗಳ ತೊಡಕು ಏನಾಗಬಹುದೆಂದು ನಾನೇ ಅರ್ಥಮಾಡಿಕೊಂಡಿರಲಿಲ್ಲವೆಂದು ಒಪ್ಪುತ್ತೇನೆ. ಅಲ್ಲದೆ ಅವುಗಳ ಎಲ್ಲ ಪರಿಣಾಮವನ್ನೂ ನಾನು ಊಹಿಸಿರಲಿಲ್ಲ. ಆ ಹಳೆಯ ಎಂಪೈರ್ ನಾಟ್ಯಶಾಲೆಯಲ್ಲಿ ನೆಲದಿಂದ ಮುಚ್ಚಿಗೆವರೆಗೂ ಜನರು ಕಿಕ್ಕಿರಿದು ತುಂಬಿದ್ದರು. ಪ್ರತಿಯೊಬ್ಬರ ಮುಖದಲ್ಲಿಯೂ ಏನೋ ಮಹತ್ಕಾರ್ಯ ನಡೆಯುತ್ತದೆ ಅಥವಾ ಮಹಾಘಟನೆ ಸಂಭವಿಸುತ್ತದೆ ಎಂಬ ನಿರೀಕ್ಷೆ ಎದ್ದು ಕಾಣುತ್ತಿತ್ತು. ಟ್ರಾನ್ಸ್‌ವಾಲ್ ಬ್ರಿಟಿಷ್ ಇಂಡಿಯನ್ ಸಂಸ್ಥೆಯ ಅಧ್ಯಕ್ಷರಾದ ಅಬ್ದುಲ್ ಗನಿಯವರು ಅಧ್ಯಕ್ಷತೆ ವಹಿಸಿದ್ದರು. ಅವರು ಟ್ರಾನ್ಸ್‌ವಾಲ್ ಭಾರತೀಯ ನಿವಾಸಿಗಳಲ್ಲಿ ಅತ್ಯಂತ ಹಳಬರಾಗಿಯೂ ಪ್ರಸಿದ್ಧ ವರ್ತಕರಾದ ಮಾಮದ್ ಕಾಸಂ ಕಮ್ರುದ್ದೀನ್ ಅಂಗಡಿಯ ಜೋಹನ್ಸ್‌ಬರ್ಗ್ ಶಾಖೆಯ ವ್ಯವಸ್ಥಾಪಕರಾಗಿಯೂ ಇದ್ದರು. ಆ ಸಭೆಯಲ್ಲಿ ಒಪ್ಪಿದ ನಿರ್ಣಯಗಳಲ್ಲಿ ಬಹು ಮುಖ್ಯವಾದುದೆಂದರೆ, ಭಾರತೀಯರು ಉಗ್ರವಾಗಿ ವಿರೋಧಿಸಿದರೂ ಆ ಮಸೂದೆಯನ್ನು ಶಾಸನಕಡತಕ್ಕೆ ಸೇರಿಸಿದರೆ ಆ ಶಾಸನದಂತೆ ನಡೆಯಲಾಗದೆಂದೂ ಆ ರೀತಿ ಶಾಸನಭಂಗ ಮಾಡುವುದರಲ್ಲಿ ಬರುವ ಎಲ್ಲ ಶಿಕ್ಷೆ ಮತ್ತು ಕಷ್ಟವನ್ನೂ ಅನುಭವಿಸಬೇಕೆಂದೂ ಮಾಡಿದ ಪ್ರಸಿದ್ಧವಾದ ನಾಲ್ಕನೆಯ ನಿರ್ಣಯ.

ಈ ನಿರ್ಣಯವನ್ನು ನಾನು ಸಭೆಗೆ ಸಂಪೂರ್ಣವಾಗಿ ವಿವರಿಸಿದ್ದನ್ನು ಎಲ್ಲರೂ ತಾಳ್ಮೆಯಿಂದ ಕೇಳಿದರು. ಸಭೆಯ ನಡವಳಿಕೆ

ಗಳೆಲ್ಲವೂ ಹಿಂದಿ ಅಥವಾ ಗುಜರಾತಿಯಲ್ಲಿ ನಡೆದುವು. ಆದ್ದರಿಂದ ಸಭೆಯಲ್ಲಿರುವವರೆಲ್ಲರೂ ಸಭೆಯ ಕಾರ್ಯಕಲಾಪಗಳನ್ನು ಅರ್ಥಮಾಡಿ ಕೊಳ್ಳಬಹುದಾಗಿತ್ತು. ಹಿಂದಿ ಬಾರದ ತಮಿಳು ಮತ್ತು ತೆಲುಗು ಜನರಿಗೆ ಆ ಭಾಷೆಗಳನ್ನು ಬಲ್ಲವರು ಭಾಷಣಮಾಡಿ ಆ ಭಾಷೆಗಳಲ್ಲಿ ಎಲ್ಲವನ್ನೂ ಸಂಪೂರ್ಣವಾಗಿ ವಿವರಿಸಿದರು. ನಿರ್ಣಯವನ್ನು ಪ್ರತಿಪಾದಿಸಿ, ಸಮರ್ಥಿಸಿ ಅನೇಕರು ಮಾತನಾಡಿದರು. ಸೇಠ್ ಹಾಜಿ ಹಬೀಬ್ ಎಂಬುವವರು ಅವರಲ್ಲೊಬ್ಬರು. ಅವರೂ ದಕ್ಷಿಣ ಆಫ್ರಿಕದ ಬಹಳ ಹಳೆಯ ಅನುಭವಸ್ಥ ನಿವಾಸಿಗಳು. ಅವರ ಭಾಷಣ ಬಹಳ ಪರಿಣಾಮಕಾರಿಯಾಗಿತ್ತು. ಅವರು ಬಹಳ ಮನನೊಂದುಕೊಂಡು, ದೇವರನ್ನು ಸಾಕ್ಷಿಯಾಗಿಟ್ಟುಕೊಂಡು "ನಾವು ಈ ನಿರ್ಣಯವನ್ನು ಅಂಗೀ ಕರಿಸಬೇಕು. ಇಂತಹ ಅವಮಾನಕರವಾದ ಶಾಸನಕ್ಕೆ ಹೇಡಿಗಳಂತೆ ಎಂದೂ ತಲೆತಗ್ಗಿಸಬಾರದು" ಎಂದು ಹೇಳಿದರು. ತಾವು ದೇವರಸಾಕ್ಷಿ ಯಾಗಿ ಆ ಶಾಸನವನ್ನು ಪಾಲಿಸುವುದಾಗಿಯೂ ಇತರರೂ ಅದೇ ರೀತಿ ಮಾಡಬೇಕೆಂದೂ ತಮ್ಮ ಗಂಭೀರವಾಣಿಯಿಂದ ಪ್ರತಿಜ್ಞೆಮಾಡಿ ದರು. ಆ ನಿರ್ಣಯವನ್ನು ಸಮರ್ಥನೆಮಾಡುತ್ತ ಇನ್ನೂ ಇತರರು ಆವೇಶಪೂರಿತವಾದ, ಕೋಪೋದ್ರಿಕ್ತ ಭಾಷಣಗಳನ್ನು ಮಾಡಿದರು. ಸೇಠ್ ಹಾಜಿ ಹಬೀಬ್‌ರು ತಮ್ಮ ಭಾಷಣದ ಮಧ್ಯೆ ಆ ರೀತಿ ಪ್ರತಿಜ್ಞೆ ಯನ್ನು ತೆಗೆದುಕೊಂಡ ಕೂಡಲೆ ನಾನು ಚಕಿತನಾಗಿ, ಎಚ್ಚರಗೊಂಡೆ. ನನ್ನ ಮತ್ತು ನಮ್ಮ ಜನರ ಜವಾಬ್ದಾರಿ ಆಗಲೇ ನನಗೆ ಪೂರ್ಣವಾಗಿ ಅರ್ಥವಾದದ್ದು. ನಮ್ಮ ಜನರು ಆ ಹಿಂದೆ ಅನೇಕ ನಿರ್ಣಯಗಳನ್ನು ಒಪ್ಪಿ, ಪುನರಾಲೋಚಿಸಿ ಅಥವಾ ಹೊಸ ಅನುಭವದಂತೆ ತಿದ್ದುಪಡಿ ಸಹ ಮಾಡಿದ್ದರು. ಒಪ್ಪಿದ ನಿರ್ಣಯಗಳನ್ನು ಎಲ್ಲರೂ ಅನುಸರಿಸದೆ ಇದ್ದ ಸಂದರ್ಭಗಳೂ ಅನೇಕ ಇದ್ದುವು. ನಿರ್ಣಯಕ್ಕೆ ತಿದ್ದುಪಡಿಗಳನ್ನು ಮಾಡುವುದು, ಒಪ್ಪಿದ ನಿರ್ಣಯಗಳನ್ನು ನಿರ್ಣಯಿಸಿದವರೇ ಅನುಸರಿಸ ದಿರುವುದು ಪ್ರಪಂಚದಲ್ಲಿ ಎಲ್ಲೆಡೆಯಲ್ಲೂ ಸಾರ್ವಜನಿಕ ಜೀವನದ ಸಾಮಾನ್ಯ ಅನುಭವ. ಆದರೆ ಅಂತಹ ನಿರ್ಣಯಗಳಲ್ಲಿ ದೇವರ ಹೆಸರನ್ನು ಯಾರೂ ಮುಂದೆ ತರುವುದಿಲ್ಲ. ತತ್ವಶಃ ನಿರ್ಣಯಕ್ಕೂ,

ದೇವರ ಹೆಸರಿನಲ್ಲಿ ಮಾಡಿದ ಪ್ರತಿಜ್ಞೆಗೂ ಯಾವ ಭೇದವೂ ಇರಕೂಡದು. ತಿಳಿದವನು ಮನಃಪೂರ್ವಕವಾಗಿ ಒಂದು ನಿರ್ಣಯಕ್ಕೆ ಬಂದ ಮೇಲೆ ಕೂದಲೆಳೆಯಷ್ಟೂ ತಪ್ಪದಂತೆ ಅದನ್ನು ಪರಿಪಾಲಿಸುತ್ತಾನೆ. ದೇವರ ಹೆಸರಿನಲ್ಲಿ ಮಾಡಿದ ಪ್ರತಿಜ್ಞೆಗೆ ಕೊಡುವ ಬೆಲೆಯನ್ನೇ ಆತನು ಆ ನಿರ್ಣಯಕ್ಕೂ ಕೊಡುತ್ತಾನೆ. ಆದರೆ ವ್ಯವಹಾರ ಪ್ರಪಂಚದಲ್ಲಿ ತಾತ್ವಿಕ ದೃಷ್ಟಿಗೆ ಬೆಲೆ ಕಡಮೆ; ಸಾಮಾನ್ಯ ನಿರ್ಣಯಕ್ಕೂ ದೇವರ ಹೆಸರಿನಲ್ಲಿ ಮಾಡಿದ ನಿರ್ಣಯಕ್ಕೂ ಅಜಗಜಾಂತರವೆಂಬ ಭಾವನೆ ಬೇರೂರಿದೆ ಸಾಮಾನ್ಯ ನಿರ್ಣಯವನ್ನು ಮಾಡಿದ ಮನುಷ್ಯನೊಬ್ಬನು ಅದಕ್ಕೆ ವಿರೋಧವಾಗಿ ನಡೆದರೆ ನಾಚಿಕೆ ಪಡುವುದಿಲ್ಲ. ಆದರೆ ಪ್ರಮಾಣಮಾಡಿದ ಮನುಷ್ಯನು ತಪ್ಪಿ ನಡೆದರೆ ನಾಚಿಕೆಪಡವುದೊಂದೇ ಅಲ್ಲ; ಸಮಾಜ ಸಹ ಆತನನ್ನು ಪಾಪಿಷ್ಟನೆಂದು ದೂರೀಕರಿಸುತ್ತದೆ. ಈ ಕಾಲ್ಪನಿಕ ಭೇದ ಜನರ ಮನಸ್ಸಿನಲ್ಲಿ ಎಷ್ಟರಮಟ್ಟಿಗೆ ಬೇರೂರಿದೆ ಎಂದರೆ, ನ್ಯಾಯಾಧೀಶರ ಎದುರಿನಲ್ಲಿ ಸತ್ಯವೆಂದು ಪ್ರಮಾಣ ಮಾಡಿ ಸಾಕ್ಷ್ಯ ನುಡಿಯುವ ಮನುಷ್ಯನು ಸುಳ್ಳು ಹೇಳಿರುವನೆಂದು ಆಮೇಲೆ ಗೊತ್ತಾದರೆ ಆತನು ತಪ್ಪಿತಸ್ಥನೆಂದು ಭಾವಿಸಿ ಉಗ್ರಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ.

ಪವಿತ್ರ ಪ್ರತಿಜ್ಞೆಗಳ ಅನುಭವ ಸ್ವತಃ ನನ್ನಲ್ಲಿ ಬೇಕಾದಷ್ಟು ಇದ್ದು, ಅವುಗಳ ಪ್ರಯೋಜನವನ್ನರಿತ ನನ್ನ ಮನಸ್ಸಿನೆದುರಿನಲ್ಲಿ ಮೇಲ್ಕಂಡ ಯೋಚನೆಗಳು ಸುಳಿಯುತ್ತಿದ್ದಾಗ ಸೇಠ್ ಹಾಜಿ ಹಬೀಬ್‌ರ ಪ್ರಮಾಣದ ಸಲಹೆಯನ್ನು ಕೇಳಿದೊಡನೆ ನನಗೆ ದಿಗಿಲು ಬಡಿದಂತಾಯಿತು. ಸ್ವಲ್ಪದರಲ್ಲಿಯೇ ಅದರ ಪರಿಣಾಮವೇನಾಗಬಹುದೆಂದು ಯೋಚನೆ ಮಾಡಿದೆ. ನನ್ನ ವಿಸ್ಮಯ ಉತ್ಸಾಹಕ್ಕೆ ಎಡೆಗೊಟ್ಟಿತು. ನಾನು ಸಭೆಗೆ ಹೋದಾಗ ಪ್ರಮಾಣ ತೆಗೆದುಕೊಳ್ಳಬೇಕೆಂದಾಗಲಿ ಅಥವಾ ಇತರರನ್ನು ಪ್ರಮಾಣ ತೆಗೆದುಕೊಳ್ಳಲು ಕೇಳಬೇಕೆಂದಾಗಲಿ ಯೋಚನೆಯೇ ಇಲ್ಲದಿದ್ದರೂ, ಸೇಠರ ಸಲಹೆಯನ್ನು ನಾನು ಮನಃಪೂರ್ವಕವಾಗಿ ಅನುಮೋದಿಸಿದೆ. ಆದರೆ ಪ್ರಮಾಣರ ಅರ್ಥವೇನೆಂಬುದನ್ನೂ ಅದರ ಪರಿಣಾಮ ಏನೇನು ಆಗಬಹುದೆಂಬುದನ್ನೂ ಸಭೆಗೆ ಸಂಪೂರ್ಣವಾಗಿ ವಿವರಿಸ

ಬೇಕಾದ್ದು ಅವಶ್ಯವೆನಿಸಿತು. ಆದಾದ ಮೇಲೂ ಅವರು ಪ್ರಮಾಣ ತೆಗೆದುಕೊಳ್ಳಲು ಸಿದ್ಧರಿದ್ದರೆ, ಆಗ ಅವರನ್ನು ಪ್ರೋತ್ಸಾಹಿಸಬೇಕು. ಇಲ್ಲವಾದರೆ ಕೊನೆಯ ಸತ್ವಪರೀಕ್ಷೆಗೆ ಅವರಿನ್ನೂ ಸಿದ್ಧರಿಲ್ಲೆಂದು ನಾನು ತಿಳಿಯಬೇಕು. ಆದ್ದರಿಂದ ಸೇಠ್ ಹಾಜಿ ಹಬೀಬ್‌ರ ಸಲಹೆಯ ಪೂರ್ಣ ಅರ್ಥವನ್ನು ಸಭೆಗ ವಿವರಿಸಲು ಅಧ್ಯಕ್ಷರ ಅಪ್ಪಣೆಯನ್ನು ಪಡೆದು ಪುನಃ ಭಾಷಣ ಮಾಡಲು ನಿಂತೆ. ಆಗ ನಾನು ಮಾಡಿದ ಭಾಷಣದ ಸಾರಾಂಶವನ್ನು ಜ್ಞಾಪಕದಿಂದ ಈ ಕೆಳಗೆ ಕೊಟ್ಟಿದ್ದೇನೆ :

"ನಾವು ಈಗ ಮಾಡುವ ನಿರ್ಣಯಕ್ಕೂ ಇದುವರೆಗೆ ಮಾಡಿರುವ ಎಲ್ಲ ಇತರ ನಿರ್ಣಯಗಳಿಗೂ ಬಹಳ ವ್ಯತ್ಯಾಸವಿದೆ ಎಂಬುದನ್ನೂ ಅದನ್ನು ಮಾಡುವ ವಿಧಾನದಲ್ಲಿ ದೊಡ್ಡ ಭೇದವಿದೆ ಎಂಬುದನ್ನೂ ಈ ಸಭೆಗೆ ತಿಳಿಸಬಯಸುತ್ತೇನೆ. ದಕ್ಷಿಣ ಆಫ್ರಿಕದಲ್ಲಿ ನಾವು ಇರುವುದು ಬಿಡುವುದು ನಾವು ಈಗ ಮಾಡುವ ನಿರ್ಣಯದ ಪಾಲನೆಯನ್ನು ಅವಲಂಬಿಸಿರುವುದರಿಂದ ಈ ನಿರ್ಣಯ ಬಹಳ ಮಹತ್ವವುಳ್ಳದ್ದು. ನನ್ನ ಸ್ನೇಹಿತರ ಸಲಹೆಯಂತೆ ಆ ನಿರ್ಣಯವನ್ನು ಮಾಡುವ ವಿಧಾನ ಸಹ ನೂತನವೂ ಪವಿತ್ರವೂ ಆಗಿದೆ. ಈ ಸಭೆಗೆ ಬಂದಾಗ ಈ ನಿರ್ಣಯವನ್ನು ಈ ರೀತಿಯಲ್ಲಿ ಅಂಗೀಕರಿಸಬೇಕೆಂಬ ಇಷ್ಟದಿಂದ ಬರಲಿಲ್ಲ; ಅದರ ಕೀರ್ತಿ ಎಲ್ಲವೂ ಸೇಠ್ ಹಾಜಿ ಹಬೀಬ್‌ರವರಿಗೆ ಸೇರಿದ್ದು ಮತ್ತು ಅದರ ಜವಾಬ್ದಾರಿಯ ಹೊರೆಯೂ ಅವರದೇ. ನಾನು ಅವರಿಗೆ ಅಭಿನಂದನೆಗಳನ್ನು ಅರ್ಪಿಸುತ್ತೇನೆ. ಅವರ ಸಲಹೆಯನ್ನು ನಾನು ಹೃತ್ಪೂರ್ವಕವಾಗಿ ಅನುಮೋದಿಸುತ್ತೇನೆ. ನೀವೂ ಅದನ್ನು ಒಪ್ಪುವಿರಾದರೆ ಅವರ ಜವಾಬ್ದಾರಿಯಲ್ಲಿ ನೀವೂ ಭಾಗಿಗಳಾಗುವಿರಿ. ಈ ಜವಾಬ್ದಾರಿ ಏನೆಂಬುದನ್ನು ನೀವು ತಿಳಿದುಕೊಳ್ಳಬೇಕು. ನಮ್ಮ ಜನರ ಸಲಹೆಗಾರನೂ ಸೇವಕನೂ ಆಗಿ ಅದನ್ನು ನಿಮಗೆ ಸಂಪೂರ್ಣ ವಿವರಿಸಬೇಕಾದ್ದು ನನ್ನ ಕರ್ತವ್ಯ.

"ಹಿಂದೂ ಮತ್ತು ಇಸ್ಲಾಮ್ ಧರ್ಮಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಿದ್ದರೂ ನಾವೆಲ್ಲರೂ ನಂಬಿರುವುದು ಒಬ್ಬ ದೇವರನ್ನೇ. ಆ ದೇವರ ಹೆಸರಿನಲ್ಲಿ ಅಥವಾ ಆತನ ಸಾಕ್ಷಿಯಾಗಿ ಭರವಸೆ ಕೊಡು

ವುದೆಂದರೆ ಅಥವಾ ಪ್ರಮಾಣ ಮಾಡುವುದೆಂದರೆ ಹುಡುಗಾಟಿಕೆಯ ಕೆಲಸವಲ್ಲ. ಪ್ರಮಾಣ ವಚನವನ್ನು ಕೊಟ್ಟು ಆ ಪ್ರಮಾಣವನ್ನು ಮುರಿದರೆ ದೇವರ ಮತ್ತು ಮಾನವಧರ್ಮದ ಎದುರಿನಲ್ಲಿ ನಾವು ಅಪರಾಧ ಮಾಡುತ್ತೇವೆ. ಮನಃಪೂರ್ವಕವಾಗಿ ತಿಳಿದೂ ತಿಳಿದು ಪ್ರಮಾಣ ತೆಗೆದುಕೊಂಡು ಅನಂತರ ಭಾಷೆಗೆ ತಪ್ಪುವ ಮನುಷ್ಯನು, ತನ್ನ ಮಾನವತ್ವವನ್ನೇ ಕಳೆದುಕೊಳ್ಳುತ್ತಾನೆಂದು ನನ್ನ ಸ್ವಂತ ಅಭಿಪ್ರಾಯ. ತಾಮ್ರದ ನಾಣ್ಯಕ್ಕೆ ಪಾದರಸವನ್ನು ಉಜ್ಜಿ ಬೆಳ್ಳಿ ನಾಣ್ಯವೆಂದು ನಡಸಲು ಪ್ರಯತ್ನಪಟ್ಟು ಸಿಕ್ಕಿಬಿದ್ದರೆ ನಾಣ್ಯ ನಿರುಪಯೋಗವಾಗಿ, ನಡಸಲು ಪ್ರಯತ್ನಪಟ್ಟವನೂ ಶಿಕ್ಷೆಗೆ ಒಳಗಾಗುವಂತೆ, ಸುಲಭವಾಗಿ ಭಾಷೆ ಕೊಟ್ಟು ಆಮೇಲೆ ಮುರಿಯತಕ್ಕವನು ಅಯೋಗ್ಯನಾಗುತ್ತಾನೆ. ಅಲ್ಲದೆ ಇಹದಲ್ಲಿಯೂ ಪರದಲ್ಲಿಯೂ ಶಿಕ್ಷಾರ್ಹನಾಗುತ್ತಾನೆ. ಸೇಠ್ ಹಾಜಿ ಹಬೀಬ್‌ರು ನಮಗೆ ಹೇಳಿಕೊಡಬೇಕೆಂದಿರುವ ಪ್ರಮಾಣವಚನ ಅಂತಹ ಕಠಿಣ ತರದ್ದು. ನೀವೆಲ್ಲರೂ ಪ್ರಬುದ್ಧ ವಯಸ್ಕರಾಗಿ ಪ್ರಪಂಚವನ್ನು ತಿಳಿದವರಾಗಿದ್ದೀರಿ. ನಿಮ್ಮಲ್ಲಿ ಅನೇಕ ಪ್ರತಿನಿಧಿಗಳು – ಕೆಲವರು ಹೆಚ್ಚಿನ ಪ್ರಮಾಣದಲ್ಲಿ, ಕೆಲವರು ಕಡಮೆ ಪ್ರಮಾಣದಲ್ಲಿ – ನಿಮ್ಮ ನಿಮ್ಮ ಜವಾಬ್ದಾರಿಗಳನ್ನು ನಿರ್ವಹಿಸಿದ್ದೀರಿ. ಆದ್ದರಿಂದ ಇಲ್ಲಿ ಇರುವವರು ಯಾರೂ, ಪ್ರಮಾಣವನ್ನು ತೆಗೆದುಕೊಂಡಾಗ ಏನು ಮಾಡುತ್ತಿದ್ದೆನೆಂಬುದು ಗೊತ್ತಾಗಲಿಲ್ಲವೆಂದು ತಪ್ಪಿಸಿಕೊಳ್ಳುವ ಆಸೆ ಇಟ್ಟುಕೊಳ್ಳುವ ಹಾಗಿಲ್ಲ.

"ವಿಶೇಷ ಸಂದರ್ಭಗಳಲ್ಲಿ ಮಾತ್ರ ಪ್ರಮಾಣಗಳನ್ನೂ ಸಂಕಲ್ಪಗಳನ್ನೂ ತೆಗೆದುಕೊಳ್ಳಬೇಕೆಂದೂ ತೆಗೆದುಕೊಳ್ಳಲಾಗುವುದೆಂದೂ ನನಗೆ ಗೊತ್ತು. ಮಾತು ಮಾತಿಗೆ ಪ್ರಮಾಣ ಮಾಡತಕ್ಕ ಮನುಷ್ಯನು ಮುಗ್ಗರಿಸುವುದೇ ನಿಶ್ಚಯ. ಆದರೆ ದಕ್ಷಿಣ ಆಫ್ರಿಕದ ಭಾರತೀಯರ ಚರಿತ್ರೆಯಲ್ಲಿ ಆ ರೀತಿ ಪ್ರಮಾಣ ತೆಗೆದುಕೊಳ್ಳಲು ಅನಿರ್ವಾಹ ವಿಷಮ ಸಂದರ್ಭ ಈಗ ಬಂದಿದೆಯೆ ಎಂದು ಯೋಚಿಸಿದರೆ, ನಿಜವಾಗಿಯೂ ಈಗ ಅಂತಹ ಸಂದರ್ಭ ಒದಗಿದೆ ಎಂದು ನನ್ನ ಅಭಿಪ್ರಾಯ. ಜವಾಬ್ದಾರಿಯುತವಾದ

ಕೆಲಸವನ್ನು ಕೈಕೊಳ್ಳುವಾಗ ಬಹಳ ಜಾಗರೂಕತೆಯಿಂದ, ಹಿಂದೆ ಮುಂದೆ ಆಲೋಚಿಸಬೇಕಾದ್ದು ಬುದ್ಧಿವಂತಿಕೆಯ ಲಕ್ಷಣ. ಆದರೆ ಯೋಚಿಸುವುದಕ್ಕೂ ಹಿಂದೆಮುಂದೆ ನೋಡುವುದಕ್ಕೂ ಒಂದು ಪರಿಮಿತಿ ಇದೆ. ಆ ಪರಿಮಿತಿಯನ್ನು ಈಗ ನಾವು ಮೀರಿದ್ದೇವೆ. ಮರ್ಯಾದೆಯ ಭಾವನೆ ಎಲ್ಲವನ್ನೂ ಸರಕಾರ ಸಂಪೂರ್ಣವಾಗಿ ತ್ಯಜಿಸಿಬಿಟ್ಟಿದೆ. ಈಗ ನಮ್ಮನ್ನು ಆವರಿಸಿಕೊಂಡಿರುವ ಬೇಗೆಯ ಎದುರಿನಲ್ಲಿ ನಮ್ಮ ಸರ್ವಸ್ವವನ್ನೂ ತ್ಯಾಗ ಮಾಡಲು ಪಣತೊಡದೆ, ಕೈ ಕಟ್ಟಿಕೊಂಡು ನೋಡುತ್ತ ಕುಳಿತರೆ ನಮ್ಮ ಹೇಡಿತನವನ್ನೂ ಅಯೋಗ್ಯತೆಯನ್ನೂ ಬಯಲು ಮಾಡುತ್ತೇವೆ. ಆದ್ದರಿಂದ ಪ್ರಮಾಣ ತೆಗೆದುಕೊಳ್ಳಲು ಇದೇ ಸರಿಯಾದ ಕಾಲ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ನಮ್ಮಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮಲ್ಲಿ ಯೋಚಿಸಿ, ಪ್ರಮಾಣ ತೆಗೆದುಕೊಳ್ಳಲು ಮನೋದಾರ್ಢ್ಯವೂ ಶಕ್ತಿಯೂ ಇದೆಯೇ ಎಂಬುದನ್ನು ನಿರ್ಧರಿಸಬೇಕು. ಈ ಮಾದರಿಯ ನಿರ್ಣಯಗಳನ್ನು ಬಹುಮತ ಪದ್ಧತಿಯಿಂದ ನಿರ್ಧರಿಸಲಾಗದು. ಯಾರು ಪ್ರಮಾಣವಚನ ತೆಗೆದುಕೊಳ್ಳುತ್ತಾರೋ ಅವರು ಮಾತ್ರ ಅದರಿಂದ ಬದ್ಧರು. ಹೊರಗಿನವರ ಮೇಲೆ ಒಂದು ಪರಿಣಾಮವನ್ನುಂಟುಮಾಡಲು ಈ ಪ್ರಮಾಣವಚನವನ್ನು ತೆಗೆದುಕೊಳ್ಳಕೂಡದು. ಸ್ಥಳೀಯ ಸರಕಾರದ ಮೇಲಾಗಲಿ, ಸಾಮ್ರಾಜ್ಯ ಸರಕಾರದ ಮೇಲಾಗಲಿ, ಇಂಡಿಯ ಸರಕಾರದ ಮೇಲಾಗಲಿ ಅದರ ಪರಿಣಾಮ ಏನಾಗುತ್ತದೆ ಎಂಬುದನ್ನು ಯೋಚಿಸಬಾರದು. ಪ್ರತಿಯೊಬ್ಬರೂ ತಮ್ಮ ಹೃದಯವನ್ನು ಶೋಧಿಸಿ, ಬರುವ ಎಲ್ಲ ಕಷ್ಟಗಳನ್ನೂ ಎದುರಿಸಲು ಸಾಕಾದಷ್ಟು ಶಕ್ತಿ ಇದೆ ಎಂದು ಅಂತರಾತ್ಮನು ಪ್ರೇರಣೆ ಮಾಡಿದರೇನೆ ಪ್ರಮಾಣ ತೆಗೆದುಕೊಳ್ಳಬೇಕು ಮತ್ತು ಆಗ ಮಾತ್ರ ಅಂತಹ ಪ್ರಮಾಣ ಫಲಕಾರಿಯಾಗುತ್ತದೆ.

"ಮುಂದಿನ ಪರಿಣಾಮದ ವಿಷಯ ಎರಡು ಮಾತು ಹೇಳುತ್ತೇನೆ. ಭಾರತೀಯರಲ್ಲಿ ಬಹುಮತವು ಶಾಸನವನ್ನು ವಿರೋಧಿಸಲು ಪ್ರತಿಜ್ಞೆ ಮಾಡಿದರೆ ಮತ್ತು ಆ ರೀತಿ ಪ್ರತಿಜ್ಞೆ ಮಾಡಿದವರು ಪ್ರತಿಜ್ಞೆಯನ್ನು ಪಾಲಿಸಿದರೆ ಪ್ರಾಯಶಃ ಈ ಮಸೂದೆ ಶಾಸನವಾಗಲಾರದು. ಒಂದು

ವೇಳೆ ಶಾಸನವಾದರೂ ಅತ್ಯಲ್ಪ ಕಾಲದಲ್ಲಿಯೇ ರದ್ದಾಗಬಹುದು. ನಾವು ಕಷ್ಟಗಳನ್ನು ಅನುಭವಿಸುವ ಪರಿಸ್ಥಿತಿಯೇ ಒದಗಲಾರದು. ಪ್ರಮಾಣ ತೆಗೆದುಕೊಳ್ಳುವವರು ಒಂದೆಡೆ ಬಹಳ ಆಶಾಭರಿತರಾಗಿದ್ದರೂ ಇನ್ನೊಂದೆಡೆ ಎಲ್ಲ ಕಷ್ಟಗಳನ್ನೂ ಎದುರಿಸಲು ಸಿದ್ಧರಿರಬೇಕು. ಆದ್ದರಿಂದ ಈ ಹೋರಾಟದಲ್ಲಿ ನಮಗೆ ಒದಗಿಬರಬಹುದಾದ ಸಂಕಟಗಳನ್ನು ಪೂರ್ವಭಾವಿಯಾಗಿಯೇ ಪರಿಚಯ ಮಾಡಿಕೊಡುತ್ತೇನೆ. ಇಲ್ಲಿ ನಾವು ಸೇರಿರುವ ೩,೦೦೦ ಜನರೂ ಈ ಪ್ರತಿಜ್ಞೆಯನ್ನು ತೆಗೆದುಕೊಂಡೆವೆಂದು ಭಾವಿಸಿರಿ. ಉಳಿದ ೧೦,೦೦೦ ಜನರು ಅಂತಹ ಪ್ರತಿಜ್ಞೆಯನ್ನು ತೆಗೆದುಕೊಳ್ಳಲಿಲ್ಲವೆಂದು ಭಾವಿಸೋಣ. ಪ್ರಾರಂಭದಲ್ಲಿ ಅವರು ನಮ್ಮನ್ನು ನೋಡಿ ಅಪಹಾಸ್ಯ ಮಾಡಬಹುದು. ಅಲ್ಲದೆ ಈಗ ಸಾಕಾದಷ್ಟು ಎಚ್ಚರ ಕೊಟ್ಟಿದ್ದಾಗ್ಯೂ, ಪ್ರತಿಜ್ಞೆ ಮಾಡಿದವರಲ್ಲಿ ಕೆಲವರು ಅಥವಾ ಅನೇಕರು ಮೊದಲನೆಯ ಪರೀಕ್ಷೆಯ ಸಮಯದಲ್ಲಿ ಹಿಂದೇಟು ಹಾಕಬಹುದು. ಅಧಿಕಾರಿಗಳು ನಮ್ಮನ್ನು ಸೆರೆಮನೆಗೆ ಹಾಕಿ ಅವಮಾನಗೊಳಿಸಬಹುದು. ನಮಗೆ ಆಹಾರಕೊಡದೆ ಇರಬಹುದು ಅಥವಾ ಬಿಸಿಲಿನಲ್ಲೋ ಚಳಿಯಲ್ಲೋ ನರಳುವಂತೆ ಮಾಡಬಹುದು. ಕಠಿಣವಾದ ಕೆಲಸಗಳಿಗೆ ನಮ್ಮನ್ನು ಹಾಕಬಹುದು. ಸೆರೆಮನೆಯಲ್ಲಿ ಕ್ರೌರ್ಯದಿಂದ ನಮ್ಮನ್ನು ಬಾರುಕೋಲಿನಿಂದ ಹೊಡೆಯಬಹುದು. ವಿಶೇಷ ಜುಲ್ಮಾನೆಯನ್ನು ವಿಧಿಸಬಹುದು. ಶಾಸನಭಂಗ ಮಾಡುವವರು ಸ್ವಲ್ಪ ಜನರಿದ್ದರೆ ನಮ್ಮ ಆಸ್ತಿಯನ್ನು ಜಪ್ತಿ ಮಾಡಿ ಹರಾಜು ಮಾಡಬಹುದು. ಇಂದು ಧನಿಕರಾಗಿರುವವರು ನಾಳೆ ಭಿಕ್ಷೆ ಬೇಡುವವರಾಗಬಹುದು. ನಮ್ಮನ್ನು ಗಡಿಪಾರು ಮಾಡಬಹುದು. ಸೆರೆಮನೆಯಲ್ಲಿ ನಿರಶನ ಮುಂತಾದ ಕಷ್ಟಗಳನ್ನು ಅನುಭವಿಸಿ ಕೆಲವರು ಕಾಹಿಲೆ ಬಿದ್ದು ಪ್ರಾಣ ಸಹ ಬಿಡಬೇಕಾಗುವ ಸಂದರ್ಭ ಬರಬಹುದು. ಆದ್ದರಿಂದ ನಾವು ಏನೇನು ಕಷ್ಟಗಳನ್ನು ಊಹಿಸಬಹುದೊ ಆ ಎಲ್ಲ ಕಷ್ಟಗಳನ್ನೂ ಅನುಭವಿಸುವ ಸಂಭವ ಬರುವುದಿಲ್ಲವೆಂದು ಹೇಳಲು ಸಾಧ್ಯವಿಲ್ಲ; ಆದರೆ ಆ ಕಷ್ಟಗಳನ್ನೂ,, ಒದಗಿದರೆ ಇನ್ನೂ ಕ್ರೂರವಾದ ಸಂಕಟಗಳನ್ನೂ ಅನುಭವಿಸಲು ಸಿದ್ಧರಿದ್ದೇವೆಂದೇ ನಾವು ಪ್ರತಿಜ್ಞೆಯನ್ನು ತೆಗೆದುಕೊಳ್ಳ

ಬೇಕು. ಈ ಹೋರಾಟ ಎಂದು ಹೇಗೆ ಮುಕ್ತಾಯವಾಗುತ್ತದೆ ಎಂದು ಯಾರಾದರೂ ಕೇಳುವುದಾದರೆ, ಭಾರತೀಯರೆಲ್ಲರೂ ಈ ಪರೀಕ್ಷಾ ಸಮಯದಲ್ಲಿ ಧೀರರಂತೆ ವರ್ತಿಸಿದರೆ ಹೋರಾಟ ಶೀಘ್ರದಲ್ಲಿಯೆ ಕೊನೆ ಮುಟ್ಟುವುದೆಂದು ಹೇಳಬಲ್ಲೆ. ಕಷ್ಟನಷ್ಟಗಳಿಗೆ ಹೆದರಿ ಅನೇಕರು ಹಿಂದೇಟು ಹಾಕಿದರೆ ಹೋರಾಟ ಬಹಳ ದಿನ ನಡೆಯಬೇಕಾಗುತ್ತದೆ. ಆದರೆ ದೃಢಪ್ರತಿಜ್ಞೆಯುಳ್ಳವರು ಬೆಟ್ಟು ಮಡಚುವಷ್ಟು ಅಲ್ಪಸಂಖ್ಯೆಯಲ್ಲಿ ಇದ್ದರೂ ಈ ಹೋರಾಟದಲ್ಲಿ ನಮಗೆ ಜಯಸಿದ್ಧವೆಂದು ಖಚಿತವಾಗಿಯೂ ಧೈರ್ಯವಾಗಿಯೂ ಹೇಳಬಲ್ಲೆ.

"ನನ್ನ ಸ್ವಂತ ಜವಾಬ್ದಾರಿಯ ವಿಷಯವಾಗಿ ಒಂದು ಮಾತು. ಈ ಪ್ರತಿಜ್ಞೆ ತೆಗೆದುಕೊಳ್ಳುವುದರಲ್ಲಿ ಇರುವ ಅಪಾಯಗಳನ್ನು ನಿಮಗೆ ಮುಂಜಾಗರೂಕತೆ ಕೊಟ್ಟೂ, ಈ ಪ್ರತಿಜ್ಞೆಯನ್ನು ನೀವೆಲ್ಲರೂ ತೆಗೆದು ಕೊಳ್ಳಬೇಕೆಂದು ನಾನು ನಿಮ್ಮನ್ನು ಆಹ್ವಾನಿಸುತ್ತಲಿದ್ದೇನೆ; ಮತ್ತು ಈ ಸಂದರ್ಭದಲ್ಲಿ ನನ್ನ ಜವಾಬ್ದಾರಿ ಏನೆಂಬುದನ್ನು ನಾನು ಪೂರ್ಣ ಅರಿತಿದ್ದೇನೆ. ಉತ್ಸಾಹದ ಭರದಲ್ಲಿ ಅಥವಾ ಕೋಪದ ಅವೇಶದಲ್ಲಿ ಇಲ್ಲಿ ನೆರೆದಿರುವವರಲ್ಲಿ ಅನೇಕರು ದೀಕ್ಷೆಯನ್ನು ತೆಗೆದುಕೊಳ್ಳಬಹುದು. ಆದರೆ ಸತ್ವ ಪರೀಕ್ಷೆಯ ಸಮಯ ಒದಗಿದಾಗ ಎದೆಗುಂದಿ ಕೊನೆಯಲ್ಲಿ ನಾಲ್ಕಾರು ಜನರು ಮಾತ್ರ ಉಳಿಯಬಹುದು. ಆ ಸಮಯದಲ್ಲಿ ಸಹ ನನ್ನಂತಹವರಿಗೆ ಉಳಿದಿರುವುದು ಒಂದೇ ಮಾರ್ಗ: ಇಂತಹ ಶಾಸನಕ್ಕೆ ತಲೆಬಾಗುವುದಕ್ಕಿಂತ ಪ್ರಾಣವನ್ನು ಒಪ್ಪಿಸುವುದು. ಎಲ್ಲರೂ ಹೆದರಿ ಹಿಂಜರಿದು ನಾನೊಬ್ಬನೇ ಉಳಿದರೂ– ಪ್ರಾಯಶಃ ಅಸಂಭವವಾದರೂ– ಎಂದಿಗೂ ಪ್ರತಿಜ್ಞಾಭಂಗ ಮಾಡಲಾರನೆಂಬ ನಿಶ್ಚಯ ನನಗೆ ಇದೆ. ನನ್ನನ್ನು ಯಾರೂ ಅಪಾರ್ಥ ಮಾಡಿಕೊಳ್ಳಬೇಡಿ. ನಾನು ಜಂಭದಿಂದ ಹೇಳುತ್ತ ಇಲ್ಲ. ಈ ವೇದಿಕೆಯ ಮೇಲಿರುವ ಮುಖಂಡರುಗಳಾದ ನಿಮಗೆ ಈಗಲೇ ಎಚ್ಚರಕೊಡಬಯಸುತ್ತೇನೆ. ನಿಮಗೆ ಮನೋ ಧೈರ್ಯ ಇಲ್ಲದಿದ್ದರೆ, ಸಂಪೂರ್ಣವಾಗಿ ನಿಮ್ಮನ್ನು ಪ್ರತ್ಯೇಕಿಸಿದಾಗ ದೃಢಮನಸ್ಸಿನಿಂದ ನಿಲ್ಲಲು ನಿಮಗೆ ಶಕ್ತಿ ಇಲ್ಲದಿದ್ದರೆ, ನೀವು ಪ್ರತಿಜ್ಞೆ

ಯನ್ನು ತೆಗೆದುಕೊಳ್ಳಬಾರದೆಂಬುದು ಒಂದೇ ಅಲ್ಲ, ಈ ನಿರ್ಣಯನ್ನು ಸಭೆ ಒಪ್ಪುವ ಮೊದಲು, ಮತ್ತು ಸಭಿಕರು ಪ್ರತಿಜ್ಞೆ ತೆಗೆದು ಕೊಳ್ಳುವ ಮೊದಲು ನೀವು ಅದನ್ನು ವಿರೋಧಿಸಬೇಕು ಮತ್ತು ಆ ನಿರ್ಣಯಕ್ಕೆ ನೀವು ಸಮ್ಮತಿಸಿದ ಕೂಡದು. ನಾವು ಈ ಪ್ರತಿಜ್ಞೆ ಯನ್ನು ಸಾಮೂಹಿಕವಾಗಿ ತೆಗೆದುಕೊಳ್ಳುತ್ತ ಇದ್ದರೂ, ಒಬ್ಬರಾಗಲಿ ಅನೇಕರಾಗಲಿ ಪ್ರತಿಜ್ಞಾಭಂಗ ಮಾಡಿದರೆ ಇತರರ ಜವಾಬ್ದಾರಿ ಮುಗಿಯಿತೆಂದು ಯಾರೂ ಭಾವಿಸಬಾರದು. ಪ್ರತಿಯೊಬ್ಬರೂ ತಮ್ಮ ಜವಾಬ್ದಾರಿಯನ್ನು ಅರಿತುಕೊಳ್ಳಬೇಕು. ಅನಂತರವೇ ಇತರರ ಒತ್ತಾಯವಿಲ್ಲದೆ ಸ್ವತಂತ್ರರಾಗಿ ಪ್ರತಿಜ್ಞೆ ತೆಗೆದುಕೊಳ್ಳಬೇಕು; ಮತ್ತು ಇತರರು ಏನೇ ಮಾಡಲಿ, ಪ್ರಾಣಹೋದರೂ ತಾನು ಮಾತ್ರ ಪ್ರತಿಜ್ಞೆ ಯನ್ನು ಪಾಲಿಸಬೇಕೆಂಬುದನ್ನು ತಿಳಿದುಕೊಳಬೇಕು."

ಈ ರೀತಿ ಮಾತನಾಡಿ ಬಂದು ಕುಳಿತೆ. ಆ ಸಭೆ ನನ್ನ ಭಾಷಣದ ಒಂದೊಂದು ಮಾತನ್ನೂ ನಿಶ್ಯಬ್ದತೆಯಿಂದ ಕೇಳಿತು. ಇತರ ಮುಖಂಡರೂ ಮಾತನಾಡಿದರು. ಎಲ್ಲರೂ ತಮ್ಮ ಮತ್ತು ಸಭೆಯ ಜನಾಬ್ದಾರಿಯನ್ನು ಕುರಿತು ಮಾತನಾಡಿದರು. ಅಧ್ಯಕ್ಷರು ಎದ್ದು ಅವರೂ ಪರಿಸ್ಥಿಯನ್ನು ವಿಶದಗೊಳಿಸಿದರು. ಕೊನೆಯಲ್ಲಿ ಎಲ್ಲರೂ ಎದ್ದು ನಿಂತು ಕೈಗಳನ್ನು ಎತ್ತಿ ಹಿಡಿದು, ದೇವರ ಸಾಕ್ಷಿಯಾಗಿಯೂ ಆ ಮಸೂದೆ ಶಾಸನವಾದರೆ ಯಾರೂ ಅದಕ್ಕೆ ತಲೆಬಾಗ ಬಾರದೆಂದು ಪ್ರತಿಜ್ಞೆಮಾಡಿದರು. ಆ ದೃಶ್ಯ ವನ್ನು ಎಂದಿಗೂ ಮರೆಯಲಾರೆ; ಈಗಲೂ ಆ ಚಿತ್ರ ನನ್ನ ಕಣ್ಣಿಗೆ ಕಟ್ಟಿದಂತಿದೆ. ನಮ್ಮ ಜನರ ಉತ್ಸಾಹಕ್ಕೆ ಮಿತಿಯೇ ಇರಲಿಲ್ಲ. ಮಾರನೆಯ ದಿನವೇ ಆ ನಾಟ್ಯಶಾಲೆಯಲ್ಲಿ ಒಂದು ಅನಾಹುತ ನಡೆದು ನಾಟ್ಯಶಾಲೆ ಸಂಪೂರ್ಣವಾಗಿ ಬೆಂಕಿಯಿಂದ ಭಸ್ಮವಾಯಿತು. ಮೂರನೆಯ ದಿನ ನನ್ನ ಸ್ನೇಹಿತರು ಈ ಬೆಂಕಿಯ ವಿಷಯ ತಿಳಿಸಿ, ಆ ನಾಟ್ಯಶಾಲೆಯ ಗತಿಯೇ ಆ ಮಸೂದೆಗೂ ಆಗುವುದಾಗಿ ಹೇಳಿ ಈ ಶುಭಸೂಚನೆಗೆ ನಮ್ಮ ಜನರನ್ನು ಅಭಿನಂದಿಸಿದರು. ಇಂತಹ ಶಕುನಗಳಲ್ಲಿ ನನಗೆ ಯಾವಾಗಲೂ ನಂಬಿಕೆ ಇಲ್ಲ. ಆದ್ದರಿಂದ ಅದಕ್ಕೆ

ಯಾವ ಬೆಲೆಯನ್ನೂ ಕೊಡಲಿಲ್ಲ. ನಮ್ಮ ಜನರ ಧೈರ್ಯದ ಮತ್ತು ನಂಬಿಕೆಯ ನಿದರ್ಶನಕ್ಕಾಗಿ ಇಲ್ಲಿ ಅದನ್ನು ತಿಳಿಸಿದ್ದೇನೆ. ಮುಂದಿನ ಅಧ್ಯಾಯಗಳಲ್ಲಿ ಈ ಎರಡು ಸದ್ಗುಣಗಳ ನಿದರ್ಶನಗಳು ವಾಚಕರಿಗೆ ಅನೇಕ ದೊರೆಯುತ್ತವೆ.

ಈ ಮಹಾಸಭೆ ಮುಗಿದ ಒಡನೆ ಕೆಲಸಗಾರರು ಸುಮ್ಮನೆ ನಿದ್ರೆ ಮಾಡಲಿಲ್ಲ. ಎಲ್ಲೆಲ್ಲಿಯೂ ಸಭೆಸೇರಿ ಎಲ್ಲ ಸ್ಥಳಗಳಲ್ಲಿ ಪ್ರತಿಜ್ಞೆಗಳನ್ನು ತೆಗೆದುಕೊಂಡರು. 'ಇಂಡಿಯನ್ ಒಪಿನಿಯನ್' ಪತ್ರಿಕೆಯಲ್ಲಿ ನಡೆಯುತ್ತಿದ್ದ ಮುಖ್ಯ ಚರ್ಚೆ ಎಲ್ಲವೂ ಈ ಕರಾಳಶಾಸನದ ವಿಷಯವೇ ಆಗಿತ್ತು.

ಇನ್ನೊಂದೆಡೆಯಲ್ಲಿ ಸ್ಥಳೀಯ ಸರಕಾರವನ್ನು ನೋಡಲು ಕಾರ್ಯಕ್ರಮ ತೆಗೆದುಕೊಂಡೆವು. ವಲಸೆರಾಷ್ಟ್ರ ಮಂತ್ರಿಯಾದ ಡಂಕನ್‌ರನ್ನು ಕಂಡು ಈ ಪ್ರತಿಜ್ಞೆಗಳ ವಿಷಯ ತಿಳಿಸಿದೆವು. ಆ ನಿಯೋಗ ಗೋಷ್ಠಿಯ ಸದಸ್ಯರಾಗಿದ್ದ ಸೇಠ್ ಹಾಜಿ ಹಬೀಬ್‌ರು, "ಯಾವನಾದರೂ ಅಧಿಕಾರಿ ಬಂದು ನನ್ನ ಪತ್ನಿಯ ಬೆರಳು ಗುರುತುಗಳನ್ನು ತೆಗೆದುಕೊಳ್ಳಲು ಪ್ರಯತ್ನಪಟ್ಟರೆ ನಾನು ಸಹಿಸಲಾರೆ. ಅವನನ್ನು ಅಲ್ಲಿಯೇ ಕೊಂದು ನಾನೂ ಪ್ರಾಣ ಬಿಡುತ್ತೇನೆ" ಎಂದರು. ಮಂತ್ರಿ ಸೇಠರ ಮುಖವನ್ನು ಸ್ವಲ್ಪ ದಿಟ್ಟಿಸಿ ನೋಡಿ, "ಸರಕಾರದವರು ಈ ಮಸೂದೆ ಸ್ತ್ರೀಯರಿಗೆ ಎಷ್ಟರಮಟ್ಟಿಗೆ ಅನ್ವಯಿಸಬೇಕೆಂಬುದನ್ನು ಯೋಚಿಸುತ್ತಲಿದ್ದಾರೆ. ಸ್ತ್ರೀಯರಿಗೆ ಅನ್ವಯಿಸುವ ವಿಧಿಗಳನ್ನು ತೆಗೆದುಹಾಕಲಾಗುವುದೆಂದು ಈಗಲೂ ಭರವಸೆ ಕೊಡಬಲ್ಲೆ. ಸರಕಾರದವರು ಈ ವಿಷಯದಲ್ಲಿ ನಿಮ್ಮ ಮನೋಭಾವ ಏನೆಂಬುದನ್ನು ತಿಳಿದಿದ್ದಾರೆ; ಮತ್ತು ಅದನ್ನು ಮಾನ್ಯ ಮಾಡಲು ಇಷ್ಟಪಡುತ್ತಾರೆ. ಆದರೆ ಇತರ ವಿಧಿಗಳ ವಿಷಯದಲ್ಲಿ ಸರಕಾರದವರು ಮನಸ್ಸು ಬದಲಾವಣೆ ಮಾಡಲು ಸಾಧ್ಯವಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ನೀವು ಚೆನ್ನಾಗಿ ಯೋಚನೆ ಮಾಡಿ ಈ ಶಾಸನಕ್ಕೆ ಸಮ್ಮತಿಸಬೇಕೆಂದು ಜನರಲ್ ಬೋಥಾರವರ ಅಭಿಪ್ರಾಯ. ಯೂರೋಪಿಯನರು ಬದುಕಿರಬೇಕಾದರೆ ಸರಕಾರದ

ಅಭಿಪ್ರಾಯದಲ್ಲಿ ಈ ಶಾಸನ ಆವಶ್ಯಕ. ಮಸೂದೆಯ ಉದ್ದೇಶಕ್ಕೆ ಭಂಗ ಬರದಂತೆ ವಿವರಗಳಲ್ಲಿ ನೀವು ಏನು ಬದಲಾವಣೆ ಸೂಚಿಸಿದರೂ ಸರಕಾರದವರು ನಿಜವಾಗಿಯೂ ಅವುಗಳಿಗೆ ಗಮನ ಕೊಡುತ್ತಾರೆ. ಈ ಶಾಸನಕ್ಕೆ ಒಪ್ಪಿ, ವಿಧಿಗಳ ವಿವರಗಳಲ್ಲಿ ಮಾತ್ರ ಬದಲಾವಣೆಗೆ ಪ್ರಯತ್ನ ಪಟ್ಟರೆ ನಿಮ್ಮ ಹಿತರಕ್ಷಣೆಯಾಗುವುದೆಂದು ಈ ನಿಯೋಗಗೋಷ್ಠಿಗೆ ನನ್ನ ಬುದ್ಧಿವಾದ" ಎಂದು ತಿಳಿಸಿದನು. ಆ ಮಂತ್ರಿಯೊಡನೆ ನಡಸಿದ ಚರ್ಚೆಯ ವಿವರಗಳನ್ನು ಇಲ್ಲಿ ತಿಳಿಸಿಲ್ಲ. ಹಿಂದೆಯೇ ಅವುಗಳನ್ನು ತಿಳಿಸಿದ್ದೇನೆ. ವಾದಸರಣಿ ಎಲ್ಲಾ ಒಂದೇ. ಪರಿಭಾಷೆಯಲ್ಲಿ, ಶೈಲಿಯಲ್ಲಿ ಮಾತ್ರ ವ್ಯತ್ಯಾಸ ಕಂಡುಬಂದಿತು. ಸ್ತ್ರೀಯರಿಗೆ ವಿನಾಯಿತಿ ತೋರಿಸಿದ್ದಕ್ಕಾಗಿ ಸರಕಾರವನ್ನು ವಂದಿಸಿ, ಅವರ ಬುದ್ಧಿವಾದಕ್ಕೆ ವಿರೋಧವಾಗಿದ್ದರೂ ಶಾಸನಕ್ಕೆ ಸಮ್ಮತಿಸುವುದು ಸಾಧ್ಯವಿಲ್ಲ ಎಂದು ತಿಳಿಸಿ ನಿಯೋಗಗೋಷ್ಠಿ ಹಿಂದಿರುಗಿತು. ಸ್ತ್ರೀಯರನ್ನು ಶಾಸನದಿಂದ ವಿನಾಯಿಸಿದ್ದು ನಮ್ಮ ಚಳವಳಿಯ ಪ್ರಥಮ ಫಲವೊ, ಕರ್ಟಿಸ್ ವಿಧಿಸಿದ್ದ ಶಾಸ್ತ್ರೀಯಪದ್ಧತಿಗೆ ವಿರೋಧವಾದಾಗ್ಯೂ ವ್ಯವಹಾರ ದೃಷ್ಟಿಯಿಂದ ಸರಕಾರದವರು ತೋರಿಸಿದ ರಿಯಾಯಿತಿಯೋ ಹೇಳಲು ಕಷ್ಟ. ಭಾರತೀಯರು ಚಳವಳಿ ಹೂಡುವುದಕ್ಕೆ ಮುಂಚೆಯೇ ಈ ಶಾಸನ ಸ್ತ್ರೀಯರಿಗೆ ಅನ್ವಯಿಸಲಾಗದೆಂದು ತೀರ್ಮಾನಿಸಿದ್ದುದಾಗಿ ಸರಕಾರದವರು ಹೇಳುತ್ತಿದ್ದರು. ಅದು ಏನೇ ಇರಲಿ, ನಮ್ಮ ಜನರು ತಮ್ಮ ಚಳವಳಿಗೂ ಸ್ತ್ರೀಯರ ವಿನಾಯಿತಿಗೂ ಸಂಬಂಧ ಕಲ್ಪಿಸಿ ಸಮಾಧಾನಗೊಂಡರು. ಅವರ ಹೋರಾಟದ ಚಲವೂ ವೃದ್ಧಿಗೊಂಡಿತು.

ಈ ಚಳವಳಿಗೆ ಏನು ಹೆಸರು ಕೊಡಬೇಕೆಂದು ಯಾರಿಗೂ ತಿಳಿದಿರಲಿಲ್ಲ. ಅದರ ವಿಷಯ ತಿಳಿಸುವಾಗ **ಪ್ಯಾಸಿವ್ ರಸಿಸ್ಟೆನ್ಸ್** ಎಂದು ಕರೆದೆನು. ಇದರಲ್ಲಿ ಯಾವುದೊ ಹೊಸ ತತ್ವ ಮೂಡಿದೆ ಎಂದು ಮಾತ್ರ ತಿಳಿದುಕೊಂಡೆ. ನಮ್ಮ ಹೋರಾಟ ಮುಂದುವರಿದಂತೆ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂಬ ಶಬ್ದದಿಂದ ಸಮಾಧಾನವಾಗಲಿಲ್ಲ; ಅದೂ ಅಲ್ಲದೆ ಈ ಹಿರಿಯ ಹೋರಾಟವನ್ನು ಇಂಗ್ಲಿಷ್ ಹೆಸರಿನಿಂದ ಕರೆಯಲು

ನಾಚಿಕೆಕೇಡೆಂದು ತೋರಿತು. ಅಲ್ಲದೆ ಆ ವಿದೇಶಿ ಹೆಸರು ನಮ್ಮ ಜನರಲ್ಲಿ ಬಳಕೆಗೆ ಬರುವುದೂ ಕಷ್ಟವೆಂದು ತೋರಿತು. ಆದ್ದರಿಂದ ನಮ್ಮ ಹೋರಾಟಕ್ಕೆ ಉಚಿತ ಹೆಸರನ್ನು ಹುಡುಕಿಕೊಟ್ಟವರಿಗೆ ಒಂದು ಸಣ್ಣ ಬಹುಮಾನವನ್ನು ಕೊಡುವುದಾಗಿ 'ಇಂಡಿಯನ್ ಒಪಿನಿಯನ್'ನಲ್ಲಿ ಪ್ರಚುರಪಡಿಸಿದೆವು. ಆಗ ಅನೇಕ ಸಲಹೆಗಳು ಬಂದುವು. ಆ ಹೋರಾಟದ ಅರ್ಥವಿವರಣೆ 'ಇಂಡಿಯನ್ ಒಪಿನಿಯನ್'ನಲ್ಲಿ ತಕ್ಕಷ್ಟು ಚರ್ಚೆಯಾಗಿತ್ತು. ಹಸರನ್ನು ಹುಡುಕತಕ್ಕ ಸ್ಪರ್ಧಿಗಳಲ್ಲಿ ತಕ್ಕಷ್ಟು ವಿಷಯಸಂಗ್ರಹಣೆ ಇತ್ತು. ಅವರಲ್ಲಿ ಒಬ್ಬನಾದ ಮಗನ್‌ಲಾಲ್ ಗಾಂಧಿ 'ಸತ್ಕಾರಣದಲ್ಲಿ ಶ್ರದ್ಧೆ' ಎಂದು **ಸದಾಗ್ರಹ** ಎಂಬುದಾಗಿ ಸಲಹೆ ಕೊಟ್ಟನು. ಆ ಶಬ್ದವೇನೋ ಮೆಚ್ಚುಗೆಯಾಯಿತು, ಆದರೂ ನಾನು ಕೊಡಬೇಕೆಂದಿದ್ದ ಎಲ್ಲ ಅರ್ಥವನ್ನೂ ಅದು ಒಳಗೊಂಡಿರಲಿಲ್ಲ. ಆದ್ದರಿಂದ ಅದನ್ನು **ಸತ್ಯಾಗ್ರಹ** ಎಂದು ತಿದ್ದುಪಡಿ ಮಾಡಿದೆ. ಸತ್ಯ ಎಂದರೆ ಪ್ರೇಮ; ಆಗ್ರಹ ಎಂದರೆ ಶಕ್ತಿಯನ್ನು ಉಂಟುಮಾಡುವುದು, ಶಕ್ತಿಯ ಇನ್ನೊಂದು ರೂಪ. ಆದ್ದರಿಂದ ಭಾರತೀಯ ಚಳವಳಿಯನ್ನು ನಾನು ಸತ್ಯಾಗ್ರಹ ಎಂದು ಕರೆಯಲು ಆರಂಭಿಸಿದೆ. ಅಂದರೆ ಸತ್ಯ ಮತ್ತು ಪ್ರೇಮ ಅಥವಾ ಅಹಿಂಸೆಯಿಂದ ಉತ್ಪನ್ನವಾದ ಶಕ್ತಿ ಎಂದು. ಬಳಿಕ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂಬ ಹೆಸರನ್ನು ತ್ಯಜಿಸಿದೆ. ಇಂಗ್ಲಿಷ್ ಬರೆವಣಿಗೆಗಳಲ್ಲಿ ಸಹ ಸತ್ಯಾಗ್ರಹ ಎಂದಾಗಲಿ ಅಥವಾ ಅದಕ್ಕೆ ಅನುಗುಣವಾದ ಇಂಗ್ಲಿಷ್ ಶಬ್ದಗಳನ್ನಾಗಲಿ ಉಪಯೋಗಿಸುತ್ತಿದ್ದೆವು. ಸತ್ಯಾಗ್ರಹ ಎಂಬ ಹೆಸರಿನ ಚಳವಳಿಗೂ ಮತ್ತು ಆ ಶಬ್ದದ ಹುಟ್ಟಿಗೂ ಇದೇ ಮೂಲ. ನಮ್ಮ ಚರಿತ್ರೆಯನ್ನು ಮುಂದುವರಿಸುವ ಮೊದಲು ಸತ್ಯಾಗ್ರಹಕ್ಕೂ ಪ್ಯಾಸಿವ್ ರೆಸಿಸ್ಟೆನ್ಸ್‌ಗೂ ಇರುವ ವ್ಯತ್ಯಾಸವನ್ನು ತಿಳಿಸುವುದು ಆವಶ್ಯಕ. ಅದೇ ಮುಂದಿನ ಅಧ್ಯಾಯದ ವಿಷಯ.

# ೧೩. ಸತ್ಯಾಗ್ರಹ ಮತ್ತು ಪ್ಯಾಸಿವ್ ರೆಸಿಸ್ಟೆನ್ಸ್

ನಮ್ಮ ಚಳವಳಿ ಮುಂದುವರಿದಂತೆ ಇಂಗ್ಲಿಷ್ ಜನರು ಅದರ ವಿಷಯದಲ್ಲಿ ಹೆಚ್ಚು ಹೆಚ್ಚು ಕುತೂಹಲಿಗಳಾದರು. ಟ್ರಾನ್ಸ್ವಾಲಿನ ಇಂಗ್ಲಿಷ್ ಪತ್ರಿಕೆಗಳು ಸಾಮಾನ್ಯವಾಗಿ ಯೂರೋಪಿಯನರನ್ನೂ ಕರಾಳ ಶಾಸನವನ್ನೂ ಸಮರ್ಥಿಸುತ್ತಿದ್ದರೂ, ಭಾರತೀಯ ಪ್ರಮುಖರು ಬರೆದ ಲೇಖನಗಳನ್ನೂ ಆದರದಿಂದ ಮುದ್ರಿಸುತ್ತಲಿದ್ದರು. ಭಾರತೀಯರು ಸರಕಾರದ ಮುಂದಿಡುತ್ತಿದ್ದ ಬೇಡಿಕೆಗಳನ್ನು ಪೂರ್ತಿಯಾಗಿ ಆಗಲಿ ಅವುಗಳ ಸಂಕ್ಷಿಪ್ತ ವರದಿಗಳನ್ನಾಗಲಿ ಮುದ್ರಿಸುತ್ತಿದ್ದರು. ಭಾರತೀಯರ ಮುಖ್ಯ ಸಭೆಗಳಿಗೆ ತಮ್ಮ ಪ್ರತಿನಿಧಿಗಳನ್ನು ಕಳುಹಿಸುತ್ತಿದ್ದರು. ಇಲ್ಲವಾದರೆ ನಾವು ಅವರಿಗೆ ಕಳುಹಿಸಿದ ಸಂಕ್ಷಿಪ್ತ ವರದಿಗಳಿಗೆ ಎಡೆ ಕೊಡುತ್ತಿದ್ದರು.

ಈ ಸೌಲಭ್ಯ ನಮ್ಮ ಜನರಿಗೆ ಬಹಳ ಸಹಕಾರಿಯಾಗಿತ್ತು. ಕ್ರಮೇಣ ನಮ್ಮ ಚಳವಳಿ ಮುಂದುವರಿದಂತೆ ಕೆಲವು ಯೂರೋಪಿಯನ್ ಮುಖಂಡರು ಅದರಲ್ಲಿ ಆಸಕ್ತಿ ವಹಿಸಲು ಪ್ರಾರಂಭಿಸಿದರು. ಇವರಲ್ಲಿ ಜೋಹನೆಸ್‌ಬರ್ಗ್‌ನ ಕೋಟ್ಯಧೀಶ್ವರರಾದ ಹಾಸ್ಕೆನ್‌ರು ಒಬ್ಬರು. ವರ್ಣಭೇದ ಅವರಲ್ಲಿ ಯಾವಾಗಲೂ ಇರಲಿಲ್ಲ. ಆದರೆ ಸತ್ಯಾಗ್ರಹ ಪ್ರಾರಂಭವಾದ ಮೇಲೆ ಭಾರತೀಯರ ಸಮಸ್ಯೆಯಲ್ಲಿ ಅವರ ಆಸಕ್ತಿ ಹೆಚ್ಚಿತು. ಜೋಹನೆಸ್‌ಬರ್ಗ್‌ನ ಬಡಾವಣೆಯಾದ ಜೆರ್ಮಿಸ್ಟನ್‌ನ ಯೂರೋಪಿಯನರು ನನ್ನ ಭಾಷಣ ಕೇಳಬೇಕೆಂದು ಇಷ್ಟಪಟ್ಟು ಒಂದು ಸಭೆ ಸೇರಿಸಿದರು ; ಆ ಸಭೆಗೆ ನನ್ನನ್ನೂ ನಮ್ಮ ಚಳವಳಿಯನ್ನೂ ಪರಿಚಯ ಮಾಡಿಕೊಡುತ್ತ ಹಾಸ್ಕೆನ್‌ರು ಈ ರೀತಿ ಹೇಳಿದರು :

"ಬೇರೆ ಯಾವ ಮಾರ್ಗವಾಗಿಯೂ ಪರಿಹಾರ ದೊರೆಯದ ಕಾರಣ ಟ್ರಾನ್ಸ್ವಾಲ್ ಭಾರತೀಯರು 'ಪ್ಯಾಸಿವ್ ರೆಸಿಸ್ಟೆನ್ಸ್' ಪ್ರಾರಂಭಿಸಿದ್ದಾರೆ. ಅವರಿಗೆ ವೋಟಿನ ಹಕ್ಕು ಇಲ್ಲ. ಅವರ ಸಂಖ್ಯಾಬಲ ಅಲ್ಪ.

ಅವರು ಶಸ್ತ್ರವಿಲ್ಲದ ದುರ್ಬಲರು. ಆದ್ದರಿಂದ ದುರ್ಬಲರಿಗೆ ಇರುವ ಒಂದೇ ಅಸ್ತ್ರ 'ಪ್ಯಾಸಿವ್ ರೆಸಿಸ್ಟೆನ್ಸ್'; ಅದನ್ನು ಈಗ ಅವರು ಅವಲಂಬಿಸಿದ್ದಾರೆ". ಈ ಅಭಿಪ್ರಾಯಗಳನ್ನು ಕೇಳಿ ನನಗೆ ಆಶ್ಚರ್ಯವಾಯಿತು. ಅದರ ಪರಿಣಾಮವಾಗಿ ನಾನು ಮಾಡಬೇಕೆಂದಿದ್ದ ಭಾಷಣದ ಬಣ್ಣವೇ ಬದಲಾವಣೆಯಾಯಿತು. ಹಾಸ್ಕಿನ್‌ರ ಅಭಿಪ್ರಾಯವನ್ನು ಖಂಡಿಸುತ್ತ ನಮ್ಮ ಪ್ಯಾಸಿವ್ ರೆಸಿಸ್ಟೆನ್ಸನ್ನು ನಾನು **ಆತ್ಮಬಲ** ಎಂದು ವಿವರಿಸಿದೆ. 'ಪ್ಯಾಸಿವ್ ರೆಸಿಸ್ಟೆನ್ಸ್' ಎಂದು ಉಪಯೋಗಿಸಿದರೆ ವಿಶೇಷ ಅಪಾರ್ಥಕ್ಕೆ ಎಡೆಗೊಟ್ಟಂತಾಗುವುದೆಂದು ಆ ಸಭೆಯಲ್ಲಿ ತಿಳಿದುಕೊಂಡೆ. 'ಪ್ಯಾಸಿವ್ ರೆಸಿಸ್ಟೆನ್ಸ್'ಗೂ ಸತ್ಯಾಗ್ರಹಕ್ಕೂ ಇರುವ ವ್ಯತ್ಯಾಸವನ್ನು ಸ್ಪಷ್ಟಪಡಿಸಲು ಆ ಸಭೆಯ ಮುಂದೆ ನಾನು ಮಾಡಿದ ಭಾಷಣವನ್ನೇ ಸ್ವಲ್ಪ ತಿದ್ದುಪಡಿಮಾಡಿ ಇಲ್ಲಿ ಹೇಳುತ್ತೇನೆ.

ಇಂಗ್ಲಿಷಿನಲ್ಲಿ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂದು ಯಾರು ಯಾವಾಗ ಉಪಯೋಗಿಸಿದರು ಎಂಬುದು ನನಗೆ ತಿಳಿಯದು. ಆದರೆ ಇಂಗ್ಲಿಷರಲ್ಲಿ ಯಾವುದಾದರೂ ಅಲ್ಪಸಂಖ್ಯಾತ ಪಂಗಡದವರಿಗೆ ಒಂದು ಶಾಸನ ಅಸಹನೀಯವಾದರೆ ಅವರು ದಂಗೆ ಏಳುವ ಬದಲು ಶಾಸನ ಭಂಗಮಾಡಿ ಅಂತಹ ಶಾಸನಭಂಗದ ಪರಿಣಾಮವಾಗಿ ಬರುವ ಶಿಕ್ಷೆಗಳನ್ನು ಅನುಭವಿಸುವ ವಿರೋಧ ಭಾವನೆಯನ್ನು ತಾಳುತ್ತಿದ್ದರು. ಕೆಲವು ವರ್ಷಗಳ ಹಿಂದೆ ಬ್ರಿಟಿಷ್ ಪಾರ್ಲಿಮೆಂಟು ವಿದ್ಯಾಶಾಸನವನ್ನು (ಎಜ್ಯುಕೇಷನ್ ಆಕ್ಟ್) ಶಾಸನ ಕಡತಕ್ಕೆ ಸೇರಿಸಿದಾಗ ನಾನ್‌ಕನ್‌ಫಾರ್ಮಿಸ್ಟ್‌ಗಳು ಡಾಕ್ಟರ್ ಕ್ಲಿಫರ್ಡ್‌ರ ನೇತೃತ್ವದಲ್ಲಿ ಶಾಸನವನ್ನು ವಿರೋಧಿಸಿದರು. ವೋಟಿನ ಹಕ್ಕಿಗಾಗಿ ಇಂಗ್ಲಿಷ್ ಮಹಿಳೆಯರು ನಡಸಿದ ಚಳವಳಿಯನ್ನು ಪ್ಯಾಸಿವ್ ರೆಸಿಸ್ಟೆನ್ಸ್ ಎಂದು ಕರೆಯುತ್ತಿದ್ದರು. ಈ ಎರಡು ನಿದರ್ಶನಗಳನ್ನು ತಮ್ಮ ಮನಸ್ಸಿನಲ್ಲಿಟ್ಟುಕೊಂಡು ಹಾಸ್ಕಿನ್‌ರು ನಮ್ಮ ಚಳವಳಿಯನ್ನು ದುರ್ಬಲರ ಅಥವಾ ವೋಟು ಇಲ್ಲದವರ ಚಳವಳಿ ಎಂದರು. ಡಾಕ್ಟರ್ ಕ್ಲಿಫರ್ಡ್‌ರಿಗೂ ಅವರ ಸ್ನೇಹಿತರಿಗೂ ವೋಟಿನ ಹಕ್ಕು ಇತ್ತು, ಆದರೆ ಪಾರ್ಲಿಮೆಂಟಿನಲ್ಲಿ ಅಲ್ಪಸಂಖ್ಯಾತರಾಗಿದ್ದ ಕಾರಣ ವಿದ್ಯಾಶಾಸನ

ವನ್ನು ಎದುರಿಸಲು ಸಾಧ್ಯವಾಗಲಿಲ್ಲ. ಅಂದರೆ ಅವರ ಸಂಖ್ಯಾ ಬಲ ಕಡಮೆ ಇತ್ತು. ಅವರು ಧ್ಯೇಯಸಾಧನೆಗೆ ಶಸ್ತ್ರಗಳನ್ನು ಉಪಯೋಗಿಸ ಲಾಗದೆಂದಲ್ಲ. ಆದರೆ ಉಪಯೋಗಿಸಿದ್ದರೆ ಗೆಲ್ಲುವ ಆಸೆ ಏನೂ ಇರಲಿಲ್ಲ. ಅಲ್ಲದೆ ಸುವ್ಯವಸ್ಥಿತ ರಾಷ್ಟ್ರದಲ್ಲಿ ಜನತೆ ತನ್ನ ಬೇಡಿಕೆಗಳನ್ನು ಸಾಧಿಸಿ ಕೊಳ್ಳಲು ಪದೇ ಪದೇ ಶಸ್ತ್ರಗಳನ್ನು ಉಪಯೋಗಿಸುತ್ತ ಹೋದರೆ, ಅದರ ಉದ್ದಿಶ್ಯವೇ ಹಾಳಾಗುತ್ತದೆ. ಅದೂ ಅಲ್ಲದೆ ಶಸ್ತ್ರಗಳನ್ನು ಉಪಯೋಗಿ ಸುವುದು ವ್ಯವಹಾರ ದೃಷ್ಟಿಯಿಂದ ಶಕ್ಯವಿದ್ದರೂ, ಸಾಮಾನ್ಯವಾಗಿ ಕೆಲವು ನಾನ್‌ಕನ್‌ಫಾರ್ಮಿಸ್ಟ್‌ಗಳಿಗೆ ಶಸ್ತ್ರಗಳಿಗೆ ಶರಣುಹೋಗಲು ಇಷ್ಟ ವಿರಲಿಲ್ಲ. ಮಹಿಳೆಯರಿಗೆ ವೋಟಿನ ಹಕ್ಕು ಇರಲಿಲ್ಲ. ಜನಬಾಹುಳ್ಯ ದೇಹಶಕ್ತಿಗಳಲ್ಲೂ ಅವರ ಬಲ ಕಡಮೆಯಾಗಿತ್ತು. ಆದ್ದರಿಂದ ಅವರ ನಿದರ್ಶನವೂ ಹಾಸ್ಕಿನ್‌ರ ಅಭಿಪ್ರಾಯಕ್ಕೆ ಮೆರಗು ಕೊಟ್ಟಿತು. ಮಹಿಳೆ ಯರು ಸಹ ಹಿಂಸಾತ್ಮಕ ಬಲವನ್ನು ಉಪಯೋಗಿಸಕೂಡದೆಂದು ತೀರ್ಮಾನಿಸಿರಲಿಲ್ಲ. ಕೆಲವರು ಮನೆಗಳಿಗೆ ಬೆಂಕಿ ಹಚ್ಚಿ ಗಂಡಸರ ಮೇಲೆ ಕೈಸಹ ಮಾಡಿದರು. ಯಾರನ್ನಾದರೂ ಕೊಲ್ಲಬೇಕೆಂದು ಅವರ ಇಷ್ಟವೆಂದು ನಾನು ನಂಬಲಾರೆ. ಆದರೆ ಅವಕಾಶ ದೊರೆತರೆ ಏಟು ಗಳನ್ನು ಬಿಗಿಯಬೇಕೆಂದೂ ಆ ಮೂಲಕ ಉಗ್ರಪರಿಸ್ಥಿತಿಯನ್ನುಂಟು ಮಾಡಬೇಕೆಂದೂ ಅವರ ಆಶಯವಿತ್ತೆಂದು ತೋರುತ್ತದೆ.

ಆದರೆ ಭಾರತೀಯ ಚಳವಳಿಯಲ್ಲಿ ಪಾಶವೀಬಲಕ್ಕೆ ಯಾವ ಸಂದರ್ಭದಲ್ಲೂ ಅವಕಾಶವಿಲ್ಲ. ಅದೂ ಅಲ್ಲದೆ ನಾವು ಎಷ್ಟೇ ಕಷ್ಟದಲ್ಲಿ ಸಿಕ್ಕಿರಲಿ, ಸತ್ಯಾಗ್ರಹಿಗಳು ಯಾವ ಸಂದರ್ಭದಲ್ಲಿಯೂ ಸಹ ಪಶುಬಲ ವನ್ನು ಉಪಯೋಗಿಸಲಿಲ್ಲವೆಂದೂ ಬಲಪ್ರಯೋಗವನ್ನು ಪರಿಣಾಮಕಾರಿ ಯಾಗಿ ಉಪಯೋಗಿಸಬಹುದಾದ ಸಂದರ್ಭಗಳಲ್ಲಿ ಸಹ ಬಲಪ್ರಯೋಗ ಮಾಡಲಿಲ್ಲವೆಂದೂ ಮುಂದೆ ಗೊತ್ತಾಗುತ್ತದೆ. ಅಲ್ಲದೆ ಭಾರತೀಯರು ದುರ್ಬಲರಾಗಿ ವೋಟು ಇಲ್ಲದವರಾಗಿದ್ದರೂ ಅದಾವುದೂ ಸತ್ಯಾಗ್ರಹ ಚಳವಳಿಗೆ ಕಾರಣವಾಗಿರಲಿಲ್ಲ. ಆದರೆ ಭಾರತೀಯರಿಗೆ ವೋಟಿನ ಹಕ್ಕೂ ಶಸ್ತ್ರಾಸ್ತ್ರಗಳೂ ಇದ್ದಿದ್ದರೆ ಸತ್ಯಾಗ್ರಹವನ್ನು ಅವಲಂಬಿಸುತ್ತಿದ್ದ

ರಿಂದಲ್ಲ; ಅವರಿಗೆ ವೋಟಿನ ಹಕ್ಕು ಇದ್ದಿದ್ದರೆ ಪ್ರಾಯಶಃ ಸತ್ಯಾಗ್ರಹಕ್ಕೆ ಅವಕಾಶವೇ ಇರುತ್ತಿರಲಿಲ್ಲ. ಅವರಲ್ಲಿ ಶಸ್ತ್ರಾಸ್ತ್ರಗಳಿದ್ದರೆ ಅವರನ್ನು ಎದುರು ಹಾಕಿಕೊಳ್ಳುವ ಮುಂಚೆಯೇ ವಿರೋಧ ಪಕ್ಷದವರು ಸಹ ಯೋಚನೆಮಾಡುತ್ತಿದ್ದರು. ಆದ್ದರಿಂದ ಶಸ್ತ್ರಾಸ್ತ್ರವಿರುವವರು ಸತ್ಯಾಗ್ರಹ ಹೂಡುವ ಅವಕಾಶ ಕಡಮೆ. ಭಾರತೀಯ ಚಳವಳಿಯ ವಿಷಯ ಯೋಚಿಸಿದಾಗ, ಶಸ್ತ್ರ ಸಹಾಯದಿಂದ ವಿರೋಧಿಸುವ ಪ್ರಸಕ್ತಿಯ ವಿಷಯವೇ ಯೋಚನೆಗೆ ಬರಲಿಲ್ಲವೆಂದು ಖಂಡಿತ ಹೇಳಬಲ್ಲೆ. ಸುಲಭದಲ್ಲಿ 'ಸತ್ಯಾಗ್ರಹ' ಎಂದರೆ ಆತ್ಮಶಕ್ತಿ. ಎಲ್ಲಿ, ಎಷ್ಟರವರೆಗೆ ಶಸ್ತ್ರಗಳಿಗೆ, ದೇಹಶಕ್ತಿಗೆ ಅಥವಾ ಪಾಶವೀ ಬಲಪ್ರಯೋಗಕ್ಕೆ ಅವಕಾಶವಿದೆಯೊ ಅಲ್ಲಿ, ಅಷ್ಟರಮಟ್ಟಿಗೆ ಆತ್ಮಶಕ್ತಿ ಕಡಮೆಯಾಗುತ್ತದೆ. ನನ್ನ ಅಭಿಪ್ರಾಯದಲ್ಲಿ ಇವು ಎರಡೂ ಪರಸ್ಪರ ವಿರೋಧ ಶಕ್ತಿಗಳು ಅಲ್ಲದೆ ನಾನು ಸತ್ಯಾಗ್ರಹವನ್ನು ಪ್ರಾರಂಭಿಸಿದಾಗಲೂ ನನಗೆ ಅವುಗಳ ವಿರೋಧಪ್ರಕೃತಿ ಪೂರ್ಣ ಮನವರಿಕೆಯಾಗಿತ್ತು.

ಈ ಅಭಿಪ್ರಾಯಗಳು ತಪ್ಪೇ ಸರಿಯೇ ಎಂಬುದನ್ನು ಇಲ್ಲಿ ವಿಮರ್ಶೆ ಮಾಡುವುದು ಬೇಡ. 'ಪ್ಯಾಸಿವ್ ರೆಸಿಸ್ಟೆನ್ಸ್' ಮತ್ತು 'ಸತ್ಯಾಗ್ರಹ'ಕ್ಕೆ ಇರುವ ಭೇದವನ್ನು ತಿಳಿಯುವುದು ಮಾತ್ರ ನಮ್ಮ ಕೆಲಸ, ಅವೆರಡಕ್ಕೂ ಅಪಾರ ವ್ಯತ್ಯಾಸವಿದೆ ಎಂಬುದನ್ನು ನಾವು ತಿಳಿದಿದ್ದೇವೆ. ಇದನ್ನು ಅರ್ಥಮಾಡಿಕೊಳ್ಳದೆ 'ಪ್ಯಾಸಿವ್ ರೆಸಿಸ್ಟರ್ಸ್', ಸತ್ಯಾಗ್ರಹಿಗಳು ಎಂದು ಕರೆದುಕೊಳ್ಳುವವರು ಇಬ್ಬರೂ ಒಂದೇ ಎಂದು ಭಾವಿಸಿದರೆ ಇಬ್ಬರಿಗೂ ಪರಸ್ಪರ ಅನ್ಯಾಯಮಾಡಿ ದುಷ್ಪರಿಣಾಮಕ್ಕೆ ಎಡೆಮಾಡಿದಂತಾಗುತ್ತದೆ. ದಕ್ಷಿಣ ಆಫ್ರಿಕದಲ್ಲಿ ನಾವು 'ಪ್ಯಾಸಿವ್ ರೆಸಿಸ್ಟೆನ್ಸ್' ಎಂಬ ಶಬ್ದವನ್ನು ಉಪಯೋಗಿಸಿದ್ದರ ಫಲವಾಗಿ, ಜನರು ನಮಗೆ ವೋಟಿನ ಚಳವಳಿ ನಡಸಿದ ಇಂಗ್ಲಿಷ್ ಮಹಿಳೆಯರ ಧೈರ್ಯ ಸ್ವಾರ್ಥತ್ಯಾಗಗಳನ್ನು ಆರೋಪಿಸುವ ಬದಲು ಆಸ್ತಿ ಪ್ರಾಣಗಳಿಗೆ ಕಂಟಕರೆಂದು ಭಾವಿಸಲು ಪ್ರಾರಂಭಿಸಿದರು; ಹಾಸ್ಕೆನ್‌ರಂಥ ಭಾರತೀಯ ಸ್ನೇಹಿತರು ಸಹ ನಮ್ಮನ್ನು ಶಕ್ತಿಹೀನರೆಂದು ಅಪಾರ್ಥಮಾಡಿದರು. ನಮ್ಮ ನಂಬಿಕೆ

ಮಾಡಬೇಕೆಂದೂ ಅಂತಹ ಕಾರ್ಯದಲ್ಲಿ ಏನು ತೊಂದರೆ ಬಂದರೂ ಎದುರಿಸಲು ಸಿದ್ಧರಿರಬೇಕೆಂದೂ ಭಾವನೆ ಇದೆ; ಆದರೆ ಸತ್ಯಾಗ್ರಹದಲ್ಲಿ ಎದುರಾಳಿಗೆ ಕೆಡುಕುಮಾಡುವ ಭಾವನೆಯೇ ಇಲ್ಲ. ತಾನಾಗಿ ಯಾತನೆ ಅನುಭವಿಸುತ್ತ ಆತ್ಮತ್ಯಾಗದಿಂದ ಎದುರಾಳಿಯನ್ನು ಗೆಲ್ಲುವುದೇ ಸತ್ಯಾಗ್ರಹದ ಮೂಲತತ್ವ.

ಈ ಎರಡು ಶಕ್ತಿಗಳಿಗೆ ಇರುವ ವ್ಯತ್ಯಾಸಗಳ್ಗೆ ಇವು. ಆದರೆ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂಬ ಹೆಸರಿನಲ್ಲಿ ನಡೆಯುವ ಎಲ್ಲ ಚಳವಳಿಗಳಲ್ಲಿ ಈ ಎಲ್ಲ ಗುಣ ಅಥವಾ ದೋಷಗಳನ್ನೂ ನೋಡಬಹುದೆಂದು ನಾನು ಹೇಳುವುದಿಲ್ಲ. 'ಪ್ಯಾಸಿವ್ ರೆಸಿಸ್ಟೆನ್ಸ್'ನ ಅನೇಕ ನಿದರ್ಶನಗಳಲ್ಲಿ ಈ ದೋಷಗಳು ಕಂಡು ಬಂದಿವೆ ಎಂದು ತೋರಿಸಿಕೊಡಬಹುದು. ಏಸುಕ್ರಿಸ್ತನನ್ನು 'ಪ್ಯಾಸಿವ್ ರೆಸಿಸ್ಟರು'ಗಳಿಗೆ ಶಿರೋಮಣಿಪ್ರಾಯನೆಂದು ಹೊಗಳಿದ್ದಾರೆ; ಆದರೆ ಈ ಸಂದರ್ಭದಲ್ಲಿ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂದರೆ ಒಂದೇ ಅರ್ಥ – ಸತ್ಯಾಗ್ರಹ. ಆ ಅರ್ಥದಲ್ಲಿ 'ಪ್ಯಾಸಿವ್ ರೆಸಿಸ್ಟೆನ್ಸ್'ಗಳು ಚರಿತ್ರೆಯಲ್ಲಿ ಅನೇಕ ಇವೆ. ಟಾಲ್‌ಸ್ಟಾಯಿಯವರು ಹೇಳಿರುವ ರಷ್ಯಾದೇಶದ ಡೂಕೊಬಾರ್‌ಗಳ ನಿದರ್ಶನ ಒಂದು. ಕ್ರೈಸ್ತಧರ್ಮದ ಮುಂಬೆಳಗಿನಲ್ಲಿ ಕ್ರೂರ ದಬ್ಬಾಳಿಕೆಯನ್ನು ಸಹಿಸಿದ ಸಾವಿರಾರು ಕ್ರೈಸ್ತಧರ್ಮ ವೀರರುಗಳ ಬಲಿದಾನವನ್ನು 'ಪ್ಯಾಸಿವ್ ರೆಸಿಸ್ಟೆನ್ಸ್' ಎಂದು ಕರೆದಿಲ್ಲ. ಅವರನ್ನು ನಾನು ಸತ್ಯಾಗ್ರಹಿಗಳೆಂದು ಕರೆಯುತ್ತೇನೆ. ಅವರ ನಡತೆಯನ್ನು 'ಪ್ಯಾಸಿವ್ ರೆಸಿಸ್ಟೆನ್ಸ್' ಎಂದು ಕರೆದರೆ ಆಗ 'ಪ್ಯಾಸಿವ್ ರೆಸಿಸ್ಟೆನ್ಸ್' ಸತ್ಯಾಗ್ರಹವಾಗುತ್ತದೆ. ಇಂಗ್ಲಿಷ್‌ನಲ್ಲಿ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂಬುದಕ್ಕೆ ಜನರು ಕೊಡುವ ಅರ್ಥಕ್ಕೂ ಸತ್ಯಾಗ್ರಹಕ್ಕೂ ಭೇದವಿದೆ ಎಂಬುದನ್ನು ತೋರಿಸುವುದೇ ಈ ಅಧ್ಯಾಯದಲ್ಲಿ ನನ್ನ ಗುರಿಯಾಗಿದೆ.

'ಪ್ಯಾಸಿವ್ ರೆಸಿಸ್ಟೆನ್ಸ್'ನ ಲಕ್ಷಣಗಳನ್ನು ವಿಮರ್ಶಿಸುವಾಗ, ಅದನ್ನು ಅವಲಂಬಿಸಿದ ಜನರಿಗೆ ಅನ್ಯಾಯ ಮಾಡಬಾರದೆಂಬುದನ್ನು

ಮಾಡಬೇಕೆಂದೂ ಅಂತಹ ಕಾರ್ಯದಲ್ಲಿ ಏನು ತೊಂದರೆ ಬಂದರೂ ಎದುರಿಸಲು ಸಿದ್ಧರಿರಬೇಕೆಂದೂ ಭಾವನೆ ಇದೆ; ಆದರೆ ಸತ್ಯಾಗ್ರಹದಲ್ಲಿ ಎದುರಾಳಿಗೆ ಕೆಡುಕುಮಾಡುವ ಭಾವನೆಯೇ ಇಲ್ಲ. ತಾನಾಗಿ ಯಾತನೆ ಅನುಭವಿಸುತ್ತ ಆತ್ಮತ್ಯಾಗದಿಂದ ಎದುರಾಳಿಯನ್ನು ಗೆಲ್ಲುವುದೇ ಸತ್ಯಾಗ್ರಹದ ಮೂಲತತ್ವ.

ಈ ಎರಡು ಶಕ್ತಿಗಳಿಗೆ ಇರುವ ವ್ಯತ್ಯಾಸಗಳಿ ಇವು. ಆದರೆ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂಬ ಹೆಸರಿನಲ್ಲಿ ನಡೆಯುವ ಎಲ್ಲ ಚಳವಳಿಗಳಲ್ಲಿ ಈ ಎಲ್ಲ ಗುಣ ಅಥವಾ ದೋಷಗಳನ್ನೂ ನೋಡಬಹುದೆಂದು ನಾನು ಹೇಳುವುದಿಲ್ಲ. 'ಪ್ಯಾಸಿವ್ ರೆಸಿಸ್ಟೆನ್ಸ್'ನ ಅನೇಕ ನಿದರ್ಶನಗಳಲ್ಲಿ ಈ ದೋಷಗಳು ಕಂಡು ಬಂದಿವೆ ಎಂದು ತೋರಿಸಿಕೊಡಬಹುದು. ಏಸುಕ್ರಿಸ್ತನನ್ನು 'ಪ್ಯಾಸಿವ್ ರೆಸಿಸ್ಟರು'ಗಳಿಗೆ ಕಿರೀಟಪ್ರಾಯನೆಂದು ಹೊಗಳಿದ್ದಾರೆ; ಆದರೆ ಈ ಸಂದರ್ಭದಲ್ಲಿ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂದರೆ ಒಂದೇ ಅರ್ಥ – ಸತ್ಯಾಗ್ರಹ. ಆ ಅರ್ಥದಲ್ಲಿ 'ಪ್ಯಾಸಿವ್ ರೆಸಿಸ್ಟೆನ್ಸ್'ಗಳು ಚರಿತ್ರೆಯಲ್ಲಿ ಅನೇಕ ಇವೆ. ಟಾಲ್‌ಸ್ಟಾಯಿಯವರು ಹೇಳಿರುವ ರಷ್ಯಾದೇಶದ ಡೂಕೊಬಾರ್‌ಗಳ ನಿದರ್ಶನ ಒಂದು. ಕ್ರೈಸ್ತ ಧರ್ಮದ ಮುಂಬೆಳಗಿನಲ್ಲಿ ಕ್ರೂರ ದಬ್ಬಾಳಿಕೆಯನ್ನು ಸಹಿಸಿದ ಸಾವಿರಾರು ಕ್ರೈಸ್ತಧರ್ಮ ಭೀರುಗಳ ಬಲಿದಾನವನ್ನು 'ಪ್ಯಾಸಿವ್ ರೆಸಿಸ್ಟೆನ್ಸ್' ಎಂದು ಕರೆದಿಲ್ಲ. ಅವರನ್ನು ನಾನು ಸತ್ಯಾಗ್ರಹಿಗಳೆಂದು ಕರೆಯುತ್ತೇನೆ. ಅವರ ನಡತೆಯನ್ನು 'ಪ್ಯಾಸಿವ್ ರೆಸಿಸ್ಟೆಸ್ಸ್' ಎಂದು ಕರೆದರೆ ಆಗ 'ಪ್ಯಾಸಿವ್ ರೆಸಿಸ್ಟೆನ್ಸ್' ಸತ್ಯಾಗ್ರಹವಾಗುತ್ತದೆ. ಇಂಗ್ಲಿಷ್‌ನಲ್ಲಿ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂಬುದಕ್ಕೆ ಜನರು ಕೊಡುವ ಅರ್ಥಕ್ಕೂ ಸತ್ಯಾಗ್ರಹಕ್ಕೂ ಭೇದವಿದೆ ಎಂಬುದನ್ನು ತೋರಿಸುವುದೇ ಈ ಅಧ್ಯಾಯದಲ್ಲಿ ನನ್ನ ಗುರಿಯಾಗಿದೆ.

'ಪ್ಯಾಸಿವ್ ರೆಸಿಸ್ಟೆನ್ಸ್'ನ ಲಕ್ಷಣಗಳನ್ನು ವಿಮರ್ಶಿಸುವಾಗ, ಅದನ್ನು ಅವಲಂಬಿಸಿದ ಜನರಿಗೆ ಅನ್ಯಾಯ ಮಾಡಬಾರದೆಂಬುದನ್ನು

ನಾವು ಎಚ್ಚರದಿಂದ ಗಮನಿಸಬೇಕು. ಅದೂ ಅಲ್ಲದೆ ನಾನು ವಿವರಿಸಿರುವಂತೆ ಸತ್ಯಾಗ್ರಹದ ಲಕ್ಷಣಗಳೆಲ್ಲ ಸತ್ಯಾಗ್ರಹಿಗಳೆಂದು ಹೇಳಿಕೊಳ್ಳುವ ಜನರಲ್ಲಿವೆ ಎಂದು ನನ್ನ ಅಭಿಪ್ರಾಯವಲ್ಲ. ಸತ್ಯಾಗ್ರಹಿಗಳೆಂದು ಹೇಳಿಕೊಳ್ಳುವ ಅನೇಕರು ಮೇಲೆ ವಿವರಿಸಿದ ಸತ್ಯಾಗ್ರಹದ ಮೂಲ ತತ್ವಗಳಿಗೆ ತೀರ ಅಪರಿಚಿತರೆಂದು ನನಗೆ ತಿಳಿದಿಲ್ಲವೆಂದಲ್ಲ. ಅನೇಕರು ಸತ್ಯಾಗ್ರಹ ಕೈಲಾಗದವರ ಯುಕ್ತಿ ಎನ್ನುತ್ತಾರೆ. ಇನ್ನು ಕೆಲವರು ಶಸ್ತ್ರಸಜ್ಜಿತ ದಂಗೆಗೆ ಇದು ಪೂರ್ವಸಿದ್ಧತೆ ಎನ್ನುತ್ತಾರೆ. ಸತ್ಯಾಗ್ರಹಿಗಳು ಇರುವ ಸ್ಥಿತಿಯನ್ನು ವಿವರಿಸುವುದು ನನ್ನ ಉದ್ದೇಶವಲ್ಲ. ಆದರೆ ಸತ್ಯಾಗ್ರಹದ ಅಂತರಾರ್ಥವನ್ನೂ, ಸತ್ಯಾಗ್ರಹಿ ತನ್ನ ಬದುಕಿನಲ್ಲಿ ತೋರಬೇಕಾದ ನಿಜವಾದ ಲಕ್ಷಣಗಳನ್ನೂ ವಿವರಿಸುವುದೇ ನನ್ನ ಉದ್ದೇಶವೆಂದು ಪುನಃ ತಿಳಿಸುತ್ತೇನೆ.

ಒಂದು ಮಾತಿನಲ್ಲಿ ಹೇಳುವುದಾದರೆ, ಭಾರತೀಯರ ಚಳವಳಿಯ ಸ್ವರೂಪ ತಿಳಿಸುವುದಕ್ಕೂ, ಸಾಮಾನ್ಯವಾಗಿ 'ಪ್ಯಾಸಿವ್ ರೆಸಿಸ್ಟೆನ್ಸ್' ಎಂದು ಕರೆಯುತ್ತಿದ್ದ ಚಳವಳಿಯೆ ಇದು ಎಂದು ಜನರು ಅಪಾರ್ಥ ಮಾಡದಿರುವುದಕ್ಕೂ ಒಂದು ಹೊಸ ಶಬ್ದವನ್ನು ಹುಡುಕಬೇಕಾಗಿತ್ತು. ಆ ಶಬ್ದಕ್ಕೆ ಆಗ ವಿವಿಧ ದೃಷ್ಟಿಯಿಂದ ಯಾವ ಯಾವ ಅರ್ಥವನ್ನು ಕೊಡಲಾಗುತ್ತಿತ್ತು ಎಂಬುದನ್ನು ಈ ಅಧ್ಯಾಯದಲ್ಲಿ ತೋರಿಸಲು ಪ್ರಯತ್ನಪಟ್ಟಿದ್ದೇನೆ.

